

# ಕಸ್ತೂರಿ

**ಕನ್ನಡ ಡೈಜೆಸ್ಟ್**


**ಲೋಕ ಶಿಕ್ಷಣ ಟ್ರಸ್ಟಿನ ಹೆಮ್ಮೆಯ ಕಾಣಿಕೆ**

ವ್ಯವಸ್ಥಾಪಕ ಸಂಪಾದಕ:
**ಕೆ. ಶಾಮರಾವ್**

ಸಂಪಾದಕ:
**ಎನ್.ವಿ. ಜೋಶಿ**

ಸಹಸಂಪಾದಕ:
**ವೆಂಕಟನಾರಾಯಣ**

ನಿರ್ವಹಣೆ:
**ಗೋಪಾಲ ವಾಜಪೇಯಿ**
**ಶ್ರೀಕಾಂತ ಮಳಗಿ**

ಕಲೆ:
**ಪಿ.ಆರ್. ಪಾಟೀಲ**
**ಎಂ.ಎಸ್. ಶಶಿಧರ**

ಮುಖಪುಟ ಚಿತ್ರ:
'ಕಸ್ತೂರಿ'ಯ ಸಂಗ್ರಹದಿಂದ

*

ಕೊನೆಯ ರಕ್ಷಾಪುಟ
ಛಾಯಾಚಿತ್ರ:
ಸಾಲಿಗ್ರಾಮ ನರಹರಿ ಶೆಣೈ

**ಕಸ್ತೂರಿ ಕಾರ್ಯಾಲಯ,**
**ಕೊಪ್ಪೀಕರ ರಸ್ತೆ,**
**ಹುಬ್ಬಳ್ಳಿ-೫೮೦ ೦೨೦.**


**ನಾವಾಡುವ ಮಾತು ಹೀಗಿರಲಿ ಗೆಳೆಯ**
**ಮೃದುವಚನ ಮೂಲೋಕ ಗೆಲ್ಲುವುದು ತಿಳಿಯ...**

ವ್ಯಾವಹಾರಿಕ ಲೋಕದ ಮಂದಿಗೆ ಅತಿಯಾಗಿ ರುಚಿಸುವ ಈ ನುಡಿ ಮೂಡಿ ಬಂದದ್ದು, ಆ ಲೋಕದಿಂದ ತೀರ ದೂರವಿದ್ದುಕೊಂಡು, ಸಮಗ್ರ ಮಾನವ ಸಮಾಜದ ಲೇಸನೇ ಬಯಸುವ, 'ಅಜಾತ ಶತ್ರು', 'ಎಲ್ಲಿಯೂ ಸಲ್ಲುವ ಕವಿ' ಎನಿಸಿಕೊಂಡ ಕಣವಿಯವರ ತುಟಿಯಂಚಿನಿಂದಲ್ಲ, ಹೃದಯದಾಳದಿಂದ. ಗಂಟಲಿಂದೀಚೆಗೆ ಮಾತ್ರ ನಲ್ಮಾತುಗಳನ್ನು ನೆಗೆಸುವ ಸೋಗಲಾಡಿತನ ಗೊತ್ತಿಲ್ಲದ ಕಣವಿಯವರು ಕನ್ನಡ ಸಾಹಿತ್ಯ ಲೋಕದ ಶಾಂತ ಕಣಿವೆಯ ಹಾಗೆ. ಅಲ್ಲಿಯ ಮೌನ, ಅಲ್ಲಿಯ ಸೌಂದರ್ಯ, ಕೇಳಬಲ್ಲ ಕಿವಿಗಳಿದ್ದವರಿಗೆ ಅರಿಯಬಲ್ಲ ಮನಸ್ಸಿದ್ದವರಿಗೆ ಮಾತ್ರ ಅನುಭವಕ್ಕೆ ಬರುವ ಅಲ್ಲಿಯ ಗುಂಜಾರವಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ.

ಹಾಸನದಲ್ಲಿ ನಡೆಯಲಿರುವ ೬೪ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ನಿಯೋಜಿತರಾಗಿರುವ ಚನ್ನವೀರ ಕಣವಿ ಧಾರವಾಡಕ್ಕೆ ಮತ್ತೆ ಆ ಗೌರವ ಸಿಗಲು ಕಾರಣರಾಗಿದ್ದಾರೆ. ''ಕಾವ್ಯ ಸೃಷ್ಟಿಯ ಉದ್ದೇಶ ಮಾನವನ ಸಮಗ್ರ ಉತ್ಥಾನ'' ಎಂಬ ನಂಬಿಕೆಯ ಕಣವಿಯವರು ''ಸತ್ವಯುತ ಕಾವ್ಯ ಸೃಷ್ಟಿಯಾಗುವುದು ಮಾನವತೆಯ ಉಳಿವಿಗೆ ಅವಶ್ಯ'' ಎಂದು ಪ್ರತಿಪಾದಿಸುವವರು.

'ಸಮನ್ವಯ ಕವಿ' ಎಂದೇ ಹೆಸರಾದ ಕಣವಿಯವರು ''ಸಮನ್ವಯತೆ ಇಲ್ಲದವನು ಕವಿ ಹೇಗಾದನು?'' ಎಂಬ ಪ್ರಶ್ನೆಯ ಮೂಲಕ ಆ ಪಂಥವನ್ನು ಉಡಾಫೆ ಮಾಡುವವರಿಗೆ ಸರಿಯಾದ ಉತ್ತರವನ್ನೂ ಕೊಟ್ಟಿದ್ದಾರೆ. ಹೊಂಬಳವೆಂಬ ಹಳ್ಳಿಯಿಂದ 'ಚೆಂಬೆಳಕು'ವರೆಗೂ ಅವರು ಸಾಗಿಬಂದ ದಾರಿ ಒಂದು ರೀತಿಯಲ್ಲಿ ಬೆಳಕನ್ನರಸುವ ಯಾತ್ರೆ. ನಿರಾಡಂಬರವಾದ ಆದರೆ ನಿಖರವಾದ ಬದುಕು-ಬರವಣಿಗೆ ನಡೆಸಿ ಕನ್ನಡಿಗರಿಗೆಲ್ಲ ಅವರು 'ದೀಪಧಾರಿ'ಯಂತೆ, 'ಆಕಾಶಬುಟ್ಟಿ'ಯಂತೆ, 'ಜೀವಧ್ವನಿ'ಯಂತೆ ನಿಂತಿದ್ದಾರೆ.

ಕಣವಿಯವರ ಲಕ್ಷ್ಯ ಅಲೌಕಿಕವೆನಿಸಿದರೂ ಲೌಕಿಕವಾದುದೆ. ಮನುಷ್ಯಕುಲ ಸಾಗಬೇಕಾದ ಗುರಿ ಯಾವುದೆಂಬುದನ್ನು ಸಾರುವ ಅವರ ಕವನವೊಂದರ ಈ ಸಾಲುಗಳೇ ಅದಕ್ಕೆ ಸಾಕ್ಷಿ.

**ಹೂವು ಹೊರಳುವವು ಸೂರ್ಯನ ಕಡೆಗೆ**
**ನಮ್ಮ ದಾರಿ ಬರಿ ಚಂದ್ರನವರೆಗೆ...**

ನಾವು ಹೂವಾಗೋಣ.

**• ವ್ಯವಸ್ಥಾಪಕ ಸಂಪಾದಕ**



# ಸಹಚಿಂತನ

## ತುಂಬಿದ ಕೊಡ

ಖ್ಯಾತ ವೈದ್ಯ, ಸಂಶೋಧಕ ಡಾ. ನಾಗಲೋಟಿಮಠ ಅವರನ್ನು ಕುರಿತಂತೆ ಅನಿಲ ಬೆಟಗೇರಿ ಬರೆದ ಲೇಖನ (ಏಪ್ರಿಲ್ ೯೬) ತುಂಬ ಆತ್ಮೀಯ. ಅದನ್ನು ಓದುತ್ತಿದ್ದಂತೆ ನನಗೆ ಮೊನ್ನೆ ಮೊನ್ನೆ ೧೯೯೫ರ ಡಿಸೆಂಬರ್ ತಿಂಗಳಿನಲ್ಲಿ ಚಾಮರಾಜನಗರದಲ್ಲಿನ ಒಂದು ಘಟನೆ ನೆನಪಿಗೆ ಬಂತು. ಆಗ ಅಲ್ಲೊಂದು ವೈದ್ಯಕೀಯ ತಪಾಸಣಾ ಶಿಬಿರ. ಡಾ. ನಾಗಲೋಟಿಮಠ ಅವರದೇ ನೇತೃತ್ವ. ಆಗ ನನಗೆ ಡಾ. ಸ.ಜ.ನಾ. ಅವರ ಸರಳತೆ, ಸಜ್ಜನಿಕೆಯ ಪರಿಚಯವಾಯಿತು. ಚಿಕ್ಕವರಿರಲಿ, ದೊಡ್ಡವರಿರಲಿ ಎಲ್ಲರನ್ನು ಆತ್ಮೀಯತೆಯಿಂದ ಮಾತಾಡಿಸುತ್ತ ಥಟ್ಟನೆ ಅವರೊಂದಿಗೆ ಹೊಂದಿಕೊಂಡು ಬಿಡುವ ಈ ವ್ಯಕ್ತಿಯನ್ನು ನೋಡಿ 'ತುಂಬಿದ ಕೊಡ ತುಳುಕುವುದಿಲ್ಲ'ವೆಂಬ ಗಾದೆ ಇಂಥವರನ್ನು ಕಂಡೇ ಕಟ್ಟಿದ್ದು ಎನ್ನಿಸಿತು. ಡಾ. ನಾಗಲೋಟಿಮಠ ಅವರ ಕುರಿತು ಪ್ರಕಟಿಸಿ 'ಕಸ್ತೂರಿ' ಖಂಡಿತ ತನ್ನ ಮಟ್ಟವನ್ನು ಹೆಚ್ಚಿಸಿಕೊಂಡಿದೆ.

*ಎಸ್. ಲಕ್ಷ್ಮೀನರಸಿಂಹ, ಚಾಮರಾಜನಗರ,*
*ಶಂಕರಗೌಡ ಆರ್. ಪಾಟೀಲ, ರೋಣ*

ಡಾ. ನಾಗಲೋಟಿಮಠರ ಬಗೆಗಿನ ಲೇಖನ (ಕಸ್ತೂರಿ, ಏಪ್ರಿಲ್ ೯೬) ಓದಿ ನಾನು ರೋಮಾಂಚನಗೊಂಡೆ. ಕಳೆದ ವರ್ಷ, ಕೇರಳಾಂತರ್ಗತವಾಗಿರುವ ಕಾಸರಗೋಡಿನಲ್ಲಿ ಐಎಂಎಯ ಈ ವಿಭಾಗದ ಬೃಹತ್ ಸಮ್ಮೇಳನ ನಡೆಯಿತು. ಇದರ ಮುಖ್ಯ ಕಾರ್ಯನಿರ್ವಾಹಕರಲ್ಲೊಬ್ಬ ನನ್ನ ಮಗ ಡಾ. ಎಸ್.ಆರ್. ನರಹರಿ. ಈತನ ಪತ್ನಿ ಡಾ. ಕೆ.ಎಸ್. ಪ್ರಸನ್ನಾ ಬೆಳಗಾಂವಿಯ ಜೆಎನ್‌ಎಂಸಿಯಲ್ಲಿ ಡಾ. ನಾಗಲೋಟಿಮಠರ ಶಿಷ್ಯೆ. ನನ್ನ ಸೊಸೆಯ ಕೈಯಿಂದಲೇ ಡಾ. ನಾಗಲೋಟಿಮಠರಿಗೆ ಸಮ್ಮೇಳನದ ನೆನಪಿನ-ಕಾಣಿಕೆಯನ್ನು ಕೊಡಿಸಲಾಯಿತು. ಅದುವರೆಗೂ ಅವರೊಬ್ಬ ಕೇವಲ ವೈದ್ಯಕೀಯ ಪ್ರಾಧ್ಯಾಪಕರೆಂದು ಮಾತ್ರ ತಿಳಿದುಕೊಂಡಿದ್ದ ನನಗೆ ಈ ಲೇಖನ ಡಾ. ನಾಗಲೋಟಿಮಠರ ಕುರಿತು ಎಷ್ಟೆಲ್ಲಾ ವಿವರ ನೀಡಿತು!

*ಸರವು ರಾಮಭಟ್ಟ, ವಿಟ್ಲಪಡ್ನೂರು*

## ಸರ್ಪಸಂಗಿನಿ

'ಕಸ್ತೂರಿ' ಏಪ್ರಿಲ್ ೯೬ರ ಸಂಚಿಕೆಯಲ್ಲಿ ಪ್ರಕಟವಾದ ಪುನರ್ಜನ್ಮದ ಸತ್ಯಕಥೆ 'ಸರ್ಪಸಂಗಿನಿ' ಮೈನವಿರೇಳುವಂತೆ ಮಾಡಿತು. ಅದನ್ನೋದಿದ ರಾತ್ರಿ ಪೂರ್ತಿ ಭೀತಿಯಿಂದ ತಲ್ಲಣಿಸಿದೆ. 'ಪುನರ್ಜನ್ಮ'ದ ನೆನಪನ್ನು ಸೃಷ್ಟಿಕರ್ತ ನಮಗೆ ಕೊಡದಿದ್ದರೇ ವಾಸಿ ಏನೋ.

*'ತರಂಗಿಣಿ', ತುಮಕೂರು*

'ಸರ್ಪಸಂಗಿನಿ' ಆಶ್ಚರ್ಯಾತಿರೇಕದಿಂದ ನನ್ನನ್ನು ವಿಭ್ರಮಗೊಳಿಸಿತು.

*ಶೋಭಾ ಹಳಬೆ, ಬೆಂಗಳೂರು*

ಕೀರೋ ಜೀವನ ಪ್ರಸಂಗಗಳಲ್ಲಿ ಒಂದಾದ 'ಸರ್ಪಸಂಗಿನಿ'ಯನ್ನು ಓದಿ ದಂಗಾದೆ. ಆದರೆ ಮುಖಪುಟದಲ್ಲಿ ಪ್ರಕಟವಾದ ಹೆಬ್ಬಾವಿನೊಂದಿಗಿನ ಹುಡುಗಿಗೂ ದೊರೊಥಿಗೂ ಏನು ಸಂಬಂಧ? ತಿಳಿಯಲಿಲ್ಲ.

*ಈಶ್ವರ ಪ್ರಸಾದ್, ದಾವಣಗೆರೆ*

(ಈ ಲೇಖನವನ್ನು ಮೆಚ್ಚಿ ನಿತ್ಯ ಪತ್ರಗಳ ಸುರಿಮಳೆಯಾಗುತ್ತಿದೆ. ಅಂದ ಹಾಗೆ ಮುಖಪುಟದ ಸರ್ಪಸಂಗಿನಿ ರಶಿಯದ ಒಬ್ಬ ಸರ್ಕಸ್ ಸುಂದರಿ. **-ಸಂಪಾದಕ)**

## ಆಪದ್ಬಾಂಧವರು

ಏಪ್ರಿಲ್ ೯೬ರ ಸಂಚಿಕೆಯ ಪುಸ್ತಕ ವಿಭಾಗದಲ್ಲಿ ಪ್ರಕಟವಾದ 'ಆಕಾಶದಲ್ಲಿ ಆಪದ್ಬಾಂಧವರು' ಓದುತ್ತ ಹೋದಂತೆಲ್ಲ ರೋಮಾಂಚನದ ಜತೆ ಹೆಮ್ಮೆಯನ್ನು ಉಂಟು ಮಾಡಿತು. ಕೆಲವು ಸಂದರ್ಭಗಳಲ್ಲಂತೂ ಹೃದಯದ ಬಡಿತವನ್ನೂ ಹೆಚ್ಚಿಸಿತು. ಆ ಇಬ್ಬರು ಆಪದ್ಬಾಂಧವರ ಛಲ ಹಾಗೂ ಜೀವ ರಕ್ಷಕ ಕಾರ್ಯಗಳ ಪರಿಚಯವೇನೋ ಆಯಿತು. ಆದರೆ ಇಂಥ ಇನ್ನೂ ಅನೇಕ 'ಅಪದ್ಬಾಂಧವರು' ಇರಬಹುದಲ್ಲ. ಅವರನ್ನೂ 'ಕಸ್ತೂರಿ'ಯಲ್ಲಿ ಭೇಟಮಾಡಿಸಿ.

*ಲಿಂಗರಾಜ ಹೊಸಮನಿ, ತಾಳಿಕೋಟೆ*

ನೀವೇನೇ ಹೇಳಿ, ಈ ಇಬ್ಬರು ಆಪದ್ಬಾಂಧವರನ್ನು ನಮಗೆ ಪರಿಚಯಿಸಿ ಇನ್ನಷ್ಟು ನಿರಾಸೆಗೊಳಿಸಿದಿರಿ. ಯಾಕೆ ಗೊತ್ತೆ? ಮಹೇಶ್ವರ ದತ್‌ರ ಭಾವಚಿತ್ರವನ್ನೇ ನೀವು ಜತೆಗೆ ಪ್ರಕಟಿಸಲಿಲ್ಲವಲ್ಲ!

## 'ಮನಾ'

ಶೋಭಾ ಹಳಬೆಯವರು ಬರೆದ ಅನುಭವ 'ಮನಾ' (ಕಸ್ತೂರಿ ಏಪ್ರಿಲ್ ೯೬) ಓದಿದಾಗ ಆ ಪ್ರಾಣಿಯ ಬುದ್ಧಿಚಾತುರ್ಯದ ಕುರಿತು ಅಚ್ಚರಿಪಟ್ಟೆ. ಪ್ರಾಣಿಗಳು ಪ್ರತಿಕ್ರಿಯೆಯ ರೂಪವಾಗಿ ಕ್ರಿಯೆಗೆ ತೊಡಗುತ್ತವೆ ಎಂಬ ಪ್ರಾಣಿ ಶಾಸ್ತ್ರಜ್ಞರ ಮಾತು ನಿಜವೆನಿಸಿತು. "ಮನಾನಿಂದ ಹೊಸಮನೆಗೆ ಶುಭವಲ್ಲ"ವೆಂಬ ಮಾತು ಕೇಳಿಸಿಕೊಂಡು ಅರ್ಥೈಸಿಕೊಂಡುದರಿಂದಲೇ ಅದು ಸಲ್ಲೇಖನ ವ್ರತ ಹಿಡಿದು ಜನ್ಮನೀಗಿಸಿಕೊಂಡಿರಬೇಕು. ಕೊನೆಕೊನೆಗಂತೂ ನಾನು ಅಕ್ಷರಶಃ ಅತ್ತು 'ಕಸ್ತೂರಿ'ಯನ್ನು ದೂರ ಸರಿಸಿಟ್ಟುಬಿಟ್ಟೆ.

*ಅರುಣ ಕುಲಕರ್ಣಿ, ಮುತನಾಳ*

ಈ ಲೇಖನ ಮನಕಲಕುವಂಥದ್ದು. ಆದರೆ, ಪುಟ ೫೧ರಲ್ಲಿ ಬೆಕ್ಕಿನ ಪಕ್ಕದಲ್ಲಿ ದಪ್ಪಕ್ಷರಗಳಲ್ಲಿ "ಮುಂದೆಲ್ಲ ಮನಾ ಮನಸ್ಸಿನ ರಾಣಿಯಾದದ್ದು ಯಾವ ಜನ್ಮದ ಋಣವೊ" ಎಂದಿದೆ; ೫೬ನೆಯ ಪುಟದಲ್ಲಿ "ಒಂದು ವರ್ಷದ ಗಂಡುಬೆಕ್ಕು ಅದೇನು ಮರಿಯಲ್ಲ ಈಗ" ಎಂಬ ವಾಕ್ಯವಿದೆ. ಇದು ನನ್ನನ್ನು ಗೊಂದಲಕ್ಕೀಡುಮಾಡಿತು.

*ಲತಾ ಸರದೇಶಪಾಂಡೆ, ಹುಬ್ಬಳ್ಳಿ*

ಶೋಭಾ ಹಳಬೆಯವರು 'ಮನಾ' ಬಗ್ಗೆ ಬರೆದುದನ್ನು ಓದಿದಾಗ ನನಗೆ ನಮ್ಮ 'ಚಿನ್ನು'ವಿನ ನೆನಪು ಬಂತು. ಇಬ್ಬರ ಅನುಭವಗಳೂ ಒಂದೇ ತೆರ. ಈಗ ಅವರ 'ಮನಾ' ಮತ್ತು ನಮ್ಮ 'ಚಿನ್ನು' ಎರಡೂ ಇಲ್ಲ. ಅವುಗಳ ನೆನಪು ಮರುಕಳಿಸುವಂತೆ ಮಾಡಿದ್ದಕ್ಕಾಗಿ ಧನ್ಯವಾದಗಳು.

*ಅನಸೂಯಾ ಶಿಡಲಿ, ಬೆಂಗಳೂರು*

## ಭಯ

ಎಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾದ ಎನ್.ಡಿ. ಶಾಂತಕುಮಾರ್ ಅನುವಾದಿಸಿದ ಆ್ಯಂಥನಿ ಸ್ಟಾರ್ ಬರೆದ 'ಭಯ' ಲೇಖನ ಮಾಹಿತಿಪೂರ್ಣವಾಗಿತ್ತು. ಮನುಷ್ಯ ವರ್ಗವೂ ಸೇರಿದಂತೆ ಪ್ರಾಣಿಗಳ ಪ್ರಪಂಚದಲ್ಲಿ 'ಭಯ' ಎಂಬುದು ಅತ್ಯಂತ ಜರೂರಾದ ಸ್ಥಿತಿ. ಅದನ್ನು ಸಂಪೂರ್ಣವಾಗಿ ನಿವಾರಿಸಬಹುದೆಂಬುದು ಅವಾಸ್ತವಿಕವೆಂಬುದನ್ನು ಸೋದಾಹರಣವಾಗಿ ಈ ಲೇಖನದಲ್ಲಿ ವಿವರಿಸಲಾಗಿದೆ. ಇಂಥ ಲೇಖನಗಳು 'ಕಸ್ತೂರಿ'ಯ ಮೌಲಿಕತೆಯನ್ನು ಇಮ್ಮಡಿಗೊಳಿಸುತ್ತವೆ.

*ರೂಪಾ ಮರಿಗೇರಿ, ಬೆಳಗಾಂವಿ*

## ಜ್ಞಾನೇಶ್ವರರು...

ಎಪ್ರಿಲ್ ೯೬ರ 'ಕಸ್ತೂರಿ'ಯಲ್ಲಿ ಡಾ. ಶ್ರೀನಿವಾಸ ಹಾವನೂರರ 'ಕನ್ನಡದಲ್ಲಿ ಜ್ಞಾನೇಶ್ವರರು' ಎಂಬ ಲೇಖನವನ್ನು ಓದಿದೆ. ಜ್ಞಾನೇಶ್ವರಿಯನ್ನು ಕನ್ನಡಕ್ಕೆ ಪರಿಚಯಿಸಿಕೊಟ್ಟ ರಾಘವೇಂದ್ರ ಸುಬ್ಬರಾವ್ ಮೂಡಕಟ್ಟಿ ಹಾಗೂ ಇನ್ನಿತರರ ಸಾಧನೆಯನ್ನು ಓದಿದೆ. ಅಂದ ಹಾಗೆ ಸದ್ಯ ಬೆಳಗಾಂವಿಯಲ್ಲಿರುವ ರಂ.ಶಾ. ಲೋಕಾಪುರ ಅವರು ಈ ವಿಷಯದಲ್ಲಿ ಮಹತ್ವದ ವ್ಯಕ್ತಿ ಎಂದೇ ಹೇಳಬೇಕು. ಮರಾಠಿ ವಿದ್ವಾಂಸರನ್ನೂ ಯೋಚಿಸ ಹಚ್ಚುವಂತೆ ಅವರು ಬರೆದ 'ಜ್ಞಾನೇಶ್ವರೀ ಕಾಲೀನ ಮರಾಠಿ ಭಾಷೇವರ ಕನ್ನಡ ಚಾ ಪ್ರಭಾವ' ಎಂಬ ಸಂಶೋಧನ ಕೃತಿಯನ್ನು ಮರಾಠಿ ಭಾಷೆಯಲ್ಲಿಯೇ ಬರೆದ ರಂ.ಶಾ. ಅವರು ಅದರದೇ ಕನ್ನಡ ರೂಪಾಂತರ 'ಹಳಗನ್ನಡ ಮತ್ತು ಮರಾಠಿ' ಎಂಬ ಕೃತಿಯನ್ನೂ ನಮಗಿತ್ತಿದ್ದು ಅದು ಹಂಪಿ ಕನ್ನಡ ವಿಶ್ವವಿದ್ಯಾಲಯ

ಆರನೆಯ ಪುಟಕ್ಕೆ

# ಕಸ್ತೂರಿ

## ಅಂತರಂಗ





## ಸೋಜಿಗದ ಸಂತೆ

★ ★

ಸ್ಥಿರ ಶೀರ್ಷಿಕೆಗಳು



## ಬೆಳಕಿಂಡಿ

*ಕಿವುಡತನ ತಪ್ಪೀತೆ ರನ್ನ ಕುಂಡಲದಿಂದ*

• ಡಿವಿಜಿ

*ಸತ್ಕಾರ್ಯದಿಂದ ಸೌಖ್ಯ; ದುಷ್ಕಾರ್ಯದಿಂದ ದುಃಖ.*

• ಮಹಾಭಾರತ

*ಬಡವ ರೊಟ್ಟಿ ಹುಡುಕುತ್ತಾನೆ; ಶ್ರೀಮಂತ ಹಸಿವನ್ನು ಹುಡುಕುತ್ತಾನೆ.*

• ಡೆನ್‌ಮಾರ್ಕಿನ ಗಾದೆ

*ಹಣದ ಪ್ರಪಂಚದಲ್ಲಿ ಎಲ್ಲಾ ಜಾತಿಯೂ ಒಂದೇ.*

• ವಾಲ್ಟೇರ್

*ನಿಮ್ಮನ್ನು ಎಷ್ಟು ಶ್ರೀಮಂತರನ್ನಾಗಿ ಮಾಡುತ್ತೇವೆಂದು ಹಣ ಕಾಸಿನ ಸಲಹೆಗಾರರು ಹೇಳುತ್ತಾರೋ ಅಷ್ಟು ಶ್ರೀಮಂತರು ಸ್ವತಃ ತಾವೇ ಆಗಿರುವುದಿಲ್ಲವೇಕೆ?*

• ಡಗ್ ಲಾರ್ಸನ್

*ರಹಸ್ಯವನ್ನು ಕಾಪಾಡಿಕೊಳ್ಳುವುದು ಜಾಣತನ. ಆದರೆ ಇತರರೂ ಹಾಗೆ ಮಾಡುತ್ತಾರೆಂದು ಭಾವಿಸುವುದು ಮೂರ್ಖತನ.*

• ಆಲಿವರ್ ವೆಂಡೆಲ್ ಹೋಮ್ಸ್

*ಜೀವನದ ಗುರಿ, ಸ್ವಾಂತಃ ಸುಖಾಯ, ಬಹುಜನ ಹಿತಾಯ, ಸತತ ಸ್ವಾಧ್ಯಾಯ.*

• ಕೌಮುದಿ ಮಿತ್ರ

## ಪುಸ್ತಕ ವಿಭಾಗ

ನಿರ್ವಂಶ

ಪ್ರೊ. ಜಿ.ಎ. ಕುಲಕರ್ಣಿಯವರ

ನೀಳ್ಗತೆ

ಅನುವಾದ: ಚಂದ್ರಕಾಂತ ಪೋಕಳೆ



## ಆರೋಗ್ಯದಂಗಳ

# ಲಸಿಕಾ ಲೋಕ

• ಡಾ. ಡಿ.ಕೆ. ಮಹಾಬಲರಾಜು

ಮೂರನೆಯ ಪುಟದಿಂದ

ದಿಂದ ಪ್ರಕಟಗೊಂಡಿದೆ. ನಮ್ಮ ವಿಶ್ವವಿದ್ಯಾಲಯಗಳು ಮತ್ತು ಸರಕಾರ ಇಂಥವರ ಸೇವೆ ಪಡೆದು ಭಾಷಾ ಅಧ್ಯಯನಕ್ಕೆ ಅಪೂರ್ವ ಕಾಣಿಕೆ ಸಲ್ಲಿಸಲು ಮುಂದಾಗಬೇಕು.

*ಕೆ.ಎಸ್. ಕುಲಕರ್ಣಿ, ಶಿರೋಳ*

ಈ ಲೇಖನದಲ್ಲಿ ''ಇದು ದ.ಕ. ಜಿಲ್ಲೆಯ ಒಬ್ಬ ಚಿತ್ಪಾವನರಲ್ಲಿ ಕಾಣಸಿಕ್ಕೀತು'' ಎಂಬ ಉಲ್ಲೇಖವಿದೆ. ಅದು ಸರಿ. ಆದರೆ ಇದರೊಡನೆ ಅವರ ಹೆಸರನ್ನೂ ಬರೆದಿದ್ದರೆ ಆ ವ್ಯಕ್ತಿಗೆ ಗೌರವ ಸಲ್ಲಿಸಿದಂತಾಗುತ್ತಿತ್ತು. ಅಲ್ಲದೆ ನನ್ನಂತಹ ಓದುಗ-ಇಷ್ಟರಿಗೆ ಅದರ ಪಡೆಯೋಣದ ಬಗ್ಗೆ ಅನುಕೂಲವಾಗುತ್ತಿತ್ತು. ದಯವಿಟ್ಟು ಮುಂದಿನ ಸಂಚಿಕೆಯಲ್ಲಿ ವಿಳಾಸ ಒದಗಿಸಿ ಕೊಡುವಿರಾ?

*ಮುಕುಂದ ಚಿಪಳೂಣಕರ, ಕಾರ್ಕಳ*

## ತಿಳುವಳಿಕೆ ಮೂಡಿಸಿತು...

ಏಪ್ರಿಲ್ ೯೬ರ ಸಂಚಿಕೆಯ 'ಆರೋಗ್ಯದಂಗಳ'ದಲ್ಲಿ ಮೂಡಿಬಂದ 'ಟ್ಯೂಬೆಕ್ಟಮಿ ಶಸ್ತ್ರಕ್ರಿಯೆ' ಲೇಖನ ಗ್ರಾಮೀಣ ಪ್ರದೇಶದ ಜನರಿಗೆ ಅತಿ ಸರಳವಾಗಿ ತಿಳುವಳಿಕೆ ಮೂಡಿಸಿತು. 'ಮಹಿಳೆ ಕುಳಿತಲ್ಲಿಯೆ ಕುಳಿತು ಪುಷ್ಟಿಕರವಾದ ಆಹಾರ ತಿಂದು ಬೊಜ್ಜು ಬೆಳೆಸಿಕೊಳ್ಳುತ್ತಾರೆ. ಶಸ್ತ್ರಕ್ರಿಯೆಯನ್ನು ಮಾಡಿಸಿಕೊಳ್ಳದಿದ್ದರೂ ಬೊಜ್ಜು ಬಂದೇ ಬರುತ್ತದೆ'ನ್ನುವ ಅಂಶ ಶಸ್ತ್ರಕ್ರಿಯೆಗಳ ಮೇಲೆ ತಪ್ಪು ಹೊರಿಸುವ ಜನರ ಬಾಯಿಮುಚ್ಚಿಸುವಂತಿದೆ. ಡಾ. ಗಿರಿಜಮ್ಮನವರಿಗೆ ಥ್ಯಾಂಕ್ಸ್.

*ಡಾ. ಮಹೇಶ ಯಾದವಾಡ, ನವಲಗುಂದ*

ಈ ಲೇಖನದಿಂದ ಅನೇಕ ಪ್ರಶ್ನೆಗಳಿಗೆ ಸೂಕ್ತ ಉತ್ತರ ದೊರೆತಂತಾಗಿದೆ.

*ಗಾ.ಸು. ಹೊರಟಮನೆ, ಹಳುವಳ್ಳಿ.*

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಪುಟವಾಗಿ ಬರೆದುಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಪುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೪೦ ಮೇ ೧೯೯೬ ಸಂಚಿಕೆ: ೯

## ನಂಬಿಕೆ

**ನಂ**ಜನಗೂಡಿನಲ್ಲಿ ಕೆಲಸ ಮಾಡುತ್ತಿದ್ದ ನಮ್ಮ ತಂದೆ ಒಂದು ದಿನ ಮೈಸೂರಿನಿಂದ ಬಂದವರೇ ಊಟವಾದ ಮೇಲೆ ನನ್ನನ್ನು ಕರೆದರು.

"ಅಯ್ಯಾ ರಾಮು, ಈ ದಿನ ರೈಲಿನಲ್ಲಿ ಬರುತ್ತಿದ್ದಾಗ, ನಾಲ್ಕಾರು ಜನ ಸಾಧುಗಳೂ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದರು. 'ದೇವರು ಇದ್ದಾನೆಯೇ?' ಎಂದು ಅವರನ್ನು ಕೇಳಿದೆ: ಅವರಲ್ಲೊಬ್ಬರು 'ಇದ್ದಾನೆ ಎಂದು ನಂಬಿಕೋ, ಅದು ನಿನಗೆ ಒಳ್ಳೆಯದು. ಅದರಿಂದ ನಿನಗೆ ಕೆಡಕಂತೂ ಆಗುವುದಿಲ್ಲ' ಎಂದರು. ಆಗ ನಾನು, 'ಸುಮ್ಮನೆ ಹೇಗೆ ನಂಬುವುದು? ಏನಾದರೂ ಒಂದು ಆಧಾರ ಬೇಡವೇ?' ಎಂದು ಮತ್ತೆ ಪ್ರಶ್ನಿಸಿದೆ. ಆಗ ಅವರಲ್ಲೊಬ್ಬರು ಹಿರಿಯರು ನನಗೆ ಸಮಜಾಯಿಸಿ ಹೇಳುತ್ತಾ, 'ನಿನ್ನ ಹೆಸರೇನು, ನಿನ್ನ ಸ್ಥಳ ಯಾವುದು?' ಎಂದು ನನ್ನನ್ನು ಕೇಳಿದರು. ನಾನು ನನ್ನ ಹೆಸರು ಹೇಳಿ, 'ನಾಗಮಂಗಲದ ಹತ್ತಿರದ ಒಂದು ಹಳ್ಳಿ' ಎಂದೆ. ಮತ್ತೆ ಅವರು 'ನಿಮ್ಮ ತಾಯಿ-ತಂದೆ ಯಾರು?' ಎಂದರು. ನಾನು ಅವರ ಹೆಸರನ್ನೂ ಹೇಳಿದೆ.

" 'ಅವರೇ ನಿನ್ನ ತಂದೆ-ತಾಯಿಗಳು ಎಂದು ಹೇಗೆ ಹೇಳುತ್ತೀ?' ಎಂದು ಕೇಳಿದರು. 'ಚಿಕ್ಕವನಾಗಿದ್ದಾಗಿನಿಂದ ನನ್ನನ್ನು ಸಾಕಿ ಸಲಹಿದ್ದರಿಂದ ಹೇಳುತ್ತೇನೆ' ಎಂದೆ.

" 'ಅವರೇ ನಿನ್ನ ತಂದೆ ಎಂದು ಯಾರು ಹೇಳಿದರು?' ಎಂದು ಮತ್ತೆ ಕೇಳಿದರು ಅವರು.

" 'ನಮ್ಮ ತಾಯಿ' ಎಂದೆ. ಆಗ ಅವರು 'ನಿಮ್ಮ ತಾಯಿಯ ಮಾತಿನಲ್ಲಿ ಹೇಗೆ ನಂಬಿಕೆ ಇಡುತ್ತೀ? ಅವರು ನಿನಗೆ ಸುಳ್ಳು ಯಾಕೆ ಹೇಳಿರಬಾರದು?' ಎಂದರು.

"ಆಗ ನಾನು, 'ನಮ್ಮ ತಾಯಿ ಅಂಥವರಲ್ಲ' ಎಂದೆ. ಅದಕ್ಕೆ ಅವರು 'ಅಷ್ಟೇ ಆಧಾರ ಸಾಕೆ?' ಎಂದು ಕೇಳಿದರು. ನಾನು ತಬ್ಬಿಬ್ಬಾದೆ.

"ಆಗ ಅವರು ಹೇಳಿದರು, 'ನಂಬಿಕೆ ಎನ್ನುವುದು ಬಹು ಮುಖ್ಯ. ಜೀವನ ಸಾಗಿಸುವುದಕ್ಕೆ ಬಹು ಮುಖ್ಯವಾದ ಆಧಾರವಾದದ್ದೆ ನಂಬಿಕೆ. ಪ್ರತಿಯೊಂದು ನಂಬಿಕೆಗೂ ಆಧಾರ ಹುಡುಕುತ್ತಾ ಹೋದರೆ ಅಂತರ್ ಪಿಶಾಚಿಯಾಗಬೇಕಾಗುತ್ತೆ. ಜೀವನದ ವಿವಿಧ ಕ್ಷೇತ್ರಗಳಲ್ಲಿ ನಿನ್ನ ಪಾಲುದಾರರಾಗಿರುವವರನ್ನು ಒಂದಲ್ಲ ಒಂದು ರೀತಿಯಲ್ಲಿ ನಂಬಲೇಬೇಕಾಗುತ್ತೆ' ಎಂದರು."

ಹಾಗಿಲ್ಲದೆ ಪುರಂದರದಾಸರು ಹೇಳಿದರೆ ಕಾಣದ ದೇವರನ್ನು ಕುರಿತು-

"**ನಿನ್ನ ನಂಬ ಕೆಟ್ಟವರಿಲ್ಲವೋ**" ಎಂದು.

• **ಕೆ.ಟಿ. ರಾಮಸ್ವಾಮಿ**

# ಕಟ್ಟಿಂಗೇರಿ ಕೃಷ್ಣ ಹೆಬ್ಬಾರ್

## ಕಲೆ ಮತ್ತು ಬದುಕು

ಮೊನ್ನೆ ಮಾರ್ಚ್ ೨ರಂದು ಕನ್ನಡಿಗರ ಹೆಮ್ಮೆಯ, ಕಲಾವಿದ ಶ್ರೇಷ್ಠ ಕೆ.ಕೆ. ಹೆಬ್ಬಾರರು ನಮ್ಮನ್ನಗಲಿದರು. ಅವರ ಬದುಕು ಸರಳ. ತೆರೆದಿಟ್ಟ ಪುಸ್ತಕದ ಹಾಗೆ. ಇಂಥ ಪುಸ್ತಕಸದೃಶ ವ್ಯಕ್ತಿಯ ಕುರಿತು ಡಾ. ಶಿವರಾಮ ಕಾರಂತ ಆದಿಯಾಗಿ ಅನೇಕರು ಕನ್ನಡದಲ್ಲಿಯೂ, ಕೇಂದ್ರ ಲಲಿತಕಲಾ ಅಕಾಡೆಮಿ ಹಾಗೂ ಇನ್ನಿತರ ಸಂಸ್ಥೆಗಳು ಇಂಗ್ಲಿಷಿನಲ್ಲಿಯೂ ಪುಸ್ತಕಗಳನ್ನು ಬರೆದು ಪ್ರಕಟಿಸಿ ಉಪಕರಿಸಿದ್ದಾರೆ.

ಹೆಬ್ಬಾರರ ಗೆರೆಗಳಿಗೆ ಮಾರುಹೋಗಿ ಅವರನ್ನು ಸಖ್ಯದಿಂದ ಸಮೀಪದಿಂದ ಕಂಡ ಡಾ. ಕು.ಶಿ. ಹರಿದಾಸಭಟ್ಟರು 'ಕಟ್ಟಿಂಗೇರಿ ಕೃಷ್ಣ ಹೆಬ್ಬಾರ: ಕಲೆ ಮತ್ತು ಬದುಕು' ಎಂಬ ಹೊತ್ತಗೆಯನ್ನೇ ಸಿದ್ಧಪಡಿಸಿಬಿಟ್ಟರು. ಹೆಬ್ಬಾರರ ಬದುಕು, ಕಲೆಗಳ ಕುರಿತು ಚಿತ್ರ-ಪತ್ರಗಳೆರಡರ ಮೂಲಕವೂ ಅರಿವಾಗುವಂತೆ ಸಂಯೋಜಿಸಿ ಭಟ್ಟರು ಈ ಪುಸ್ತಕವನ್ನು ಸಮಗ್ರವನ್ನಾಗಿಸಿದ್ದಾರೆ. ಉಡುಪಿಯ 'ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ' ಪ್ರಕಟಿಸಿದ ಈ ಪುಸ್ತಕದಿಂದ ಸಾಭಾರ ಎತ್ತಿಕೊಟ್ಟ ಅಂಶಗಳನ್ನೊಳಗೊಂಡ ಈ ಲೇಖನದ ಮೂಲಕ ಆ ಮಹಾನ್ ಕಲಾವಿದನಿಗೆ 'ಕಸ್ತೂರಿ' ಶ್ರದ್ಧಾಂಜಲಿ ಅರ್ಪಿಸುತ್ತಿದೆ.

• ಸಂಪಾದಕ

ಪ್ರಾಥಮಿಕ ಶಿಕ್ಷಣದ ಐದು ವರ್ಷಗಳನ್ನು ಕೃಷ್ಣ ಹೆಬ್ಬಾರರು ಕಟ್ಟಿಂಗೇರಿಯ ಸಮೀಪವೇ ಇದ್ದ ಮಿಶನ್ ಶಾಲೆಯಲ್ಲಿ ಕಳೆದರು. ಶಾಲೆಯ ಒಳಗಡೆ ಸಿಗುವ ಶಿಕ್ಷಣ ಒಂದಾದರೆ ಹೊರಗಿನ ಜಗತ್ತಿನಿಂದ ಅವರಾಗಿ ಕಲಿತಂಥ ವಿದ್ಯೆ ಅವರ ಕಲಾಜೀವನದ ಬೆಳಕಾಯಿತು. ಚಿನ್ನದ ಕೆಲಸದ ಆಚಾರಿಯ ಓಟೆ ಕಸಿದು ಕೊಂಡು ಆತನ ಅಗ್ಗಿಷ್ಟಿಕೆ ಊದುವುದು, ಆತನ ಕಂಬಚ್ಚಿಯನ್ನು ಒಂದು ಕಡೆಯಿಂದ ಹಿಡಿದು ಒಕ್ಕನೂಲಿನ ತಂತಿ ಎಳೆಯುವುದು; ಕಬ್ಬಿಣದ ಆಚಾರಿಯ ಕಮ್ಮಾರ ಶಾಲೆಯಲ್ಲಿ ತಿದಿಯೊತ್ತುವುದು; ಕುಂಬಾರನ ಹತ್ತಿರದಿಂದ ಮಿದುಮಾಡಿದ ಮಣ್ಣು ತಂದು ಏನೇನೋ ಆಕೃತಿಗಳನ್ನು ಮಾಡುವುದು. ಎಂಟು ವರ್ಷದ ಪೋರ ಹೆಬ್ಬಾರನಿಗೆ ಕೈಯ ಕಸುಬುಗಳಲ್ಲಿರುವ ಪ್ರೀತಿ ನೋಡಿ ಊರವರಿಗೆ ಆಶ್ಚರ್ಯ. ಕುಂಬಾರ, ಕಮ್ಮಾರ, ಬಡಗಿಗಳಿಗೆ ಆನಂದ. ಅವರು ಕೆಲಸ ಮಾಡುವುದನ್ನು ನೋಡುವುದೆಂದರೆ ಇವನಿಗೂ ಆನಂದ. ಆಚಾರಿ ಗಟ್ಟಕ್ಕೆ ಕೆಲಸಕ್ಕೆ ಹೋದಾಗ ಕಾಗದ ಬರೆದು ಅವನ ಋಣ ತೀರಿಸಿಕೊಳ್ಳುತ್ತಿದ್ದರು. ಒಮ್ಮೆ ಊರಿನ ಶ್ರೀಮಂತ ಶೆಟ್ಟರ ಹೆಬ್ಬಾಗಿಲಿನ ಎರಡು ಮಣ್ಣಿನ ಗಿಳಿಗಳಲ್ಲಿ ಒಂದು ಬಿದ್ದು ಒಡೆದು ಹೋಯಿತಂತೆ. ಇದನ್ನು ಕೇಳಿದ ಹೆಬ್ಬಾರರು ಅಂಥದೇ ಒಂದು ಗಿಳಿಯನ್ನು ಮಣ್ಣಿಂದ ಮಾಡಿ ಅದಕ್ಕೆ ಹಸಿರು ಬಣ್ಣ ಹಚ್ಚಿ ತದ್‌ಪ್ರತಿ

• ಕು.ಶಿ. ಹರಿದಾಸಭಟ್ಟ

ಮಾಡಿ ಕೊಟ್ಟದ್ದು ಶೆಟ್ಟರಿಗೆ ಆಶ್ಚರ್ಯವುಂಟು ಮಾಡಿತಂತೆ. ಹರಿವಾಣದಲ್ಲಿ ವೀಳೆಯ ಇಟ್ಟು ಅವರು ನೀಡಿದ ಎರಡು ರೂಪಾಯಿಯ ಸಂಭಾವನೆ ಚಿರಸ್ಮರಣೀಯವಾದ ಘಟನೆ.

*

ಹೈಸ್ಕೂಲ್ ಘಟ್ಟದಲ್ಲಿ ತಮ್ಮ ಚಿತ್ರಕಲಾ ಸ್ಫೂರ್ತಿಗೆ ಉತ್ತೇಜನ ಕೊಟ್ಟವರಲ್ಲಿ ಮುಖ್ಯವಾಗಿ ಪುಂಡಲೀಕ ಶೆಣೈ ಅವರನ್ನು ಹೆಬ್ಬಾರರು ನೆನೆದುಕೊಳ್ಳುತ್ತಾರೆ. ಗಣಿತದಲ್ಲಿ ಗಟ್ಟಿಗನೆಂದು



ತಿಳಿದು ಹೆಬ್ಬಾರರಿಗೆ ಅರ್ಧ ಫೀ ತೆರುವ ಕರುಣೆ ತೋರಿಸಿದ ಶೆಣೈ ಅವರು ಹೆಬ್ಬಾರರಿಗೆ ಹೋಮ್‌ವರ್ಕ್ ಮಾಡದೆ ಇದ್ದರೂ ಅಡ್ಡಿ ಇಲ್ಲ ಎನ್ನುತ್ತಿದ್ದರು. ಶಿಸ್ತಿಗೆ ಭಾರೀ ಬೆಲೆ ಕೊಡುತ್ತಿದ್ದ ಶೆಣೈ ಅವರನ್ನು ಹೆಬ್ಬಾರರ ಕಲಾವಂತಿಕೆ ಕರಗಿಸಿತ್ತು. ಹೈಸ್ಕೂಲಿನ ಕನ್ನಡ ಪಂಡಿತರಾದ ವೆಂಕಟರಾಮಾಚಾರ್ಯರ ಪಾಠದಲ್ಲಿ ನಡೆದ ಒಂದು ಆಚಾತುರ್ಯವನ್ನು ಹೆಬ್ಬಾರರು ನೆನಪಿನಲ್ಲಿಟ್ಟಿದ್ದಾರೆ. ಒಂದು ದಿನ ಹೆಬ್ಬಾರರ ಹಿಂದೆ ಕೂತಿದ್ದ ಹುಡುಗ ಪಾಠದ ನಡುವೆ ವಿನಾಕಾರಣ ನಕ್ಕುಬಿಟ್ಟನಂತೆ. ಆಚಾರ್ಯರು ನಗುವ ಸದ್ದು ಬಂದ ಕಡೆ ನೋಡಿದಾಗ ಮುಸಿಮುಸಿ ನಗುವ ಹೆಬ್ಬಾರರು ಅವರ ಕಣ್ಣಿಗೆ ಬಿದ್ದರು. 'ಏನೋ? ಹೆಮ್ಮರದ ಹಾಗೆ ಬೆಳೆದಿದ್ದೀ, ಪಾಠದ ಮಧ್ಯೆ ನಗಾಡಲು ನಾಚಿಕೆ ಆಗುವುದಿಲ್ಲವೇನೋ?' ಎಂದು ಗದರಿಸಿದರು. ಗದರಿಕೆ ಕೇಳಿ ಅನುಭವವಿಲ್ಲದ, ಅದರಲ್ಲೂ ನಿರಪರಾಧಿಯಾದ ಹೆಬ್ಬಾರರು ನಿಂತಲ್ಲೇ ಕುಸಿದರು. ಮನಸ್ಸಿನ ನೋವನ್ನು ಒಂದು ದ್ವಿಪದಿ ರೂಪದಲ್ಲಿ ಬರೆದು, ಪಂಡಿತರು ಮಾರನೆ ಮುಂಜಾನೆ ಪಾಠ ಮುಗಿಸಿ ಹೋಗುವಾಗ ಅವರ ಕೈಯಲ್ಲಿ ಕೊಟ್ಟು 'ಸಾರ್, ಒಂದು ಪದ್ಯ ಬರೆದಿದ್ದೇನೆ. ಸ್ವಲ್ಪ ನೋಡಿ ತಿದ್ದಿ ಕೊಡುತ್ತೀರಾ?' ಎಂದು ವಿನಯದಿಂದ ಪ್ರಾರ್ಥಿಸಿದರು. ಆಚಾರ್ಯರು ಕವನವನ್ನು ಮಡಿಸಿ ಜೇಬಿನೊಳಗಿಟ್ಟು, 'ಮಧ್ಯಾಹ್ನದ ವಿರಾಮದ ವೇಳೆ ಬಂದು ನೋಡು' ಎಂದರು. ಹೇಳಿದ ಸಮಯಕ್ಕೆ ಹೋದಾಗ ಪಂಡಿತರು ಪದ್ಯವನ್ನು ನೋಡಿ

ಅರ್ಥ ಮಾಡಿಕೊಂಡಾಗಿತ್ತು.

ತಪ್ಪನೆಸಗಿದೆ ನಾನು ದೇವನೆ
ಉಕ್ಕಿಬಹ ನಗು ತಡೆಯಲಾರದೆ....

-ಎಂದು ಮುಂತಾಗಿ ಬರೆದ ಶಿಷ್ಯನ ಪದ್ಯಕ್ಕೋ ಅದರೊಳಗಿನ ಭಾವಾರ್ಥಕ್ಕೋ ಪಂಡಿತರು ಮುಗುಳ್ನಕ್ಕು ತಪ್ಪೇನೂ ಇಲ್ಲ ತೆಗೆದುಕೋ ಎಂದು ಬೆನ್ನು ತಟ್ಟಿದರು.

*

ಕೆಲ ತಿಂಗಳಲ್ಲಿಯೇ ಈ ಪ್ರಶ್ನೆಗೆ ಉತ್ತರ ದೊರೆಯುವ ಒಂದು ಸಂದರ್ಭ ಒದಗಿತು. ಮೈಸೂರಿನ ಶಿಕ್ಷಣದ ಸಂದರ್ಭದಲ್ಲಿ ಹೆಬ್ಬಾರರು ವಸತಿ ಮಾಡಿದ್ದು ಪಾವಂಜೆಯವರ ಮನೆಯಲ್ಲಿಯೇ ಎಂಬುದನ್ನು ಇಲ್ಲಿ ಪ್ರಸ್ತಾಪಿಸಬೇಕು. ಪಾವಂಜೆಯವರಿಗೆ ಬಡ ವಿದ್ಯಾರ್ಥಿ ಹೆಬ್ಬಾರರ ಮೇಲೆ ಮರುಕವಿದ್ದರೂ ಅವರ ಹೆಂಡತಿ ಕೃಷ್ಣವೇಣಿ ಅಮ್ಮನವರಿಗೆ ಅಷ್ಟಾಗಿ ಹಿಡಿಸಲಿಲ್ಲ. ಸ್ಫುರದ್ರೂಪಿಯಾದ ಈ ಚಾಣಾಕ್ಷ ವಿದ್ಯಾರ್ಥಿಯನ್ನು ತನ್ನ ಮಗಳಿಗೆ ಒಂದಲ್ಲ ಒಂದು ದಿನ ತಂದುಕೊಳ್ಳಬಹುದೆಂಬ ಹೆಣ್ಣು ಹೆತ್ತವರಾಸೆಯೂ ಪಾವಂಜೆಯವರ ಔದಾರ್ಯಕ್ಕೆ ಕಾರಣವಾಗಿದ್ದಿರಬಹುದು. ಎಂತಲೇ ಇಂಗ್ಲೆಂಡಿನಲ್ಲಿ ತಾನು ಕಲಿತ ಪಡಿಯಚ್ಚಿನ ತಂತ್ರವನ್ನು (ಬ್ಲಾಕ್ ಮೇಕಿಂಗ್) ಖಾಸಗೀ ಉದ್ಯೋಗದ ರೂಪದಲ್ಲಿ ಮನೆಯಲ್ಲೇ ಸಜ್ಜುಗೊಳಿಸಿಕೊಂಡಾಗ ಅವರು ಹೆಬ್ಬಾರರನ್ನು ಸಹಾಯಕ್ಕೆ ಕರೆಯುತ್ತಿದ್ದರು-ಹೆಬ್ಬಾರ ಇದನ್ನು ಕಲಿತುಕೊಳ್ಳಬೇಕೆಂಬುದೇ ಅವರ ಮನಸ್ಸಿನಲ್ಲಿದ್ದಂತೆ. ಇದು ಕೃಷ್ಣವೇಣಿಯಮ್ಮನಿಗೆ ಸುತರಾಂ ಹಿಡಿಸದ ವಿಷಯವಾಯಿತು. 'ಈಗ ಇವನಿಗೆ ಕಲಿಸಿಕೊಡಿ, ಒಂದು ದಿನ ಇವನೇ ನಿಮಗೆ ಎದುರಂಗಡಿ ಇಡುತ್ತಾನೆ' ಎಂದು ಅವರು ಗಂಡನ ಹತ್ತಿರ ತಕರಾರೆಬ್ಬಿಸುವುದನ್ನು ಆಲಿಸಿದವರೇ ಹೆಬ್ಬಾರರು ಇನ್ನು ಮೈಸೂರು ಬಿಡುವುದೇ ಒಳ್ಳೆಯದು ಎಂಬ ತೀರ್ಮಾನಕ್ಕೆ ಬಂದರು. ಇತ್ತ ಶಾಲೆಯ ಶಿಕ್ಷಣ ನಿರುಪಯುಕ್ತವೆಂಬ ಭಾವನೆ ಆಗಲೇ ಬೇರುಬಿಟ್ಟಿತು.



ಮನೆಯ ವಾತಾವರಣವೂ ಅನುಕೂಲವಾಗಿರಲಿಲ್ಲ ಎಂದ ಮೇಲೆ ಉಡುಪಿಗೆ ಹಿಂತಿರುಗಲು ತಡಮಾಡಬಾರದು ಎಂದು ತಿಳಿದರು. ಆದರೆ ವರ್ಷದ ನಡುವೆ ತಪ್ಪಿಸಿಕೊಳ್ಳುವುದಾದರೂ ಹೇಗೆ? ಅಮ್ಮನಿಗೆ ಪತ್ರದಲ್ಲಿ ಎಲ್ಲವನ್ನೂ ತಿಳಿಸಿ 'ಅಮ್ಮ ನನಗೆ ಇನ್ನು ಇಲ್ಲಿರಲು ಇಚ್ಛೆಯಿಲ್ಲ. ನೀನು ಒತ್ತಾಯ ಮಾಡಬಾರದು. ನನಗೊಂದು ಕಾಗದದಲ್ಲಿ ಕಠಿಣ ಕಾಯಿಲೆಯಿಂದ ಬಳಲುತ್ತಿದ್ದೇನೆಂದು ಬರೆದುಬಿಡು. ನಿನ್ನ ಕಾಯಿಲೆ ನೆಪದಲ್ಲಿ ಹೇಗಾದರೂ ಇಲ್ಲಿಂದ ಒಮ್ಮೆಗೆ ತಪ್ಪಿಸಿಕೊಂಡು ಬರುತ್ತೇನೆ' ಎಂದು ಬರೆದರು. ಅಮ್ಮನ 'ಕಠಿಣ ಕಾಯಿಲೆ' ಪತ್ರ ಊರಿಂದ ಬಂದದ್ದನ್ನು ಪಾವಂಜೆ ದಂಪತಿಗಳಿಗೆ ತೋರಿಸಿ ಸ್ವಲ್ಪ ದಿನ ಊರಿಗೆ ಹೋಗಲು ಅಪ್ಪಣೆ ಬೇಡಿದರು. ಪೆಟ್ಟಿಗೆಯೊಳಗೆ ಊಟದ ಬಟ್ಟಲನ್ನು ತುಂಬಿಸುತ್ತಿರುವು

ದನ್ನು ಕೃಷ್ಣವೇಣಿಯಮ್ಮ ನೋಡಿ 'ಏನೋ ಬಟ್ಟಲನ್ನೂ ಹಾಕುತ್ತಿದ್ದೀ, ಹಿಂದೆ ಬರುವ ಯೋಚನೆ ಇಲ್ಲವೋ?' ಎಂದು ಸಂಶಯದ ಪ್ರಶ್ನೆ ಕೇಳಿಯೇಬಿಟ್ಟರು. 'ಹಾಗಲ್ಲಮ್ಮಾ ಮನೆಯಲ್ಲಿ ನನಗೆ ಬೇರೆ ಬಟ್ಟಲಿಲ್ಲ. ಅದಕ್ಕೆ ಸೇರಿಸಿದೆ' ಎಂದು ಜಾಣ ಉತ್ತರ ಕೊಟ್ಟು ಹೆಬ್ಬಾರರು ಉಡುಪಿಗೆ ಹೊರಟರು. ದಾರಿಯಲ್ಲಿ ಬರುತ್ತ ಅಣ್ಣನ ಸಲುವಾಗಿ ಪಾವಂಜೆಯವರ ತಂಗಿಯನ್ನು ನೋಡಿಕೊಂಡು ಬಂದದ್ದೂ ಆಯಿತು. ಅಣ್ಣನ ಪರವಾಗಿ ತಮ್ಮ ನೋಡಿದರೂ ವಿವಾಹದ ನಿಶ್ಚಿತಾರ್ಥ ಆದಂತೆಯೇ ಆಯಿತು. (ಕೆಲಕಾಲಾನಂತರ ಅದೇ ಹುಡುಗಿಯನ್ನು ಅಣ್ಣ ಮದುವೆಯಾದನಂತೆ).

*

ಹೆಬ್ಬಾರರಿಗೆ ಮುಂಬಯಿಯಲ್ಲಿ ಸಿಕ್ಕಿದ ಮೊದಲ ಕೆಲಸ ಸ್ಟುಡಿಯೋದಲ್ಲಿ ಫೋಟೋಗಳಿಗೆ ರಿ-ಟಚ್ ಮಾಡುವ ಕೆಲಸವೇ. ಅದರಲ್ಲಿ ಅವರಿಗೆ ಉಡುಪಿಯ ಅನುಭವ ಮೊದಲೇ ಇದ್ದಿತ್ತು. ಒಂದು ದಿನ ಅಲೆದಾಟದ ನಡುವೆ ಖೊಪಾರ್ಡೆ ಸ್ಟುಡಿಯೊಕ್ಕೆ ಹೊಕ್ಕು 'ಕೆಲಸ ಉಂಟೆ?' ಎಂದು ವಿಚಾರಿಸಿದರು. 'ಈಗ ಇಲ್ಲ. ಇರುವಾಗ ಟೆಸ್ಟ್ ಮಾಡಿ ನೋಡುವಾ' ಎಂದ. ಹೆಬ್ಬಾರರು 'ಈಗಲೇ



ಪರೀಕ್ಷೆ ಮಾಡಿ ನೋಡಿ, ಕೆಲಸ ಇದ್ದಾಗ ಕರೆಯಿರಿ' ಎಂದುಬಿಟ್ಟು ಕೂಡಲೇ ಪರೀಕ್ಷೆಗೆ ಅನುವಾದರು. ಖೊಪಾರ್ಡೆ ಅವರಿಗೆ ಕೆಲವು ನೆಗೆಟಿವ್‌ಗಳನ್ನಿತ್ತು ರಿ-ಟಚ್ ಮಾಡಲು ಹೇಳಿ ಚಹಾ ಕುಡಿಯಲು ಹೊರಗೆ ಹೊರಟು ಹೋದ. ತಾಸೆರಡು ತಾಸು ಕಳೆದ ಮೇಲೆ ಮರಳಿ 'ಏನಾಯಿತು, ತೋರಿಸು' ಎಂದಾಗ ಹೆಬ್ಬಾರರು ಆ ನೆಗೆಟಿವ್‌ಗಳನ್ನು ಇದ್ದಕ್ಕಿದ್ದ ಹಾಗೆ ತಂದು ವಾಪಾಸು ಮಾಡಿ 'ಇವು ರಿ-ಟಚ್‌ಗೆ ಬರುವ ನೆಗೆಟಿವ್‌ಗಳಲ್ಲ' ಎಂದು ಹೇಳಿಯೇ ಬಿಟ್ಟರು. ಖೊಪಾರ್ಡೆಗೆ ಖುಶಿ ಆಯಿತು. ನಿರುಪಯೋಗಿ ನೆಗೆಟಿವ್‌ಗಳನ್ನೇ ಆತ ಕೊಟ್ಟಿದ್ದದ್ದು. ಪರೀಕ್ಷೆ ಮಾಡುವ ಸಲುವಾಗಿಯೇ ಕೊಟ್ಟದ್ದು. ಹೆಬ್ಬಾರರಿಗಂತೂ ಮಧ್ಯಂತರದ ಎರಡು ತಾಸು ಉಭಯ ಸಂಕಟ. ಮಾಡಲೋ ಬಿಡಲೋ - ಕೊನೆಗೆ ಸತ್ಯ ಹೇಳುವುದೇ ಎಂದು ನಿರ್ಧರಿಸಿ ಬಿಟ್ಟಿದ್ದರು. ಖೊಪಾರ್ಡೆ ನಾಳೆಯಿಂದ ಬಂದೇ ಬಿಡು ಎಂದದ್ದು ಅಮೃತ ಕುಡಿದಷ್ಟು ಮಧುರವಾಗಿತ್ತು. 'ಕೆಲಸ ಸಿಕ್ಕಿತು, ನಾಳೆಯಿಂದಲೇ ಬರಲು ಹೇಳಿದ್ದಾರೆ, ಫಿಫ್ಟಿ ಸಂಬಳ ಹೇಳಿದ್ದಾರೆ' ಎಂದು ಅಣ್ಣನಿಗೆ ವರದಿ ಮಾಡಿದರೆ ಆತ 'ಸರಿಯಾಗಿ ಕೇಳಿದಿಯಾ ಫಿಫ್ಟೀನೋ, ಫಿಫ್ಟಿಯೋ?' ಎಂದು ಸಂಶಯದ ಬೀಜ ಬಿತ್ತಿದ. ಮಾರನೆ ದಿನ ಗಟ್ಟಿ ಮನಸ್ಸು ಮಾಡಿ ಖೊಪಾರ್ಡೆಯ ಹತ್ತಿರ 'ನನ್ನಣ್ಣ ಕೇಳುತ್ತಾನೆ ಸಾರ್, ಸಂಬಳ ಫಿಫ್ಟೀನೋ ಫಿಫ್ಟಿಯೋ ಅಂತ. (ಹದಿನೈದೋ, ಐವತ್ತೋ?)ಸರಿಯಾಗಿ ಹೇಳುತ್ತೀರಾ?' ಎಂದು ಕೇಳಿ ಐವತ್ತೆಂದು ಖಾತರಿ ಮಾಡಿಕೊಂಡರು.

*

೧೯೩೭ರಲ್ಲಿ ಹೆಬ್ಬಾರರಿಗೆ ಮದುವೆ ಆಯಿತು. ಆಗ ಅವರಿಗೆ ೨೪ ವಯಸ್ಸು. ಉಡುಪಿಯವಳೇ ಹುಡುಗಿ - ಯಮುನಾ: (ಗಂಡನ ಮನೆಯ ಸುಶೀಲೆ) ಹುಡುಗಿ ಉಡುಪಿಯಲ್ಲಿ. ಹುಡುಗ ಮುಂಬಯಿಯಲ್ಲಿ. ನಿಶ್ಚಿತಾರ್ಥ ನಡೆದದ್ದು ಗೇಟ್‌ವೇ ಆಫ್ ಇಂಡಿ

ಯಾದಲ್ಲಿ. ಮದುವೆ ತಿರುಪತಿಯಲ್ಲಿ. ಮದುವೆಗಳು ನಮ್ಮ ದೇಶದಲ್ಲಿ ಪುರುಷಪ್ರಯತ್ನಕ್ಕಿಂತಲೂ ಹೆಚ್ಚು ದೈವಯತ್ನವೆಂಬ ನಂಬಿಕೆ ಇದೆಯಷ್ಟೇ.

ಮದುವೆಯಾಗುವ ಹುಡುಗಿಯನ್ನು ಒಂದು ಸಲವೂ ಕಣ್ಣೆತ್ತಿ ನೋಡದೆ ಮನೋಘಟನೆಯಿಂದಲೇ ಹೆಬ್ಬಾರರು ಒಪ್ಪಿಗೆ ಕೊಟ್ಟಿದ್ದರು. ಕುಮಾರಿ ಯಮುನೆಯನ್ನು ಅವರು ಮೊತ್ತ ಮೊದಲು ನೋಡಿದ್ದೇ ತಿರುಪತಿ ಗೋವಿಂದರಾಜ ಪಟ್ಟಣದಲ್ಲಿ - ಮದುವೆಯ ಮುನ್ನಾದಿನ. ದಿಬ್ಬಣವೆಂದರೆ ಬಹಳ ಸಣ್ಣ ದಿಬ್ಬಣ - ಮದುಮಗ, ಸೀತಮ್ಮ, ಅಣ್ಣ ಅನಂತರಾಮ, ಅತ್ತಿಗೆ, ಮಧ್ಯಸ್ಥಿಕೆ ವಹಿಸಿದ ಕೆ.ವಿ. ಆಚಾರ್ಯರು-ಇಷ್ಟೇ. ದಾದರ್‌ನಲ್ಲಿ ರೈಲಿನೊಳಗೆ ಹೊಕ್ಕರೆ ಕಾಲಿಡಲು ಸ್ಥಳವಿಲ್ಲ. ರೈಲು ಹೊರಟಕೂಡಲೆ ಆಚಾರ್ಯರ ಬಾಯಿ ಕಾರ್ಯಪ್ರವೃತ್ತವಾಯಿತು. ಅವರ ಮಾತಿನ ಮೋಡಿಗೆ ಮರುಳಾಗಿ ಕಾಲು ಚೆಲ್ಲಿ ಕೂತಿದ್ದ ಗುಜರಾತಿ ಬಂಧುಗಳು ಹೆಬ್ಬಾರ ದಿಬ್ಬಣಕ್ಕೆ ಸ್ಥಳಾವಕಾಶ ಮಾಡಿಕೊಟ್ಟರು. ಮದುವೆಯಲ್ಲಿ ಹೆಬ್ಬಾರರ ನೆನಪಿನಲ್ಲಿರುವ ವಿಷಯವೆಂದರೆ ಎರಡು:- ಒಂದು, ಅದು ತುಳು ಗಾದೆಯ 'ಕುದ್ಕ (ನರಿ) ದಿಬ್ಬಣ'ದಂತೆ ಅತಿ ಕಮ್ಮಿ ಜನಸಂಖ್ಯೆಯ ದಿಬ್ಬಣವಾಗಿದ್ದದ್ದು - ಮರುದಿಬ್ಬಣವೂ ಹಾಗೆಯೆ; ಎರಡನೆಯದು ಪ್ರಸ್ತದ ಊಟದಲ್ಲಿನ ಸೊಪ್ಪಿನ ಸಾಂಬಾರು. ಮದುವೆ ಮುಗಿಸಿ ಗಂಡಿನ ದಿಬ್ಬಣ ಮುಂಬಯಿಗೆ ಹೊರಟಿತು. ಹೆಣ್ಣಿನ ಕಡೆಯವರು ವಧೂಸಮೇತರಾಗಿ ಉಡುಪಿಗೆ ಮರಳಿದರು. ಕಾರಣ: ಹುಡುಗಿ ಇನ್ನೂ ಮೈನೆರೆದಿರಲಿಲ್ಲ. ಹುಡುಗಿ ಮುಂಬಯಿಗೆ ಬಂದ ಮೇಲೆ ಹೆಸರು ಬದಲಿಸಿ ಶ್ರೀಮತಿ ಸುಶೀಲೆಯಾದಳು.

*

ದುಡಿಮೆಗೂ ಅಧ್ಯಯನಕ್ಕೂ ತೊಂದರೆ ಆಗಬಾರದೆಂದು ಹೆಬ್ಬಾರರು ಸಂಸಾರಸುಖವನ್ನು ಸ್ವಲ್ಪ ಕಾಲ ತ್ಯಾಗಮಾಡಬೇಕಾಯಿತು. ಹೊಸ ಹೆಂಡತಿ ಮನೆಗೆ ಬಂದರೂ, ತಾಯಿ, ಅಣ್ಣ, ಅತ್ತಿಗೆ, ಅವರ ಮಕ್ಕಳು ಇರುವಂಥ ಇಕ್ಕಟ್ಟಿನ ಸಂಸಾರದಲ್ಲಿ ಆಕೆಯ ಹತ್ತಿರ ಸರಸ ಸಲ್ಲಾಪಕ್ಕೆ ಎಡೆಯೂ ಇರಲಿಲ್ಲ. ತಾವಿಬ್ಬರೇ ಇರುವಂಥ ಸಂದರ್ಭಗಳೇ ಇರಲಿಲ್ಲ. ಹೆಂಡತಿ ಕಣ್ಣಿಗೆ ಬೀಳುವುದೇ ಅಡಿಗೆಮನೆಯಲ್ಲಿ ಬಡಿಸಲು ಬಂದಾಗ. ಜತೆಯಾಗಿ ವಾಕಿಂಗ್‌ಗೆ ಹೋಗಲೂ ಸಮಯವಿಲ್ಲ. ಯಾವುದೇ ನಾಟಕ ಸಿನಿಮಾ ಮಾತು ಬಿಡಿ. ಅಷ್ಟೇಕೆ ಗೃಹಸ್ಥ ಜೀವನದ ಸೊಗಸನ್ನೂ ಮೂರು ವರ್ಷ ಮುಂದೂಡಬೇಕಾದ ಪ್ರಮೇಯ. ತನ್ನ ಕಷ್ಟಗಳನ್ನಾದರೂ ಕೆಲಸದ ನಡುವೆ ಮರೆಯಬಹುದು. ಎಳೆಯ ಹೆಂಡತಿ ಹೇಗೆ ಸಹಿಸಬೇಕು? ಅದಕ್ಕಾಗಿ ಆಕೆಗೆ ಸಾಹಿತ್ಯ ಸಂಗೀತಗಳನ್ನು ಕಲಿಸಲು ಹೊರಟರು. ಇದರಿಂದ ಆಕೆಯ ಮನಸ್ಸು ಸಮಾಧಾನಗೊಂಡೀತೆ? ಸಂಪ್ರದಾಯಸ್ಥ ಮನೆತನದ ಹೆಣ್ಣು ಸುಶೀಲೆ ಯಾವುದಕ್ಕೂ ತಕರಾರು ಮಾಡಲಿಲ್ಲ, ಆಕ್ಷೇಪಿಸಲಿಲ್ಲ, ಸ್ವಂತ ಅಪೇಕ್ಷೆಗಳನ್ನು ಪ್ರಕಟಿಸಲಿಲ್ಲವೆಂದು ಹೆಬ್ಬಾರರು ಹೆಂಡತಿಯ ಶಾಂತತೆಯನ್ನು, ಸ್ವಸ್ಥಾನ ಪರಿಜ್ಞಾನವನ್ನೂ ಕೊಂಡಾಡುತ್ತಾರೆ. ವಯಸ್ಸಾದ ತನ್ನ ತಾಯಿಯ ಕಿರಿಕಿರಿಯನ್ನು ಸಹಿಸಿಕೊಂಡ ಶ್ರೀಮತಿ ಸುಶೀಲೆ ಗುಣಸ್ವಭಾವಗಳಲ್ಲಿ ಕಲಾವಿದನಿಗನುಕೂಲೆಯಾದ ಸತಿಯೇ ಆಗಿದ್ದಳು ಎನ್ನುತ್ತಾರೆ. ತಾಯಿ, ಸುಶೀಲೆ ಒಂದು ಕೊಠಡಿಯಲ್ಲಿ, ಅಣ್ಣನ ಸಂಸಾರ ಇನ್ನೊಂದರಲ್ಲಿ ಎನ್ನುವಾಗ ಬೇರೆ ಕೊಠಡಿಯೇ ಇಲ್ಲದ ಇಕ್ಕಟ್ಟಿನಲ್ಲಿ ಹೆಬ್ಬಾರರಿಗೆ ಮಲಗಲು ಬಾಲ್ಕನಿಯೇ ಉಳಿದದ್ದು. ಅಂದರೆ ತನ್ನದು ಮದುವೆಯಾಗಿ ಹೆಂಡತಿ ಮನೆಗೆ ಬಂದರೂ ಮೂರು ವರ್ಷಗಳಷ್ಟು ದೀರ್ಘವಾದ ಬ್ರಹ್ಮಚರ್ಯ ಸಾಧನೆ ಆಯಿತು ಎನ್ನುತ್ತಾರೆ. ಜೆ.ಜೆ. ಸ್ಕೂಲಿನ ಸ್ನಾತಕನಾದ ಬಳಿಕವೆ (೧೯೩೮) ಅವರು ಸಂಸಾರದ ಪರೀಕ್ಷೆಗೆ ಕೂತದ್ದು, ಗಾರ್ಹಸ್ಥ್ಯಕ್ಕೆ ತೊಡಗಿದ್ದು.

*



ತೊಟ್ಟಿಲಿಗೆ

ಸಂಸಾರದಲ್ಲಿ ಸಂಖ್ಯಾವಿಸ್ತರಣೆ ಆದಂತೆ ಹೆಬ್ಬಾರರಿಗೆ ತಮ್ಮ ಕಲೆಯ ಕೆಲಸಕ್ಕೆ ಸ್ಥಳಾವಕಾಶವೇ ಸಿಗದಿರುವಂಥ ಪರಿಸ್ಥಿತಿ ಉತ್ಪನ್ನವಾಯಿತು. ತಾಯಿಯನ್ನೂ ಅಣ್ಣನನ್ನೂ ಬಿಟ್ಟು ಬೇರೆ ಮನೆ ಮಾಡದೆ ಉಪಾಯವಿರಲಿಲ್ಲ. ಆಗಿನ ಕಾಲದಲ್ಲಿ ಮುಂಬಯಿ ರಾಜಕೀಯದ ಅನಭಿಷಿಕ್ತ ಪ್ರಭುವೆನಿಸಿದ್ದ ಎಸ್.ಕೆ. ಪಾಟೀಲರು ತಮ್ಮ ಸ್ನೇಹಿತೆಯೊಬ್ಬಳ ಔಟ್ ಹೌಸಿನಲ್ಲಿ ಬಾಡಿಗೆ ಇಲ್ಲದೆ ಇರುವ ವ್ಯವಸ್ಥೆ ಮಾಡುತ್ತೇನೆ ಎಂದರಂತೆ. ಹೆಬ್ಬಾರರು ಎಂಟು ತಿಂಗಳು ತನ್ನ ಹೆಂಡತಿ ಮಕ್ಕಳೊಡನೆ ದಾದರ್‌ನ ಆ ಮನೆಗೆ ಹೋದರು. ದುರದೃಷ್ಟವಶಾತ್ ಎಸ್.ಕೆ. ಪಾಟೀಲರಿಗೂ ಅವರ ಸ್ನೇಹಿತೆಗೂ ಏನೋ ಭಿನ್ನಾಭಿಪ್ರಾಯ ಬಂದುದರಿಂದ ಆಕೆ ಹೆಬ್ಬಾರರ ಹತ್ತಿರ ಬಾಡಿಗೆ ಕೇಳಿದ್ದಲ್ಲದೆ, ಒಂದು ವಾರದೊಳಗೆ ಮನೆ ಬಿಟ್ಟು ಹೋಗಲು ಆಜ್ಞೆ ಮಾಡಿದಳು. ಎರಡೂ ಕಷ್ಟದ ವಿಷಯಗಳೇ. ಆದರೂ ತನ್ನ ಸ್ನೇಹಿತರ ದೆಸೆಯಿಂದ ಹೆಬ್ಬಾರರು ಅಂತೂ ಪ್ರಸಂಗದಿಂದ ಪಾರಾದರು. ಈ ದುರ್ಧರ ಪ್ರಸಂಗದಲ್ಲಿ ನೆರವಾದ ಮಿತ್ರ ಶಾಮರಾವ್ ವೇಲ್ಕರ್ ಭಾರೀ ಹೃದಯವಂತ. ಹೆಬ್ಬಾರರ ಮೇಲೆ ಪ್ರೀತಿ ಗೌರವ ಎರಡೂ ಉಳ್ಳವನು. ಬಡ ಕಲಾವಿದನ ಜೀವನದ ಸಮಸ್ಯೆ ಅರಿತವನು. 'ಏನೂ ಯೋಚನೆ ಮಾಡಬೇಡಿ. ಸದ್ಯವೇ ಮಾಹಿಮ್‌ನಲ್ಲಿ ನಾನು ಕಟ್ಟುವ

ಮನೆಗಳು ಪೂರ್ಣರೂಪಕ್ಕೆ ಬರುತ್ತವೆ. ಅದರಲ್ಲೊಂದರಲ್ಲಿ ನೀವು ಇರಬಹುದು. ಅದುವರೆಗೆ ನಿಮ್ಮ ಮನೆ ಸಾಮಾನನ್ನು ನನ್ನ ಗರೇಜಿನಲ್ಲಿ ಹಾಕಿಬಿಟ್ಟು ನನ್ನ ಮಹಾಬಲೇಶ್ವರದ ಮನೆಗೆ ಹೋಗಿ ಇರಿ' ಎಂದು ಹೇಳಿ ಪುಣ್ಯ ಕಟ್ಟಿಕೊಂಡ. ಸುಶೀಲೆ, ರೇಖಾ, ರನ್ನ, ರಜನಿ, ಸೇವಕ ವೆಂಕಟ- ಈ ಐದು ಮಂದಿಯನ್ನು ಕರೆದುಕೊಂಡು ಹೆಬ್ಬಾರರು ಮಹಾಬಲೇಶ್ವರದಲ್ಲಿ ೧೦ ತಿಂಗಳು- ಪೇಲ್ಕರನ ಕಟ್ಟಡ ಪೂರ್ತಿಗೊಳ್ಳುವವರೆಗೆ- ನೆಲೆಸಿದರು. ಮಹಾಬಲೇಶ್ವರದ ವಾಸ್ತವ್ಯದಲ್ಲಿ ತನ್ನನ್ನು ತಾನೇ ಕಂಡುಕೊಳ್ಳುವ ಅವಕಾಶ ಒದಗಿತು. ತಾಯನ್ನು ಬಿಟ್ಟು ಇದ್ದದ್ದೆಂದರೆ ಇದೊಂದು ಸಂದರ್ಭದಲ್ಲಿ ಮಾತ್ರ.

*

ಹಳ್ಳಿಯ ಹುಡುಗ ಹೆಬ್ಬಾರರ ಪ್ರಸಂಗಾವಧಾನತೆ ಅವರ ಜೀವನದ ಹಲವು ಸಂದರ್ಭಗಳಲ್ಲಿ ಅವರನ್ನು ಪಾರು ಮಾಡಿದ್ದುಂಟು. ದ್ವಿತೀಯ ಮಹಾಯುದ್ಧ ಕಾಲದಲ್ಲಿ ನಡೆದೊಂದು ಘಟನೆ: ಇಡೀ ಭಾರತ ಭೂಮಿಯನ್ನೇ ಬ್ರಿಟಿಷ್ ಸಾರ್ವಭೌಮರು ಯುದ್ಧ ಕ್ಷೇತ್ರವೆಂದು ಸಾರಿದ್ದ ೧೯೪೩ನೆಯ ಇಸವಿ. ಅಲ್ಲಲ್ಲಿ ಮಿಲಿಟರಿ ನೆಲೆಗಳಿರುವಂಥ ಪಶ್ಚಿಮ ಕರಾವಳಿ ನಾಗರಿಕರಿಗೆ ಮನ್ನಾ ಪ್ರವೇಶ ಮೇಲಾಗಿತ್ತು. ಇದಾವುದೂ ಅರಿಯದ ಹೆಬ್ಬಾರರು ಮಿತ್ರನಾದ ದಳವಿ ಸಂಗಡ ಆಲಿಬಾಗದಿಂದ ಹಿಂದಿರುಗುವ ಸಮಯ ಅಲ್ಲಿ ಹಡಗಿಗಾಗಿ ಕಾಯುವ ಅವಕಾಶವಿತ್ತು. ಕಲಾವಿದನ ಕಣ್ಣು ಪಡು ಕರಾವಳಿಯ ಸುಪ್ರಭಾತದ ನೇಸರಿನ ಚೆಲುವನ್ನು ಚಿತ್ರಿಸುತ್ತ ಇರುವಂತೆ ಕಾಲು ಮೆಲುಮೆಲನೆ ನಿಷೇಧಿತ ಪ್ರದೇಶದೊಳಕ್ಕೆ ನುಗ್ಗಿಬಿಟ್ಟಿತು 'ಹಾಲ್ಟ್'. ಅಲ್ಲೇ ಸುಳಿಯುತ್ತಿದ್ದ ಬ್ರಿಟಿಷ್ ಕರ್ನಲ್ ಹೆಬ್ಬಾರರನ್ನು ಎರೆಸ್ಟ್ ಮಾಡಿ ಇಬ್ಬರು ಜವಾನರ ಕೈಗೆ ಒಪ್ಪಿಸಿಕೊಟ್ಟು ಹೋಗಿ ಎಂದು ಬಿಟ್ಟ. 'ನಾನು ಕಲಾವಿದ. ಇಲ್ಲಿಗೆ ದಾರಿ ತಪ್ಪಿ ಬಂದೆನಷ್ಟೇ' ಎಂದು ಎಷ್ಟು ಪರಿಯಾಗಿ ಹೇಳಿದರೂ, 'ಗೊತ್ತಿದೆ ಬಿಡು. ಗುಪ್ತಚಾರರು ಎಂತೆಂಥ ವೇಷ ಹಾಕುತ್ತಾರೆ, ಅದೆಲ್ಲಾ ನಮಗೆ ಗೊತ್ತಿದೆ. ಮಾತಾಡದೆ ನಮ್ಮ ಹಿಂದೆ ಬಾ. ಈಗ ಗುಂಡು ಹಾಕಿ ಸುಟ್ಟರೂ ಯಾರೂ ನಿನ್ನನ್ನು ಕೇಳುವವರಿಲ್ಲ ತಿಳಿಯಿತೇ' ಎಂದು ಗದರಿಸಿ ತಂತಿಬೇಲಿಯೊಳಗಿನ ಆವರಣಕ್ಕೆ ಒಯ್ಯುವಾಗ ಇದೇನು ಫಜೀತಿಯಪ್ಪ ಎಂದು ತಲೆ ಕರೆದುಕೊಳ್ಳುತ್ತಿದ್ದ ಹೆಬ್ಬಾರರಿಗೆ ದೂರದಲ್ಲಿ ಯಾರೊ ಬ್ರಿಟಿಷ್ ಆಫೀಸರ್ ಜವಾನರಿಗೆ ಸನ್ನೆ ಮಾಡಿ ಮ್ಯಾಚಿಸ್ ಇದೆಯೇ ಎಂದು ವಿಚಾರಿಸುವುದು ಕಂಡಿತು. ಹೆಬ್ಬಾರರು ಗಟ್ಟಿಯಾಗಿ 'ನನ್ನ ಹತ್ತಿರ ಇದೆ. ಇಕ್ಕೊಳ್ಳಿ' ಎಂದು ಕೂಗಿ ಹೇಳಿದರು. ಆತ ಸಮೀಪಕ್ಕೆ ಬಂದಾಗ ಸಿಗರೇಟ್‌ಗೆ ಕಡ್ಡಿ ಹಚ್ಚಿ 'ನೋಡಿ ಸಾರ್, ನಾನೊಬ್ಬ ಕಲಾವಿದ, ಸರಕಾರದ ಜೆ.ಜೆ. ಸ್ಕೂಲಿನಲ್ಲಿ ಪಾಠ ಮಾಡುವವನು. ಗುಪ್ತಚಾರನೆಂದು ತಪ್ಪಾಗಿ ತಿಳಿದು ಎರೆಸ್ಟ್ ಮಾಡಿದ್ದಾರೆ' ಎಂದರು. ಆತ ಜವಾನರಿಗೆ ಈತನನ್ನು ಇಂಟೆಲಿಜೆನ್ಸ್ ಆಫೀಸರ್‌ಗೆ ತೋರಿಸಿ ಹೋಗಿ ಎಂದರಂತೆ. ಇಂಟೆಲಿಜೆನ್ಸ್ ಆಫೀಸರನ ಭೆಟ್ಟಿಯಾಯಿತು. ಅಲ್ಲಿ ಜೆ.ಜೆ.ಗೆ ಫೋನ್ ಮಾಡಿ ತನ್ನ ಗುರುತನ್ನು ಸಮರ್ಥಿಸಿಕೊಳ್ಳಲು ಹೆಬ್ಬಾರರು ಅಂತೂ ಶಕ್ತರಾದರು.

*

ನೂತನ ಕಲಾಮಂದಿರದ ಶಿಕ್ಷಕರೂ ವಿದ್ಯಾರ್ಥಿಗಳೂ ಪ್ರೊ. ದಂಡಾವತಿಮಠ ಅವರ ನೇತೃತ್ವದಲ್ಲಿ ವಿದೇಶಕ್ಕೆ ಹೊರಟು ನಿಂತ ಹಳೆ ವಿದ್ಯಾರ್ಥಿಗೆ ಒಂದು ವಿದಾಯ ಸತ್ಕಾರ ಏರ್ಪಡಿಸಿ ಒಳ್ಳೆಯ ಮಾತುಗಳನ್ನು ಹೇಳಿ ಹರಸಿದ್ದಲ್ಲದೆ ಒಂದು ಪ್ಯಾಲೆಟ್, ಬ್ರಶ್ ಮತ್ತು ಸ್ಕೆಚ್ ಪುಸ್ತಕ ಉಡುಗೊರೆ ಕೊಟ್ಟರು. ಬಾಂಬೆ ಆರ್ಟ್ ಸೊಸೈಟಿಯ ಐದು ತೊಲೆ ಚಿನ್ನದ ಪದಕಕ್ಕಿಂತಲೂ, ಗಳಿಸಿದ ಎಲ್ಲ ಬಹುಮಾನಗಳಿಗಿಂತಲೂ ಹೆಚ್ಚಿನದೆಂದು ತೋರುವ ಈ ಉಡುಗೊರೆಯನ್ನೂ ಹಳೇ ಹೊಸ ೨೫ ಚಿತ್ರಗಳನ್ನೂ ಹಿಡಿದುಕೊಂಡು ೧೯೪೯ರ ಏಪ್ರಿಲ್ ೨೫ನೇ ತಾರೀಖು ಎಸ್.ಎಸ್. ಮಲೋಜ ಎಂಬ ಹಡಗಿನಲ್ಲಿ

ಲಂಡನ್ನಿಗೆ ಅಭಿಮುಖವಾಗಿ ಹೆಬ್ಬಾರರು ಪಯಣಿಸಿದರು. ಹಡಗಿನಲ್ಲಿ ಸಹಪ್ರಯಾಣಿಕರ ಜತೆಗೆ ಸಂತೋಷದಿಂದ ಮೂರು ವಾರ ಕಳೆಯುವುದೇನೂ ಕಷ್ಟವಾಗಲಿಲ್ಲ. ಕೆಬಿನ್ ಮೇಟ್ ಗುಹಾ, ಬೆನರ್ಜಿ, ಶ್ರೀನಿವಾಸನ್, ಘೋಷ್, ಸುಧಾರೆಡ್ಡಿ ಮುಂತಾದವರೊಡನೆ ಸರಸಲ್ಲಾಪ ಒಂದೆಡೆ; ಅರಬೀ ಸಮುದ್ರ, ಕೆಂಪು ಸಮುದ್ರ, ಸುಯೇಜ್ ಕಾಲುವೆ,



ನೀರಿನ ಬವಣೆ: ಒಂದು ಅನನ್ಯ ಚಿತ್ರ

ಭೂಮಧ್ಯ ಸಮುದ್ರ, ಜಿಬ್ರಾಲ್ಟರ್, ಬಿಸ್ಕೇ ಕೊಲ್ಲಿಗಳಲ್ಲಿ ಹಡಗು ಚಲಿಸುತ್ತಿರುವಾಗ ಉಂಟಾಗುವ ವಿಧವಿಧ ಅನುಭವ ಇನ್ನೊಂದು ಕಡೆ. ಇವೆಲ್ಲ ಹೆಬ್ಬಾರರ ಮನಸ್ಸಿಗೆ ಹಿಡಿಸುವ ವಿಷಯಗಳೇ ಆಗಿದ್ದುವು. ಅದೇ ಹಡಗಿನಲ್ಲಿ ಪ್ರಸಿದ್ಧ ಮಾನವಶಾಸ್ತ್ರಜ್ಞ ಡಾ. ಹೈಮಂಡಾರ್ಫ್ ಕೂಡ ಪ್ರಯಾಣ ಹೊರಟಿದ್ದರು. ಗ್ರ್ಯಾಂಡ್ ಫ್ಯಾನ್ಸೀ ಡ್ರೆಸ್ ನರ್ತನದ ರಾತ್ರಿ ಹೆಬ್ಬಾರರು ಕಚ್ಚೆ ಪಂಚೆ, ಮುಂಡಾಸಿನ ಒಬ್ಬ ಮುದಿ ಬ್ರಾಹ್ಮಣನ ವೇಷದಲ್ಲಿ ಬಾಲ್‌ರೂಮಿನಲ್ಲಿ ಕೊಡೆ ಸಹಿತ ಪ್ರತ್ಯಕ್ಷರಾದರು. ಎಲ್ಲ ಕಡೆಗೂ ಸಂಚರಿಸಿ ಎಲ್ಲರನ್ನೂ ನಗಿಸಿದರು. 'ಮುದುಕ'ನನ್ನು ಯಾರೂ ನರ್ತನಕ್ಕೆ ಆಹ್ವಾನಿಸದೆ ಇದ್ದರೂ, ಕಟ್ಟಕೊನೆಯಲ್ಲಿ ಬಹುಮಾನಗಳ ಘೋಷಣೆ ಮಾಡಿದಾಗ ಪ್ರಥಮ ಪ್ರಶಸ್ತಿ ಬಡ ಬ್ರಾಹ್ಮಣ ವೇಷಧಾರಿಗೇ ಬಂದುಬಿಟ್ಟಿತು.

*

ಪ್ಯಾರಿಸಿನಲ್ಲಿ ಸ್ವಾಗತಕ್ಕೆ ಬಂದ ಆತಿಥೇಯ ಭಟ್ಟರು (೧೯-೧೦-೪೯) ಹೆಬ್ಬಾರರನ್ನು ಒಂದು ಹೋಟಲಲ್ಲಿರಿಸಿದರಂತೆ. ಹೆಬ್ಬಾರರಿಗೆ ಅಧ್ಯಯನ ಕಾಲದಲ್ಲಿ ಹೋಟಲಿಗಿಂತ ಇಂಗ್ಲೆಂಡಿನ ಹಾಗೆ ಎಲ್ಲಾದರೂ ಪೇಯಿಂಗ್ ಗೆಸ್ಟ್ ಸೌಕರ್ಯವುಳ್ಳ ಮನೆ ಸಿಕ್ಕರೆ ಒಳ್ಳೆಯದೆಂದು ಕಂಡಿತು. ಅದಕ್ಕೆ ಪೋಷಕವಾಗಿ ಹೋಟಲಲ್ಲಿ ಒಂದು ವಿಶೇಷ ಪರಿಸ್ಥಿತಿಯೂ ಇತ್ತು. ಅದೇನೆಂದರೆ ಭಾರತೀಯ ಪ್ರತಿಕೋದ್ಯಮಿಯಿಂದ ಪರಿತ್ಯಕ್ತೆಯಾದ ಒಬ್ಬ ವಿದೇಶೀ ಮಹಿಳೆ ಅಲ್ಲಿ ವಾಸವಾಗಿದ್ದಳು. ಹೆಬ್ಬಾರರೂ ಭಾರತೀಯರೆಂದು ಗ್ರಹಿಸಿ ಅವರನ್ನು ಕೋಣೆಗೆ ಕರೆದು ತನ್ನ ಸುಖಕಷ್ಟಗಳನ್ನು ತೋಡಿಕೊಂಡಳು. ಒನಪುವೈಯಾರದ ಆ ತರುಣಿ ಇರುವಲ್ಲಿ ತನ್ನ ತಪಸ್ಸಿಗೆ ಭಂಗ ಬರಬಹುದೆಂದು ಊಹಿಸಿ ಹೆಬ್ಬಾರರು ಮತ್ತಷ್ಟು ಜೋರಾಗಿ ಮನೆಯ ಹುಡುಕಾಟ ನಡೆಸಿದರು. ಸುದೈವವಶಾತ್ ಅನತಿ ಕಾಲದಲ್ಲೇ ಒಂದು ಒಳ್ಳೆಯ ಮನೆ ಸಿಕ್ಕಿತು. ಮಧ್ಯ ವಯಸ್ಸಿನ ಮಹಿಳೆ, ಗಂಡ ಇಂಜಿನಿಯರ್, ಮಗ ಮಿಲಿಟರಿ ಸೇವೆಯಲ್ಲಿದ್ದಾನೆ-ಈ ಕುಟುಂಬಕ್ಕೆ ೫ನೇ ಮಹಡಿ ಮನೆಯಲ್ಲಿ ಈಗಾಗಲೇ ಒಬ್ಬಳು ಅಮೆರಿಕನ್ ಹುಡುಗಿ ಅತಿಥಿ ರೂಪದಲ್ಲಿ ಬಾಡಿಗೆ ತೆತ್ತು ಇದ್ದಾಳೆ. ಆದ್ದರಿಂದ ಸಿಗಬಹುದೆಂದು ಯೋಚಿಸಿ ಹೋದರೆ ಯಜಮಾನಿತಿ, ಕೊಡುತ್ತೇವೆ, ಹದಿನೈದು ದಿನ ಬಿಟ್ಟುಬರಬೇಕು. ಈ ಅಮೆರಿಕನ್ ಹುಡುಗಿ ಹೋದ ಮೇಲೆ ಕೊಡುತ್ತೇನೆ, ಎಂದಳು. ಹೆಬ್ಬಾರರು ತನಗೆ ಹೋಟಲು ಬಿಡಲೇಬೇಕು. ಅಲ್ಲಿನ ಊಟ ಸೇರುವುದಿಲ್ಲ. ನಿಮ್ಮ ಮನೆಯಲ್ಲಿ ಯಾವ ಒಂದು ಮೂಲೆ ಕೊಟ್ಟರೂ ಸರಿಯೇ, ಎಂದು ಹಠ ಹಿಡಿದಾಗ 'ಏನಪ್ಪಾ ನಿನ್ನನ್ನು ನೋಡಿದರೆ ನನ್ನ ಮಗನ ಹಾಗೇ ಕಾಣುತ್ತೀ. ಸರಿ ಬಿಡು, ಹದಿನೈದು ದಿನ ನನ್ನ ಕೋಣೆಯನ್ನೇ ಕೊಟ್ಟು ಬಿಡುತ್ತೇನೆ, ಎಂದು ಹೇಳಿದ್ದು ಹೆಬ್ಬಾರರಿಗೆ ಪರಮಾನಂದ ಉಂಟುಮಾಡಿತು. ಹದಿನೈದು ದಿನ ಕಳೆದ ಮೇಲೆ ಅತಿಥಿಯನ್ನಿರಿಸಿದ ಕೋಣೆಯಲ್ಲಿ ಮುಂದಿನ ಐದು ತಿಂಗಳು ಹೆಬ್ಬಾರರು ಬಿಡಾರ ಹೂಡಿದರು.

ಶ್ರೀಮತಿ ಮತ್ತು ಶ್ರೀ ಬೂಶೇ ಅವರು ಒಳ್ಳೆಯ ದಂಪತಿ. ಅವರ ಮನೆಯ ಕೊಠಡಿ ವಿಶಾಲವಾಗಿದ್ದು ಕೊಠಡಿಯಿಂದ ಹೊರಗಡೆ ನೋಡಿದರೆ ಉಪವನದ ಒಳ್ಳೆ ನಿಸರ್ಗ ಸುಂದರ ದೃಶ್ಯವೂ ಇತ್ತು. ಬಂದವರೆಲ್ಲ 'ಎಂಥ ಅರಮನೆಯಲ್ಲಿದ್ದೀರಿ ಹೆಬ್ಬಾರ್' ಎಂದು ಅಚ್ಚರಿ ಸೂಚಿಸುತ್ತಿದ್ದರು. ಬೆಳಿಗ್ಗೆ ಮನೆಯ ನೌಕರಾಣಿ ಬಂದಮೇಲೆ ಮುಂಜಾನೆ ಟೀ ಬರುತ್ತಿತ್ತು. ಗಂಟೆ ಕಳೆದು ಬ್ರೇಕ್‌ಫಾಸ್ಟ್-ಬೇಕಾದಷ್ಟು ಬ್ರೆಡ್, ಜಾಮ್, ಬೆಣ್ಣೆ, ಹಾಲು, ಚಹಾ-ಅದು ಬಾಡಿಗೆ ಹಣದಲ್ಲೇ ಸೇರಿ- ಬರುತ್ತಿತ್ತು. ಕೊಠಡಿಯ ಒಳಗೆ ಎಲ್ಲವನ್ನು ಸೇವಿಕೆ ತಂದುಕೊಡುವಳು. ಮನೆಯ ಯಜಮಾನ ಭಾರೀ ವಿನೋದ ಪ್ರವೃತ್ತಿಯ ಮನುಷ್ಯ, ಮೃದು ಸ್ವಭಾವದವನು. ತಮ್ಮಲ್ಲಿ ಯಾರು ಹೆಚ್ಚು ಒಳ್ಳೆಯವರೆಂದು ಗಂಡ-ಹೆಂಡಿರೊಳಗೆ ಪೈಪೋಟಿ ಇರುವಂತೆ ತೋರು

ತ್ತಿತಂತೆ. ಪ್ಯಾರಿಸಿನಲ್ಲಿ ಅಪೂರ್ವ ದಂಪತಿ ಇವರು-ಏಕೆಂದರೆ ಫ್ರೆಂಚ್‌ರಾದರೂ ಇಂಗ್ಲಿಷ್ ಚೆನ್ನಾಗಿ ಮಾತನಾಡಬಲ್ಲವರು. 'ನೋಡು ಹೆಬ್ಬಾರ್, ನಮ್ಮೂರಲ್ಲಿ ನೀನು ಮಾಂಸ ತಿನ್ನದೇ ಇದ್ದರೆ ಅಡ್ಡಿ ಇಲ್ಲ, ಶಾಕಾಹಾರಿಯೇ ಆಗಿರು. ಆದರೆ ನೀರು ಮಾತ್ರ ಕುಡಿಯಬೇಡ, ಅದರಿಂದ ಕ್ಷಯ ರೋಗ ತಗಲೀತು. ಈ ಹೆದರಿಕೆಗೆ ನಾವು ಬಾಯಾರಿಕೆಗೆ ವೈನ್ ಕೊಡುತ್ತೇವೆ. ನೀನು ಅದೇ ಮಾಡಬೇಕು' ಎಂದು ಹಾಸ್ಯದ ಮಾತು ಹೇಳಿದ. ರಾತ್ರಿಯ ಹೊತ್ತು



ಬೂಶೇ ಕುಟುಂಬದ ಜೊತೆಗೆ ಹೆಬ್ಬಾರರ ಊಟ.

*

ಮುಂಬಯಿಗೆ ೧೯೫೦ರ ಮೇ ೩ನೇ ತಾರೀಕು ಮರಳುವಾಗ ಹೆಬ್ಬಾರರು ಪ್ಯಾರಿಸಿನಿಂದ ನೇರಬರಲಿಲ್ಲ. ಸ್ವಿಟ್ಸರ್ಲೆಂಡಿಗೆ ಹೋಗಿ ಅಲ್ಲಿನ ಆಪ್ತ ಮಿತ್ರರಾದ ಧೀರೂಬಾಯ್ ಮತ್ತು ಮಾಧುರಿಬೆನ್ ಅವರನ್ನು ನೋಡದೆ ಬರುವುದು ಸಾಧ್ಯವಿರಲಿಲ್ಲ. ಸ್ವಿಟ್ಸರ್ಲೆಂಡಿನಲ್ಲಿ ಒಂದು ಭಿತ್ತಿ ಚಿತ್ರ ಮಾಡಬೇಕಾಗಿತ್ತು. ಅದರ ಕೆಲಸ ಮುಗಿಸಿ ಅನ್ವರ್ಥನಾಮ ಪಡೆದ ಮಾಧುರಿಬೆನ್ ಕುಟುಂಬದ ಜತೆಗೆ ಕೆಲ ದಿನಗಳನ್ನು ಕಳೆದು ಆಮೇಲೆ ವಿಮಾನದ ಮೂಲಕ ಮುಂಬಯಿಗೆ ಬಂದಿಳಿದಾಗ ಸ್ವಾಗತಕ್ಕೆ ಬಂದಿದ್ದ ಮಿತ್ರರ ನಿಸ್ತೇಜ ಮುಖಮುದ್ರೆಯನ್ನು, ಮುಂಬಯಿ ಮಹಾನಗರದ ಕೊಳಗೇರಿಯ ಹಾದಿಬೀದಿಗಳನ್ನು, ಉರಿಬಿಸಿಲನ್ನು, ಸ್ವಿಟ್ಸರ್ಲೆಂಡಿನ ಜನರ ಉಲ್ಲಾಸ ಹಾಗೂ ನಿಸರ್ಗದ ನೈರ್ಮಲ್ಯದೊಡನೆ ಹೋಲಿಸಿದರೆ ಸಂಕಟವಾಗುತ್ತಿತ್ತು. ಸಾಲದ್ದಕ್ಕೆ ಹೆಬ್ಬಾರರ ಶಾಶ್ವತ ಮಿತ್ರ 'ತಲೆನೋವು' ಬಾಧಿಸಲು ತೊಡಗಿತು. ಶ್ರೀಮಂತ ಮಿತ್ರನಾದ ಜಯಂತಭಾಯ್ ದಾನಿ ದಿವಾಳಿ ಎದ್ದು ಮನೆಮಾರು ಮಾರುವಷ್ಟು ಶೋಚನೀಯ ಆರ್ಥಿಕ ದುಸ್ಥಿತಿಯೊಳಗಾಗಿದ್ದ. ಆತನ ಫರ್ನಿಚರ್ ಮತ್ತು ಇತರ ಸರಂಜಾಮುಗಳನ್ನು ಮಾರಿಸಿ ಕೊಡಲು ಹೆಬ್ಬಾರರು ನೆರವಾಗಬೇಕಾಯಿತು. ದಾನಿ ಹಿಂದೆ ಕೊಂಡಿದ್ದ 'ಕನ್ನಿಕೆ' ಚಿತ್ರವನ್ನು ಮಾಧುರಿಬೆನ್‌ಗೆ ಒಂದು ಸಾವಿರ ರೂಪಾಯಿಗೆ ಮಾರಿಸಿಕೊಟ್ಟರು. ತನ್ನ ಕಷ್ಟಮಾತ್ರವೇ ಅಲ್ಲ ಮಿತ್ರರ ಕಷ್ಟಗಳಿಗೂ ಪರಿಹಾರ ಹುಡುಕುವ ಸಂದರ್ಭ.

ಮೊತ್ತಮೊದಲಿನ ಕರ್ತವ್ಯ ಉಡುಪಿಯಲ್ಲಿದ್ದ ಹೆಂಡತಿ ಮತ್ತು ರೇಖಾನನ್ನು ಕರೆದುಕೊಂಡು ಬರುವುದು. ಮೇ ೧೭ಕ್ಕೆ ಅಲ್ಲಿಗೆ ಹೋದರು. ವಿದೇಶಯಾತ್ರೆ ಆದರಲ್ಲೂ ಕಲಾಯಾತ್ರೆ ಮಾಡಿದವರು ಉಡುಪಿಯಲ್ಲಿ ಬಹಳ ಮಂದಿ ಆ ಕಾಲಕ್ಕೆ ಇರಲಿಲ್ಲ. ಅಲ್ಲದೆ ಹೆಬ್ಬಾರರು ಕಲಿತ ಕ್ರಿಶ್ಚನ್ ಹೈಸ್ಕೂಲು ಪ್ರಸಿದ್ಧನಾದ ವಿದ್ಯಾರ್ಥಿಯನ್ನು ಮರೆಯಲುಂಟೇ? ಶಾಲೆಯ ಹಳೇ ವಿದ್ಯಾರ್ಥಿ ಸಂಘ ಹೆಬ್ಬಾರರಿಗೆ ಸನ್ಮಾನ ಮಾಡಿ ಗೌರವಿಸಿತು. ಬಂಧುಬಾಂಧವರನ್ನು ಕಾಣಲು ಮಂಗಳೂರು, ಸುರತ್ಕಲ್, ಪಡುಬಿದ್ರಿ ಕಟ್ಪಿಂಗೇರಿಗಳಿಗೂ, ಮಿತ್ರ ಶಿವರಾಮ ಕಾರಂತರನ್ನು ನೋಡಲು ಪುತ್ತೂರಿಗೂ ಹೋಗಿ ಮದರಾಸು ದಾರಿಯಾಗಿ ಮುಂಬಯಿಗೆ ಬರಲು ಸುಮಾರು ಒಂದು ತಿಂಗಳು ಹಿಡಿಯಿತು. ಇರುವ ಪುಡಿಕಾಸೆಲ್ಲ

ಯಾತ್ರೆಗೆ ಮುಗಿದು ಮುಂದೇನು ಎನ್ನುವ ಪ್ರಶ್ನೆ ಇದಿರುಗೊಂಡಾಗ ರೇಖಾ 'ಪಪ್ಪಂಗೆ ದುದ್ದು ಕೊಡಿ' ಎಂದು ಪ್ಯಾರಿಸಿಗೆ ಬರೆದ ಪತ್ರ ನೆನಪಾಯಿತು. 'ಈಗಂತೂ ನಾನು ಕೂಡ ಈ ಪ್ರಾರ್ಥನೆಗೆ ದನಿ ಕೂಡಿಸಬೇಕಾದ ಪ್ರಸಂಗ. ಹೋರಾಟದಲ್ಲಿಯೇ ೩೯ ವರ್ಷ ಕಳೆದು ಹೋಗಿದೆ-ಇನ್ನೂ ಜೀವನಾಂಶಕ್ಕಾಗಿ ಹೋರಾಟ ಮಾಡಬೇಕಾದ ಪರಿಸ್ಥಿತಿ ಏಕೆ ತೊಲಗಿಲ್ಲ? ನಾಗಮಂಡಲದ ೫ ಚಿತ್ರಗಳಿಗೆ ಇಲ್ಲಸ್ಟ್ರೇಟೆಡ್ ವೀಕ್ಲಿ ಕೊಟ್ಟ ೫೦೦ ರೂಪಾಯಿ, ಇನ್ನೊಂದೆರಡು ಚಿತ್ರಗಳಿಂದ ದೊರೆತ ೧೫೦ ರೂಪಾಯಿ ಇಂಥ ಅಲ್ಪ ವರಮಾದಿಂದ ದಿನ ನೂಕುವುದಾದರೂ ಹೇಗೆ? ಮೊದಲು ತಾಯಿತಂದೆಯ ಮೇಲೆ, ಮುಂಬಯಿಗೆ ಬಂದ ಮೇಲೆ ಅಣ್ಣನ ಮೇಲೆ ಪರಾವಲಂಬಿಯಾಗಿಯೇ ದಿನ ಕಳೆಯುತ್ತಿರುತ್ತೇನಲ್ಲಾ' ಎಂಬ ಬೇಸರ. ಅದರ ನಡುವೆ ತನ್ನ ಕಲಾಕರ್ಮ ಸರಿಯಾಗಿ ನಡೆಯಬೇಕಾದರೆ ಬೇರೆ ಬಿಡಾರ ಮಾಡಬೇಕೆಂಬ ಬಲವತ್ತರ ಆಸೆಯನ್ನು ಅದುಮಿ ಹಿಡಿಯಬೇಕು. ಎಷ್ಟು ದಿನ, ಎಷ್ಟು ವರ್ಷ? ಅಂತೂ ಕೊಹಿನೂರ್ ರೋಡಿನ ಉಷಾ ಎಸ್ಟೇಟ್



ಮನೆ ಎಸ್.ಕೆ. ಪಾಟೀಲರ ದಯದಿಂದ ದೊರೆತಾಗ ಆದ ಸಂತೋಷ ಅಷ್ಟಿಷ್ಟಲ್ಲ; ಅದೂ ಬಹಳ ಕಾಲ ಉಳಿಯಲಿಲ್ಲ. ನಾಲ್ಕಾರು ತಿಂಗಳಲ್ಲಿ ಮನೆ ಬಿಡಬೇಕಾಯಿತು. ವೇಲ್ಕರ್‌ನ ಮಹಾಬಲೇಶ್ವರದ ಮನೆಯಲ್ಲಿ ಹಂಗಾಮಿಯಾಗಿ ಇರಬೇಕಾಯಿತು. ಹೋರಾಟಕ್ಕೆ ನಿಲುಗಡೆಯೇ ಇರಲಿಲ್ಲ.

*

೧೯೭೩: ಕಲಾಸಂಘಟನೆಯ ಸಂಬಂಧ ಇನ್ನೊಂದು ದುಃಖಕಾರಕ ವಿದ್ಯಮಾನ ಮುಂಬಯಿಯ ಕಲಾಕೇಂದ್ರದಲ್ಲಿ ನಡೆಯಿತು. ೨೦ ವರ್ಷಗಳ ಕಾಲ ಹೆಬ್ಬಾರರು ಕಲಾಕೇಂದ್ರದ ಅಧ್ಯಕ್ಷರು, ಕೆ.ಎಚ್. ಆರಾ ಕಾರ್ಯದರ್ಶಿ, ಆರಾನಿಗೆ ತಾನೇ ಸಮಿತಿಯನ್ನು, ಅಧ್ಯಕ್ಷರನ್ನು ಹೇಳದೆ ಕೇಳದೆ ತನ್ನದೇ ರಾಜ್ಯಭಾರ ನಡೆಸುವ ಅಭ್ಯಾಸ. ಸಣ್ಣಪುಟ್ಟ ಘಟನೆಗಳನ್ನು ನಿರ್ಲಕ್ಷಿಸಿದ್ದರಿಂದ ೨೦ ವರ್ಷಗಳ ಕಾಲ ನಿರಾತಂಕವಾಗಿ ಕೇಂದ್ರದ ಕೆಲಸದಲ್ಲಿ ಇಬ್ಬರೂ ಪ್ರವೃತ್ತರಾಗಿರುವುದು ಸಾಧ್ಯವಾದದ್ದು. ಆರಾ ೧೯೭೩ರ ಪ್ರದರ್ಶನದ ಆರಂಭದ ದಿನವನ್ನೇ ಸಮಿತಿಯನ್ನು ಕೇಳದೆ ಬದಲಾಯಿಸಿಬಿಟ್ಟಿದ್ದ. ಹಿಂದೆ ಫೋನಿನಲ್ಲಿ ಸಮ್ಮತಿಸಿದ ವಿಷಯಗಳಿಗೂ ತಕರಾರೆಬ್ಬಿಸಿದ. ಇಂಥ ಸರ್ವಾಧಿಕಾರ ಪ್ರವೃತ್ತಿಗೆ ಆಕ್ಷೇಪಿಸಿ ಹೆಬ್ಬಾರರು ತನ್ನ ಅಧ್ಯಕ್ಷತೆಗೆ ರಾಜೀನಾಮೆ ಕೊಟ್ಟರು. ಜಗಳ ಮಾಡಿಕೊಂಡಿರುವುದು ಅವರ ಸ್ವಭಾವಕ್ಕೆ ಹೇಳಿಸಿದ್ದಾಗಿರಲಿಲ್ಲ. ಎಷ್ಟು ವರ್ಷ ಸಹಿಸಬಹುದೋ ಅಷ್ಟು ಸಹಿಸಿದ್ದಾಯಿತು. (ಆಮೇಲೆ ಬೇರೆ ಮಿತ್ರರ ಒತ್ತಡಕ್ಕೆ ರಾಜೀನಾಮೆ ಹಿಂದೆ ತೆಗೆದುಕೊಂಡರು.) ಇಷ್ಟಾಗಿಯೂ ಆರಾನ ಮೇಲೆ ವೈಯಕ್ತಿಕವಾದ ಯಾವ ಹಗೆಯೂ ಇರಲಿಲ್ಲ. ೧೯೮೭ರಲ್ಲಿ ಆರಾನಿಗೆ ಲಲಿತಕಲಾ ಆಕಾಡೆಮಿಯ ಫೆಲೋಶಿಪ್ ಗೌರವಕ್ಕೆ ಶಿಫಾರಸು ಮಾಡಿದ್ದಲ್ಲದೆ ಮುಂಬಯಿಯಲ್ಲಿ ಆ ಗೌರವಪ್ರದಾನಕ್ಕಾಗಿ ಒಂದು ಸಮಾರಂಭವನ್ನು ಏರ್ಪಡಿಸಿದ್ದೂ

ಹೆಬ್ಬಾರರೇ.

*

ಮೈಸೂರು ವಿಶ್ವವಿದ್ಯಾನಿಲಯ ಜುಲೈ ೨೭ರ ಘಟಿಕೋತ್ಸವದಲ್ಲಿ ಹೆಬ್ಬಾರರಿಗೆ ಗೌರವ ಡಾಕ್ಟರೇಟ್ ದಯಪಾಲಿಸಿತು. (ಜತೆಗೆ ಡಾಕ್ಟರೇಟ್ ಪಡೆದವರು: ಆರ್.ಕೆ. ನಾರಾಯಣ, ಆದ್ಯ ರಂಗಾಚಾರ್, ಎಂ.ಎಲ್. ವಸಂತಕುಮಾರಿ, ದೊರೆಸ್ವಾಮಿ ಅಯ್ಯಂಗಾರ್, ವಿಜ್ಞಾನಿ ಯು.ಆರ್. ರಾವ್). ಕಾಲೇಜಿನ ಮೆಟ್ಟಲು ಹತ್ತುವ ಭಾಗ್ಯವಿಲ್ಲದ ತನ್ನನ್ನು ಕರ್ನಾಟಕದ ಒಂದು ವಿಶ್ವವಿದ್ಯಾನಿಲಯ ಕರೆದು ಗೌರವಿಸಿದ್ದನ್ನು ಹೆಬ್ಬಾರರು ಬಹುಪರಿಯಾಗಿ ನೆನಪಿಸಿಕೊಳ್ಳುತ್ತಾರೆ. ಈ ರೀತಿ ಪದೇ ಪದೇ ಕರುಣೆ ತೋರಿಸಿದ ಬದುಕಿನ ಮಹಾಚೇತನಕ್ಕೆ ವಂದಿಸುತ್ತಾರೆ. ಮೈಸೂರು-ಬೆಂಗಳೂರಿನಲ್ಲಿ ತರುವಾಯ ಸನ್ಮಾನಗಳ ಸುರಿಮಳೆ: ಚಾಮರಾಜಪೇಟೆ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್, ಕೆನ್‌ಸ್ಕೂಲ್, ಚಿತ್ರಕಲಾ ಪರಿಷತ್ತು ಇ.ಇ. ಮುಂಬಯಿಗೆ ಮರಳಿದ ಮೇಲೆ ಗೋಕುಲದಲ್ಲಿ ಅಕಾಡೆಮಿ ಪ್ರಶಸ್ತಿ ಮತ್ತು ವಾರ್ಸಿಟಿ ಡಾಕ್ಟರೇಟ್-ಹೀಗೆ ಎರಡೆರಡು ಪ್ರಶಸ್ತಿಗಳನ್ನು ಗೆದ್ದುಕೊಂಡ 'ನಮ್ಮ' ಕಲಾವಿದ ಹೆಬ್ಬಾರರಿಗೆ ಕನ್ನಡಿಗರಿಂದ ಆದರಪೂರ್ವ ಸತ್ಕಾರ ಸಭೆ. ಇಂಥ ಎಲ್ಲಾ ಸನ್ಮಾನಗಳಲ್ಲಿಯೂ ಹೆಬ್ಬಾರರಿಗೆ- 'ಇವರೆಲ್ಲ ಏತಕ್ಕಾಗಿ ಸನ್ಮಾನ ಮಾಡುತ್ತಿದ್ದಾರೆ? ನನ್ನ ಹೆಸರಿಗೋ ಪ್ರಸಿದ್ಧಿಗೋ? ನನ್ನ ಕೃತಿಗಳಲ್ಲಿ ಏನನ್ನಾದರೂ ಇವರು ನೋಡಿದ್ದಾರೋ? ನೋಡುವ ಆಸೆ ಇವರಿಗಿದ್ದಿತ್ತೋ? ಅಪರಾಧ ನನ್ನದೇ ಇರಬೇಕು. ಇವರನ್ನು ನಾನು ನನ್ನ ಪ್ರದರ್ಶನಗಳಿಗೆ ಕರೆಯಬೇಕಾಗಿತ್ತೋ ಏನೋ. ಜನರು ನಮ್ಮ ಹತ್ತಿರ ಬರುವುದಿಲ್ಲವೆಂದು ತೀರ್ಪು ಕೊಡುವ ಮುನ್ನ ನಾವು ಅವರಿಗೆ ಬರಲು ಏನು ಪ್ರೇರಣೆ ಒದಗಿಸಿದ್ದೇವೆ ಎನ್ನುವುದನ್ನೂ ಗಮನಿಸಬೇಡವೆ?' ಎಂದು ತಮ್ಮ ಪ್ರಶ್ನೆಗೆ ತಾವೇ ಉತ್ತರಿಸಿ ತಮ್ಮನ್ನೇ ಅಪರಾಧಿ ಸ್ಥಾನದಲ್ಲಿ



ಹೆಬ್ಬಾರರು ರೇಖಿಸಿದ ಕವಿವರ್ಯ

ನಿಲ್ಲಿಸಿಕೊಳ್ಳುತ್ತಾರೆ.

*

ಯಾವುದೇ ಸ್ಥಾನಮಾನಗಳು ಮನುಷ್ಯನಿಗೆ ಸಿಕ್ಕಾಗ ಅವನದನ್ನು ತನ್ನ ಸ್ವಂತ ಯೋಗ್ಯತೆಯ ಬಲದಿಂದಲೇ ಸಂಪಾದಿಸಿದ್ದಾಗಬೇಕು ಮತ್ತು ಅದನ್ನು ಸರ್ವಥಾ ತನ್ನ ಸ್ವಾರ್ಥಕ್ಕಾಗಿ, ತನ್ನ ಕೀರ್ತಿ ಸಂವರ್ಧನೆಗಾಗಿ ಅಥವಾ ಸ್ವಾರ್ಥಸಂಗ್ರಹಕ್ಕಾಗಿ ಬಳಸಿಕೊಳ್ಳಬಾರದೆಂಬುದು ಹೆಬ್ಬಾರರ ದೃಢವಾದ ನಿಲುಮೆ. ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಡಾಕ್ಟರೇಟ್ ಕೊಟ್ಟಿತ್ತಷ್ಟೆ. ಅವರು ಲಲಿತಕಲಾ ಅಕಾಡೆಮಿಗೆ ಅಧ್ಯಕ್ಷರಾಗಿ ನೇಮಿತರಾದ ಹೊತ್ತಿನಲ್ಲಿ ಮಾಡಿಸಿದ ಒಂದು ಆಮಂತ್ರಣ ಪತ್ರದಲ್ಲಿ ಈ ಗೌರವಾರ್ಥ ದೊರೆತ ಡಾಕ್ಟರೇಟನ್ನು ಅವರ ಹೆಸರಿನ ಹಿಂದೆ ಹಚ್ಚಿ ಮುದ್ರಿಸಿದರಂತೆ. ಆಮಂತ್ರಣ ಪತ್ರ ಮುದ್ರಣಾಲಯದಿಂದ ಬಂದ ಮೇಲೆ ಇಡೀ ಕಟ್ಟಿಗೆ ಕಟ್ಟನ್ನೇ ವಿಸರ್ಜಿಸಿ ಹೆಬ್ಬಾರರು ಅದರಲ್ಲಿ ಡಾಕ್ಟರೇಟ್ ಅಳಿಸಿ ಮರುಮುದ್ರಣ ಮಾಡುವಂತೆ ಆದೇ

ಶವಿತ್ತರು. ಕರ್ತವ್ಯ ಸಂದರ್ಭದಲ್ಲಿ ಪ್ರಾಪ್ತವಾಗುವ ಇಂಥ ಡಿಗ್ರಿಗಳು, ಉಪಾಧಿಗಳು, ಸಮ್ಮಾನದ ಬಿರುದುಗಳು ತತ್ಕಾಲ ಬಾವಲಿಗಳೇ ವಿನಾ ಅವುಗಳನ್ನು ಬೆನ್ನಲ್ಲಿ ಹೊತ್ತು ಯಾರೂ ಮೆರೆಯಕೂಡದೆಂಬುದು ಅವರ ಅಭಿಪ್ರಾಯ.

ಲಲಿತಕಲಾ ಅಕಾಡೆಮಿಯಂಥ ಸಂಸ್ಥೆಯ ಅಧ್ಯಕ್ಷತೆ ಉದ್ಯೋಗವೇನೂ ಅಲ್ಲ. ಅದೊಂದು ಗೌರವದ ಹುದ್ದೆ ಅಲ್ಲವೆ? ಗೌರವ ಹುದ್ದೆಯಲ್ಲಿರುವಾಗ ಅದರ ವಿಳಾಸಕ್ಕೆ ಯಾರಾದರೂ ತನಗೆ ಪ್ರಶಸ್ತಿ ನೀಡಿದರೆ ಅದನ್ನೂ ಸ್ವಿಕರಿಸತಕ್ಕದ್ದಲ್ಲವೆಂಬ ತಮ್ಮ ನಿಲುಮೆಯನ್ನು ಸೋವಿಯತ್ ಲ್ಯಾಂಡ್ ಪ್ರಶಸ್ತಿ ದೊರಕಿದಾಗ ಬಹಿರಂಗವಾಗಿ ಆಚರಿಸಿ ಅಕಾಡೆಮಿಯ ಘನತೆಯನ್ನು ಎತ್ತಿ ಹಿಡಿದರು. ಸೋವಿಯತ್ ಲ್ಯಾಂಡ್ ಸಂಪಾದಕ ಅಬ್ರಾಮೊವ್ ಉಪಹಾರ ಸಹಿತ ಬಂದು ಏನೇನು ಒತ್ತಾಯ ಮಾಡಿದರೂ ಹೆಬ್ಬಾರರು ಒಪ್ಪಿಕೊಳ್ಳಲಿಲ್ಲ. ಪದನಿಮಿತ್ತವಾಗಿ ಬರುವ ಪ್ರಶಸ್ತಿ ಬಲ್ಲೆನೆಂದು ಬಿಟ್ಟರು. ಮರುವರ್ಷ ಸೋವಿಯತ್ ಲ್ಯಾಂಡ್ ಹೆಬ್ಬಾರರಿಗೆ ವೈಯಕ್ತಿಕ ಪ್ರಶಸ್ತಿ ಕೊಡುತ್ತೇವೆ ಎಂದು ೨೦, ಕಲಾನಗರ, ಬಾಂದ್ರಾ ವಿಳಾಸಕ್ಕೆ ಕಳಿಸಿಕೊಟ್ಟಾಗ ಒಪ್ಪಿಕೊಂಡರು.

*

ಬರೆದ ಚಿತ್ರ, ತೆರೆದ ಪುಸ್ತಕ-ಹೆಬ್ಬಾರರ ಬದುಕು: ಅದರ ಕಥೆ ಎಲ್ಲರಂತೆ ಸಾಮಾನ್ಯ ಸರಳ. ಅಂದರೆ ಕಲಾವಿದನೆಂಬ ಜಾತಿ ವೈಶಿಷ್ಟ್ಯವನ್ನು ಹೆಬ್ಬಾರರು ಎಂದೂ ಎಲ್ಲೂ ತೋರಿಸುವುದಿಲ್ಲ. ಪ್ರಶಂಸೆಗಾಗಿ ಹಾತೊರೆಯದ, ಪ್ರತಿಷ್ಠೆಗಾಗಿ ಕ್ಯೂ ಹಿಡಿಯದ, ಸ್ಥಾನಮಾನಗಳಿಗಾಗಿ ನೂಕುನುಗ್ಗಲಿನಲ್ಲಿ ಸೇರಿಕೊಳ್ಳದ ಹೆಬ್ಬಾರರನ್ನು ಈ ಒಂದೊಂದೂ ಯಥಾ ಕಾಲದಲ್ಲಿ ಅರಸಿಕೊಂಡು ಬಂದಿವೆ. ಹದಿನೈದು ವರ್ಷಗಳ ಹಿಂದೊಮ್ಮೆ ನಾನು ಅವರನ್ನು ಕಾಣಲು ಹೋದ ದಿನ ಸ್ವಿತ್ಸರ್ಲೆಂಡಿನ ಇಬ್ಬರು ತರುಣರು ಹೆಬ್ಬಾರರ ಚಿತ್ರಶಾಲೆ ನೋಡಲು ಬಂದಿದ್ದರು. ಒಬ್ಬ ಕಾಯಿದೆ ವಿದ್ಯಾರ್ಥಿ; ಇನ್ನೊಬ್ಬ ಅರ್ಥಶಾಸ್ತ್ರದ ವಿದ್ಯಾರ್ಥಿ. ವಿದ್ಯಾರ್ಥಿ ದೆಶೆಯಲ್ಲೇ ಅವರ ವಿಶ್ವಪರ್ಯಟನ, ಕಲಾಸಕ್ತಿ. ಹೆಬ್ಬಾರರು ಅವರಿಗೆ ತಮ್ಮ ಜತೆಗೇ ಊಟ ಬಡಿಸಿ ಆಮೇಲೆ ಸ್ಟುಡಿಯೋದಲ್ಲಿ ಈಚೆಗಿನ ಚಿತ್ರಗಳನ್ನು ತೋರಿಸಿ ಮಕ್ಕಳಿಗೆ ಪಾಠ ಹೇಳುವಂತೆ ವಿವರಿಸಿ ತಿಳಿಸಿದರು. ಚಿತ್ರವೀಕ್ಷಣೆಯ ರಸದೂಟವನ್ನುಂಡ ತರುಣರು ಧನ್ಯರಾದೆವೆಂದುಕೊಂಡರು. 'ನಡೆಯಿರಿ, ಇನ್ನು ನಿಮ್ಮ ಪ್ಲೇನಿಗೆ ಹೊತ್ತಾಯಿತು' ಎಂದು ತಮ್ಮ ಕಾರಿನಲ್ಲಿ ಅವರನ್ನು ಕೂಡ್ರಿಸಿ ಸಾಂತಾಕ್ರೂಜಿಗೆ ಒಯ್ದ ಈ ಚಿತ್ರಕಾರನ ಚಿತ್ರ ದೊಡ್ಡದೋ, ವ್ಯಕ್ತಿ ದೊಡ್ಡದೋ ಎಂದು ಆ ವಿದ್ಯಾರ್ಥಿಗಳು ಅಚ್ಚರಿಪಟ್ಟಿರಬೇಕು. ●

## ಈ ಸಾಗರಗಳಲ್ಲಿ

ಜಗತ್ತಿನ ನೆಲವನ್ನೆಲ್ಲ ಸಮತಟ್ಟು ಮಾಡಿ ಸೃಷ್ಟಿಯ ತೊಟ್ಟಿಲೆನಿಸಿದ ಸಾಗರಗಳ ನೀರನ್ನು ಅಲ್ಲಿ ಹಾಯಿಸಿದರೆ, ಇಡೀ ಜಗತ್ತಿನ ಭೂಭಾಗದ ಮೇಲೆಲ್ಲ 10,000 ಅಡಿ ಆಳದವರೆಗೆ ನಿಲ್ಲಬಲ್ಲಷ್ಟು ನೀರಿದೆ ಈ ಸಾಗರಗಳಲ್ಲಿ!

ಈ ನೀರನ್ನು ಆವಿಯಾಗಿ ಹೋಗಲು ಅನುವು ಮಾಡಿದಾಗ, ಇಡೀ ಜಗತ್ತಿನ ಉದ್ದಗಲಕ್ಕೂ 200 ಅಡಿ ಎತ್ತರದ ಉಪ್ಪಿನ ಪದರ ಉಳಿಯುವಷ್ಟು ಕ್ಷಾರಯುಕ್ತವಾಗಿವೆ ಈ ಸಾಗರಗಳು!

ಸೂಕ್ಷ್ಮದರ್ಶಕದಲ್ಲಿ ನೋಡಿದಾಗ ಒಂದು ಕ್ಯೂಬಿಕ್ ಅಡಿ ಅಗಲದ ನೀರಿನಲ್ಲಿ 20,000 ಜಾತಿಯ ಸಸ್ಯಗಳನ್ನು ಕಾಣಬಹುದು ಈ ಸಾಗರಗಳಲ್ಲಿ!

• ಸಂಗ್ರಹ: ಟಿ.ಎಸ್. ಲಲಿತ

# ಸೋಜಿಗದ ಸಂತೆ

ಈ ಜಗತ್ತು ನಿಗೂಢಗಳ ಗೂಡು. ಸೋಜಿಗದ ಸಂತೆ. ಅಚ್ಚರಿಗಳ ಆಗರ. ಕಂಡು ಅನುಭವಿಸಿ ಕಣ್ತುಂಬಿಸಿದ ಕೆಲವು ವಿಸ್ಮಯಕಾರಕ ಸಂಗತಿಗಳ ಬಗ್ಗೆ ನಮಗೆ ಗೊತ್ತು. ಅರಿವಿಗೆಬಾರದ ಅಚ್ಚರಿಗಳ ಸಂಖ್ಯೆಯೂ ಅಪಾರವೆ.

ಈ ಸೋಜಿಗಗಳು ನೆಲದ ಮೇಲೆ ನಡೆದಿರುವಂಥವು, ಭೂಮಿಯ ಆಳದೊಳಗೂ ಅಡಗಿರುವಂಥವು. ಮನುಷ್ಯನಿಗೆ ಸಂಬಂಧಪಟ್ಟಂಥ ಸೋಜಿಗಗಳೆಂದರೆ ನಮಗೆ ಇಷ್ಟವೆ.

ಇಲ್ಲಿ ಮುಂದಿನ ಪುಟಗಳಲ್ಲಿ ನಿಮಗಾಗಿ ಕೆಲವು ಅಚ್ಚರಿಯ ಸಂಗತಿಗಳನ್ನು ಆಯ್ದುಕೊಡುತ್ತಿದ್ದೇವೆ. ಜತೆಗೆ ಅಪರೂಪದ ಚಿತ್ರಗಳೂ ಇವೆ.

'ಸೋಜಿಗದ ಸಂತೆ' ಕಸ್ತೂರಿಯಲ್ಲಿ ಆಗಾಗ ನೆರೆಯುತ್ತಲೇ ಇರುತ್ತದೆಂಬುದನ್ನಿಲ್ಲಿ ನಿಮಗೆ ತಿಳಿಸಲು ನಮಗೆ ಸಂತೋಷ.

• *ಸಂಪಾದಕ*

# ಗಡ್ಡಧಾರಿ ಮಹಿಳೆಯರು !

• ಅರುಣ

'ಮಾರ್ಗರೆಟ್ ಆಂಘ್' ಎಂಬಾಕೆ ನೀಳ ಗಡ್ಡಧಾರಿ ಮಹಿಳೆಯೆಂದು ಇತಿಹಾಸದಲ್ಲಿ ಪ್ರಸಿದ್ಧಳಾಗಿದ್ದಾಳೆ. ಮಾರ್ಗರೆಟ್ ಆಂಘ್ ನೆದರ್‌ಲ್ಯಾಂಡ್‌ನ ರಾಣಿಯಾಗಿದ್ದಳು. ಸಾಮಾನ್ಯ ಹೆಂಗಸರಿಗಿರುವ ಸುಕೋಮಲ ಮುಖಕ್ಕಿಂತ ಅವಳ ಮುಖ ಭಿನ್ನವಾಗಿತ್ತು. ಆಕೆಗೆ ಗಂಡಸರಿಗಿರುವಂತೆ ಕಪ್ಪು ಗಡ್ಡ ಮೀಸೆ ಬೆಳೆದಿತ್ತು. ತನ್ನ ಮುಖದಲ್ಲಿ ಗಡ್ಡ ಬೆಳೆಯುತ್ತಿರುವ ಕಾರಣವೇ ತಾನು ರಾಜ್ಯಭಾರವನ್ನು, ದೇಶದ ಆಡಳಿತವನ್ನು ಅತ್ಯಂತ ಜಾಣ್ಮೆಯಿಂದ ನಡೆಸಿಕೊಂಡು ಹೋಗುತ್ತಿದ್ದೇನೆ ಎಂದು ಆಕೆ ಭಾವಿಸಿದ್ದಳು.

ಸ್ಪೇನ್‌ನ ಸ್ಟೆಂಟ್ ಪೋಲಾ ಎಂಬ ಸಂನ್ಯಾಸಿಯ ಬಗ್ಗೆ ಒಂದು ಸ್ವಾರಸ್ಯಕರ ಕತೆ ಇದೆ. ಒಮ್ಮೆ ಒಬ್ಬಾತ ಸ್ಟೆಂಟ್ ಪೋಲಾಳ ಮಾನಭಂಗಕ್ಕೆ ಯತ್ನಿಸಿದನಂತೆ. ಆಗ ಆಕೆ ಸಹಾಯಕ್ಕಾಗಿ ದೇವರನ್ನು ಪ್ರಾರ್ಥಿಸಿದಳಂತೆ. ಇದ್ದಕ್ಕಿದ್ದಂತೆ ಸ್ಟೆಂಟ್ ಪೋಲಾಳ ಮುಖದಲ್ಲಿ ಉದ್ದವಾದ ದಾಡಿ ಬೆಳೆಯತೊಡಗಿತಂತೆ. ಅದನ್ನು ನೋಡಿದ ಆತ ದಿಗ್ಭ್ರಾಂತನಾಗಿ ಸ್ಟೆಂಟ್ ಪೋಲಾಳ ಉಸಾಬರಿ ಬಿಟ್ಟು ಓಡಿದನದಂತೆ.

ಗ್ರೀಕ್ ಇತಿಹಾಸಕಾರ ಹೆರೋಡೋಟಸ್ ಅಥೆನ್ಸ್‌ನ ವಿಚಿತ್ರ ಅರ್ಚಕಳೊಬ್ಬಳ ಬಗ್ಗೆ ಉಲ್ಲೇಖಿಸಿದ್ದಾನೆ. ಅವಳ ಮುಖದಲ್ಲಿ ಗಡ್ಡ ಬೆಳೆಯಲು ಆರಂಭವಾಗುತ್ತಿದ್ದಂತೆ ಆಕೆಯ ಕುಟುಂಬದಲ್ಲಿ ಯಾರಿಗಾದರೂ ಬಹುದೊಡ್ಡ ಆಪತ್ತು ಸಂಭವಿಸುತ್ತಿತ್ತಂತೆ.

ಇಂಗ್ಲೆಂಡಿನಲ್ಲಿ ೧೨ನೇ ಚಾರ್ಲ್ಸ್ ದೊರೆಯ ಆಳ್ವಿಕೆಯಲ್ಲಿ ಗಡ್ಡಧಾರಿಣಿಯೊಬ್ಬಳು ಯೋಧರಿಗೆ ಸರಿಸಮಾನ ಪರಾಕ್ರಮ ಪ್ರದರ್ಶಿಸಿ ಹೋರಾಡಿದ್ದಳು. ಆ ಮಹಿಳೆಯನ್ನು ರಶಿಯಾದ ಸೈನಿಕರು ಬಂಧಿಸಿ ತಮ್ಮ ದೇಶಕ್ಕೆ ಒಯ್ದರು. ಕೊನೆಗೆ ಆಕೆ ರಶಿಯಾದ ತ್ಸಾರ್ ಚಕ್ರವರ್ತಿಯ ಉಪಪತ್ನಿಯಾದಳು.

ಇತಿಹಾಸದಲ್ಲಿ ಗಡ್ಡಧಾರಿಣಿಯರ ಹಲವು ಹೆಸರುಗಳ ಉಲ್ಲೇಖ ಕಂಡುಬರುತ್ತದೆ. ಮ್ಯಾಡಂ ಕಲ್‌ಫುಲಿಯಾ ಅಲಿಯಾಸ್ ಜೋಸೆಫೈನ್, ಆ್ಯನಿ ಜೇಮ್ಸ್, ಲೇಡಿ ಓಲ್ಗಾ ಉರ್ಫ್ ಜೇನ್ ಬಾರ್ಬೆಲ್, ಕಲಮೆಂಟೈನ್ ಡಿಲೇಡ್ ಹಾಗೂ ಗ್ರೇಸ್ ಗಿಲ್ಬರ್ಟ್.

ಮೇಡಂ ಕಲ್‌ಫುಲಿಯಾಳನ್ನು ಜಗತ್ತಿನಾದ್ಯಂತ ಪರಿಚಯಿಸಿದ ಶ್ರೇಯಸ್ಸು ಮಹಾನ್ ಪ್ರದರ್ಶಕ ಪಿ.ಟಿ. ಬರ್ನಾಮ್‌ಗೆ ಸಲ್ಲುತ್ತದೆ.

ಜೋಸೆಫೈನ್ ಅಥವಾ ಕಲ್‌ಫುಲಿಯಾ ಸ್ವಿಟ್ಜರ್‌ಲ್ಯಾಂಡ್‌ನ ಒಂದು ರೈತ ದಂಪತಿಯ ಮಗಳಾಗಿದ್ದಳು. ಹುಟ್ಟಿದಾಗಲೇ ಅವಳ ಕೋಮಲ ಮುಖದಲ್ಲಿ ಗಡ್ಡ ಬೆಳೆಯಲು ಆರಂಭವಾಯಿತು. ಮಗಳ ದುಃಸ್ಥಿತಿಯನ್ನು

> ವಿಚಿತ್ರವಾದರೂ ಸತ್ಯ!
> ಪುರುಷರಂತೆಯೇ
> ಸ್ವಾಭಾವಿಕವಾಗಿ ಗಡ್ಡ ಮೀಸೆ
> ಬೆಳೆಸಿಕೊಂಡು ಇತಿಹಾಸದಲ್ಲಿ
> ಪ್ರಸಿದ್ಧರಾದ ಕೆಲವು ಪಾಶ್ಚಾತ್ಯ
> ಮಹಿಳೆಯರ ಜೀವನ ಕಥೆ
> ಅತ್ಯಂತ ರೋಮಾಂಚಕ!

ನೋಡಿ ತಂದೆ ತಾಯಿಗೆ ಬಹಳ ದುಃಖವಾಯಿತು. ತಜ್ಞ ವೈದ್ಯರ ಬಳಿ ತೋರಿಸಿ ಸಲಹೆ ಪಡೆದರು. "ವಯಸ್ಸಾದಂತೆ ಗಡ್ಡ ಕಣ್ಮರೆಯಾಗುತ್ತದೆ" ಎಂದರು ವೈದ್ಯರು. ಆದರೆ ಹಾಗಾಗಲಿಲ್ಲ. ಜೋಸೆಫೈನ್‌ಳ ತಂದೆ ತಾಯಿ ಇನ್ನಷ್ಟು ಚಿಂತೆಯಿಂದ ನೊಂದು ತಮ್ಮ ಕುಟುಂಬದ ವೈದ್ಯರ ಸಲಹೆ ಕೇಳಿದರು. ಆ



ಮೇಡಂ ಕಲ್‌ಫುಲಿಯಾ

ವೈದ್ಯರು ಮತ್ತೊಮ್ಮೆ ಹುಡುಗಿಯನ್ನು ವಿವರವಾಗಿ ಪರಿಶೀಲಿಸಿ "ಅತ್ಯಂತ ಆಶ್ಚರ್ಯಕರ, ನಿಮ್ಮ ಮಗಳನ್ನು ಜಿನೀವಾಕ್ಕೆ ಕರೆದೊಯ್ದು ಅಲ್ಲಿ ತಜ್ಞ ವೈದ್ಯರಿಗೆ ತೋರಿಸಿ ಸಲಹೆ ಪಡೆಯಿರಿ" ಎಂದರು.

ಅವಳ ತಂದೆ ತಾಯಿ ಜೋಸೆಫೈನ್‌ಳನ್ನು ಜಿನೀವಾದ ವೈದ್ಯರಿಗೆ ತೋರಿಸಿದರು. ವೈದ್ಯರು ಗಡ್ಡಧಾರಿ ಹುಡುಗಿಯ ತಪಾಸಣೆ ನಡೆಸಿ "ಈ ವಿಲಕ್ಷಣ ಬೆಳವಣಿಗೆಯ ಬಗ್ಗೆ ಅಂತಿಮ ನಿರ್ಣಯ ಹೇಳಲು ಇನ್ನೂ ಕೆಲವು ವರ್ಷ ಕಾಯಬೇಕಾಗುತ್ತದೆ. ಹುಡುಗಿಗೆ ಎಂಟು ವರ್ಷ ತುಂಬಿದಾಗ ನಾವು ಖಚಿತವಾಗಿ ಈ ವಿದ್ಯಮಾನದ ಬಗ್ಗೆ ಹೇಳಲು ಸಾಧ್ಯ" ಎಂದರು.

ಆ ಎಂಟು ವರ್ಷ ಜೋಸೆಫೈನ್‌ಳ ತಂದೆ ತಾಯಿ ಮಾನಸಿಕವಾಗಿ ಯಾವತ್ತೂ ಕೊರಗುತ್ತಾ ಹೀಗಾಯಿತಲ್ಲಾ ಎಂದು ವ್ಯಥೆಪಟ್ಟಿಕೊಂಡರು. ತಮಗೆ ಜನಿಸಿರುವುದು ಮಗಳಲ್ಲ, ಮಗನೇ ಎಂದುಕೊಂಡರು. ಈ ಮಧ್ಯೆ ಜೋಸೆಫೈನ್‌ಳ ಗಡ್ಡ ಬೆಳೆಯುತ್ತಲೇ ಹೋಯಿತು. ಆದರೆ ಇದರಿಂದ ಅವಳ ಶರೀರದಲ್ಲಿ ಸ್ತ್ರೀಸ್ವಾಭಾವಿಕವಾದ ಬೆಳವಣಿಗೆಗಳಿಗೆ ಯಾವ ತೊಡಕುಗಳೂ ಆಗಿರಲಿಲ್ಲ. ಹೆಣ್ಣಿಗೆ ಸಹಜವಾದ ಕೋಮಲತೆ ಅವಳ ಶರೀರಕ್ಕಿತ್ತು.

ಜೋಸೆಫೈನಳಿಗೆ ಎಂಟು ವರ್ಷವಾದಾಗ ಮತ್ತೊಮ್ಮೆ ಅವಳ ತಂದೆ ತಾಯಿ ಜಿನೀವಾದ ವೈದ್ಯರ ಬಳಿಗೆ ಕರೆದೊಯ್ದರು. ಈ ಬಾರಿ ವೈದ್ಯರು ಜೋಸೆಫೈನಳನ್ನು ಕೂಲಂಕಷವಾಗಿ ತಪಾಸಣೆ ನಡೆಸಿ "ಗಡ್ಡ ಜೋಸೆಫೈನ್‌ಳ ಶಾರೀರಿಕ ಬೆಳವಣಿಗೆಯ ಅನಿವಾರ್ಯ ಅಂಗವಾಗಿದೆ. ಹೀಗಾಗಿ ಅದನ್ನು ಕತ್ತರಿಸಬಾರದು. ಒಂದು ವೇಳೆ ಕತ್ತರಿಸಿದರೆ ಅದು ಇನ್ನಷ್ಟು ತೀವ್ರವಾಗಿ ಬೆಳೆಯುವುದು" ಎಂಬುದಾಗಿ ತಮ್ಮ ಅಂತಿಮ ನಿರ್ಣಯ ನೀಡಿದರು.

ಕಾಲ ಕಳೆದಂತೆ ಜೋಸೆಫೈನ್‌ಳ ಹೆತ್ತವರು ಅವಳ ಗಡ್ಡದ ಬಗ್ಗೆ ಯೋಚಿಸುವ ಬದಲು ಅವಳ ಭವಿಷ್ಯ ಜೀವನದ ಬಗ್ಗೆಯೆ ಯೋಚಿಸತೊಡಗಿದರು. ವಿದ್ಯಾಭ್ಯಾಸ ಮುಂದುವರಿಸಲು ಆಕೆಯನ್ನು ಬೋರ್ಡಿಂಗ್ ಸ್ಕೂಲಿಗೆ ಸೇರಿಸಿದರು.

ಜೋಸೆಫೈನ್ ೧೪ರ ಹರೆಯಕ್ಕೆ ತಲುಪಿದಾಗ ಅವಳ ಮುಖದಲ್ಲಿ ಐದು ಅಂಗುಲ

ಉದ್ದ ಗಡ್ಡ ಬೆಳೆದಿತ್ತು! ಈ ಮಧ್ಯೆ ಅವಳ ತಾಯಿ ತೀರಿಕೊಂಡಳು. ಬೋರ್ಡಿಂಗ್ ಶಾಲೆಯನ್ನು ಆಕೆ ತ್ಯಜಿಸಲೇಬೇಕಾಯಿತು. ಮನೆಯಲ್ಲಿ ಆಕೆಯ ಮೂವರು ಚಿಕ್ಕ ತಮ್ಮಂದಿರು ಹಾಗೂ ತಂಗಿಯನ್ನು ನೋಡಿಕೊಳ್ಳುವವರು ಯಾರೂ ಇರಲಿಲ್ಲ.

ಜೋಸೆಫೈನ್ ತಾರುಣ್ಯದ ಹೊಸ್ತಿಲಿಗೆ ಅಡಿಯಿರಿಸಿದಳು. ಗಡ್ಡವೊಂದನ್ನು ಹೊರತುಪಡಿಸಿದರೆ ಅವಳ ದೇಹದಲ್ಲಿ ತಾರುಣ್ಯದ ಸೌಂದರ್ಯಕ್ಕೆ ಯಾವ ರೀತಿಯಿಂದಲೂ ಚ್ಯುತಿ ಬರಲಿಲ್ಲ. ನವಯುವತಿಯ ರೂಪದಲ್ಲಿ ಅವಳ ವ್ಯಕ್ತಿತ್ವ ಅರಳಿತು. ಅವಳನ್ನು ಒಮ್ಮೆ ನೋಡಿದವರು ಅವಳ ವಿಲಕ್ಷಣ ರೂಪಕ್ಕೆ ಮಾರುಹೋಗದಿರುತ್ತಿರಲಿಲ್ಲ.

## ಸಾರ್ವಜನಿಕ ಪ್ರದರ್ಶನ

ಜೋಸೆಫೈನ್‌ಳ ಖ್ಯಾತಿ ಸ್ವಿಟ್ಜರ್‌ಲ್ಯಾಂಡ್‌ನಾದ್ಯಂತ ವ್ಯಾಪಿಸಿತು. ಇಂಗ್ಲೆಂಡಿನ ಖ್ಯಾತ ಸರ್ಕಸ್ ಕಂಪೆನಿಗಳು ಅವಳನ್ನು ರಂಗದ ಮೇಲೆ ಪ್ರದರ್ಶಿಸಿ ಕೈತುಂಬಾ ಹಣ ಬಾಚಿಕೊಳ್ಳಬಹುದೆಂದು ಯೋಚಿಸಿದವು. ಜೋಸೆಫೈನ್‌ಳ ತಂದೆಯನ್ನು ಭೇಟಿಯಾಗಿ ತಮ್ಮ ಆಶಯವನ್ನು ಅವರು ವ್ಯಕ್ತಪಡಿಸಿದರು. ಜೋಸೆಫೈನ್‌ಳ ತಂದೆ ಹಳ್ಳಿಯ ಓರ್ವ ಮುಗ್ಧ ರೈತನಾಗಿದ್ದ. ತನ್ನ ಮಗಳು ಸಾರ್ವಜನಿಕವಾಗಿ ಗಡ್ಡ ಪ್ರದರ್ಶಿಸುವುದು ಆತನಿಗೆ ಇಷ್ಟವಿರಲಿಲ್ಲ. ಹೀಗಾಗಿ ಇಂತಹ ಸಲಹೆಗಳನ್ನು ಆತ ತಿರಸ್ಕರಿಸಿದ. ಆದರೂ ಸರ್ಕಸ್‌ನವರು ತಮ್ಮ ಪ್ರಯತ್ನ ಮುಂದುವರಿಸಿದರು. ಕೊನೆಗೂ ಒಬ್ಬ ಸರ್ಕಸ್ ಮಾಲಿಕ ಜೋಸೆಫೈನ್‌ಳ ತಂದೆಯಿಂದ ಅಧಿಕೃತ ಲೈಸೆನ್ಸ್ ಪಡೆದು ಈ ಗಡ್ಡಧಾರಿಣಿಯನ್ನು ರಂಗದ ಮೇಲೆ ಪ್ರದರ್ಶಿಸುವ ಹಕ್ಕು ಪಡೆದುಕೊಳ್ಳುವುದರಲ್ಲಿ ಯಶಸ್ವಿಯಾದ. ಮತ್ತೊಮ್ಮೆ ಮೊದಲ ಬಾರಿಗೆ ಗಡ್ಡಧಾರಿಣಿ ಜೋಸೆಫೈನ್ ಜಿನೀವಾದ ಸಾರ್ವಜನಿಕರ ಮುಂದೆ ಕಾಣಿಸಿಕೊಂಡಳು. ಸುಕೋಮಲ ದೇಹದ ತುಂಬು ತಾರುಣ್ಯದ ಯುವತಿಯೊಬ್ಬಳ ಮುಖದಲ್ಲಿ ನೀಳ ಗಡ್ಡ ಬೆಳೆದಿರುವುದನ್ನು ಸಾರ್ವಜನಿಕರು ಗಮನಿಸಿ ಮೂಕವಿಸ್ಮಿತರಾದರು.

ಜಿನೀವಾದಲ್ಲಿ ಸಾರ್ವಜನಿಕ ಪ್ರದರ್ಶನ ಮುಗಿದ ಬಳಿಕ ಜೋಸೆಫೈನ್ ಫ್ರಾನ್ಸ್‌ನ ಹಲವು ನಗರಗಳಲ್ಲಿ ಸಾರ್ವಜನಿಕವಾಗಿ ಕಾಣಿಸಿಕೊಂಡಳು. ಅಲ್ಲೆಲ್ಲ ಆಕೆ ಅದ್ಭುತ ಆಕರ್ಷಣೆಯ ಕೇಂದ್ರವೆನಿಸಿದಳು. ತುಂಬು ತಾರುಣ್ಯದ ಯುವಕನನ್ನು ಮದುವೆಯಾಗಿ ತಾಯಿಯಾಗಲು ಆಕೆ ಹಾತೊರೆಯುತ್ತಿದ್ದ ಆಕೆಗೆ ಓರ್ವ ಚಿತ್ರಕಾರನ ಪರಿಚಯವಾಯಿತು. ಆತ ಆಕೆಗೆ ಪೇಂಟಿಂಗ್ ಕಲಿಸತೊಡಗಿದ. ಆತನ ಹೆಸರು ಫಾರ್ಚುನ್ ಕಲ್‌ಫುಲಿಯಾ. ಒಂದು ದಿನ ಜೋಸೆಫೈನ್ ಆತನನ್ನೇ ಮದುವೆಯಾಗುವ ತನ್ನ ಆಶಯ ವ್ಯಕ್ತಪಡಿಸಿದಳು. ಕಲಾವಿದ ಅವಳ ಕೋರಿಕೆಯನ್ನು ತಕ್ಷಣ ಒಪ್ಪಿಕೊಂಡಾಗ ಅವಳ ಸಂತಸಕ್ಕೆ ಪಾರವೇ ಇರ



ಆ್ಯನಿ ಜೋನ್ಸ್: ಗಡ್ಡದ ಬಾಲಕಿ

ಲಿಲ್ಲ. ಇಬ್ಬರೂ ವಿವಾಹವಾದರು. ಜೋಸೆ ಫೈನ್ ಅಂದಿನಿಂದ ಮೇಡಂ ಕಲ್‌ಫುಲಿಯಾ ಎಂದು ಹೆಸರಾದಳು.

ಮೇಡಂ ಕಲ್‌ಫುಲಿಯಾ ಪ್ಯಾರಿಸ್‌ನಲ್ಲಿ ಸಾರ್ವಜನಿಕ ಪ್ರದರ್ಶನ ನೀಡುತ್ತಿದ್ದ ಸಂದ ರ್ಭದಲ್ಲಿ ಫ್ರಾನ್ಸ್‌ನ ಸುಪ್ರಸಿದ್ಧ ಶಸ್ತ್ರಚಿಕಿತ್ಸಾ ತಜ್ಞರು ಅವಳನ್ನು ವೈದ್ಯಕೀಯ ತಪಾಸಣೆಗೆ ಒಳಪಡಿಸಿದರು. ಫ್ರಾನ್ಸಿನ ಚಕ್ರವರ್ತಿ ಜೋಸೆ



ಆನಿ ಬೆಳೆದು ನಿಂತಾಗ

ಫೈನಳನ್ನು ಅರಮನೆಗೆ ಆಹ್ವಾನಿಸಿ ಅಮೂಲ್ಯ ಉಡುಗೊರೆಗಳನ್ನು ನೀಡಿ ಸತ್ಕರಿಸಿದ.

### ವಿಲಕ್ಷಣ ಸಂತಾನ

ಲಂಡನ್‌ನಲ್ಲಿ ನಡೆದ ಗ್ರೇಟ್ ಯೂನಿವ ರ್ಸಲ್ ವಸ್ತುಪ್ರದರ್ಶನದಲ್ಲಿಯೂ ಜೋಸೆ ಫೈನ್ ಭಾಗವಹಿಸಿದಳು. ಮೇಡಂ ಕಲ್‌ಫುಲಿಯಾ ಲಂಡನ್‌ನಾದ್ಯಂತ ಸಾರ್ವಜ ನಿಕರ ಚರ್ಚೆಯ ವಸ್ತುವಾದಳು. ಅಲ್ಲಿ ನಡೆದ ಸಾರ್ವಜನಿಕ ಪ್ರದರ್ಶನಗಳಲ್ಲಿ ಎಂಟು ಲಕ್ಷ ಪ್ರೇಕ್ಷಕರು ಈ ಗಡ್ಡಧಾರಿ ಮಹಿಳೆಯನ್ನು ನೋಡಿ ನಿಬ್ಬೆರಗಾದರು.

ಈ ದಿನಗಳಲ್ಲಿಯೇ ಮೇಡಂ ಕಲ್‌ಫುಲಿಯಾ ಹೆಣ್ಣು ಮಗುವಿಗೆ ಜನ್ಮ ನೀಡಿದಳು. ಆದರೆ ಆ ಮಗು ಕೇವಲ ಒಂಬತ್ತು ತಿಂಗಳು ಬದುಕಿದ್ದು ತೀರಿಕೊಂ ಡಿತು. ಅನಂತರ ಕಲ್‌ಫುಲಿಯಾ ಗಂಡು ಮಗುವಿಗೆ ಜನ್ಮ ನೀಡಿದಳು. ಆ ಹುಡುಗನೂ ವಿಲಕ್ಷಣ ಸ್ವರೂಪ ಹೊಂದಿದ್ದು ಅವನ ಮುಖದಲ್ಲಿ ಮಾತ್ರವಲ್ಲ ಇಡೀ ದೇಹದಲ್ಲಿ ಕೂದಲುಗಳು ಬೆಳೆದಿದ್ದವು. ಆ ವಿಚಿತ್ರ ಮಗುವಿಗೆ ಆಲ್ಬರ್ಟ್ ಎಂದು ಹೆಸರಿಟ್ಟರು.

ಅಮೆರಿಕಾದ ಸರ್ಕಸ್ ಮ್ಯಾನೇಜರ್‌ನ ಆಮಂತ್ರಣದ ಮೇರೆಗೆ ಕಲ್‌ಫುಲಿಯಾ ತನ್ನ ಪತಿ ಹಾಗೂ ಮಗನೊಂದಿಗೆ ಅಮೆರಿಕಾ ಪ್ರವಾಸ ಕೈಗೊಂಡಳು. ನ್ಯೂಯಾರ್ಕ್‌ನಲ್ಲಿ ಆಕೆ ವಿಶ್ವವಿಖ್ಯಾತ ಪ್ರದರ್ಶಕ ಪಿ.ಟಿ. ಬರ್ನಾಮ್‌ರನ್ನು ಭೇಟಿಯಾದಳು. ಜಗತ್ತಿನಲ್ಲಿ ರುವ ಚಿತ್ರವಿಚಿತ್ರ ಪ್ರಾಣಿಗಳನ್ನು ಕೂಡಿಹಾಕಿ ಅವುಗಳನ್ನು ಸಾರ್ವಜನಿಕವಾಗಿ ಪ್ರದರ್ಶಿ ಸುತ್ತಾ ಬರ್ನಾಮ್ ಖ್ಯಾತಿಗಳಿಸಿದ್ದ. ತನ್ನ ಸರ್ಕಸ್ ತಂಡದಲ್ಲಿ ಸೇರಿಕೊಳ್ಳಲು ಬರ್ನಾಮ್ ಕಲ್‌ಫುಲಿಯಾಳಿಗೆ ಆಮಂತ್ರಣ ನೀಡಿದ. ಕಲ್‌ಫುಲಿಯಾ ಸಂತಸದಿಂದ ಬರ್ನಾಮ್ ತಂಡದಲ್ಲಿ ಸೇರಿಕೊಂಡಳು. ಆಕೆ ಹಾಗೂ ಆಕೆಯ ಮಗ ಆಲ್ಬರ್ಟ್ ಅಮೆರಿ ಕಾದ ಅಸಂಖ್ಯಾತ ಪ್ರೇಕ್ಷಕರ ಪ್ರಬಲ ಆಕರ್ಷ ಣೆಯ ಕೇಂದ್ರ ಬಿಂದುವೆನಿಸಿದರು.

"ಕಲ್‌ಫುಲಿಯಾ ಸಾರ್ವಜನಿಕರನ್ನು ವಂಚಿಸುತ್ತಿದ್ದಾಳೆ, ಆಕೆ ವಾಸ್ತವವಾಗಿ ಹೆಣ್ಣೇ ಅಲ್ಲ, ನಕಲಿ ಗಡ್ಡ ಧರಿಸಿದ ಗಂಡು" ಎಂದು ವಿಲಿಯಂ ಎಂಬಾತ ಶಂಕಿಸಿ ಪೊಲೀಸರಿಗೆ ದೂರು ನೀಡಿದ. ಪೊಲೀಸರು ಕಲ್‌ಫುಲಿಯಾ ಹಾಗೂ ಬರ್ನಾಮ್‌ರನ್ನು ಮೋಸ ವಂಚ ನೆಯ ಆರೋಪದ ಮೇರೆಗೆ ಬಂಧಿಸಿ ನ್ಯಾಯಾಲಯದಲ್ಲಿ ಹಾಜರು ಪಡಿಸಿದರು.



*ಹೊಂಬಣ್ಣದ ಗಡ್ಡದೊಡತಿ ಗ್ರೇಸ್ ಗಿಲ್ಬರ್ಟ್*

ನ್ಯಾಯಾಲಯದಲ್ಲಿ ಕಲ್‌ಫುಲಿಯಾ ಹಾಗೂ ಬರ್ನಾಮ್‌ರ ವಿಚಾರಣೆ ಆರಂಭವಾಯಿತು. ತನ್ನ ಮೇಲೆ ಹೊರಿಸಿದ ಆರೋಪ ತನ್ನ ಸ್ತ್ರೀತ್ವದ ಮೇಲೆಯೇ ಹೊರಿಸಿದ ಕಳಂಕ ಎಂದು ಜೋಸೆಫೈನ್ ಕಲ್‌ಫುಲಿಯಾ ನ್ಯಾಯಾಲಯದಲ್ಲಿ ಹೇಳಿಕೆ ಇತ್ತಳು. ಮೊಕದ್ದಮೆಗೆ ಸಂಬಂಧಿಸಿದಂತೆ ಸೂಕ್ತ ಸಾಕ್ಷಿಗಳನ್ನು ಹಾಜರುಪಡಿಸಲು ಬರ್ನಾಮ್‌ಗೆ ಯಾವ ತೊಂದರೆಯೂ ಆಗಲಿಲ್ಲ. ಕಲ್‌ಫುಲಿಯಾಳ ಆರೋಗ್ಯಕ್ಕೆ ಸಂಬಂಧಿಸಿದಂತೆ ಬರ್ನಾಮ್ ಹಲವು ಸಾಕ್ಷಿಗಳನ್ನೂ ವೈದ್ಯರ ಪ್ರಮಾಣ ಪತ್ರಗಳನ್ನೂ ಹಾಜರುಪಡಿಸಿದ. ಕಲ್‌ಫುಲಿಯಾಳ ಪತಿ ಹಾಗೂ ತಂದೆಯೂ ನ್ಯಾಯಾಲಯದಲ್ಲಿ ಸಾಕ್ಷಿ ಹೇಳಿದರು. ಅನಂತರ ನ್ಯಾಯಾಲಯದ ಆದೇಶದ ಮೇರೆಗೆ ಸಿವಿಲ್ ಸರ್ಜನ್‌ರೊಬ್ಬರಿಂದ ಕಲ್‌ಫುಲಿಯಾಳ ವೈದ್ಯಕೀಯ ತಪಾಸಣೆಯೂ ನಡೆಯಿತು. ಮುಖದಲ್ಲಿ ಪುರುಷರಂತೆ ಗಡ್ಡ ಬೆಳೆದಿದ್ದರೂ ಕಲ್‌ಫುಲಿಯಾ ಶಾರೀರಿಕವಾಗಿ

# ಪುಟ್ಟಾಣಿ ಪುಟ್ಟಕ್ಕ...

**ಪ್ರೇ**ಮಕ್ಕೆ ಕಣ್ಣಿಲ್ಲ. ಹೀಗಾಗಿ ಅದು ಬಡತನ, ಶ್ರೀಮಂತಿಕೆ, ಜಾತಿ-ಮತ, ದೊಡ್ಡವರು-ಸಣ್ಣವರು, ಅಥರಾ ಉಚ್ಚ-ನೀಚ ಮುಂತಾದ ಭೇದಭಾವಗಳನ್ನು ಎಣಿಸುವುದೇ ಇಲ್ಲ. ಒಂದೊಂದು ವಯಸ್ಸಿನಲ್ಲಿ ಅದು ಎಲ್ಲರನ್ನೂ ಆವರಿಸಿಕೊಳ್ಳುವುದೇ. ಅದಕ್ಕೆ ದಕ್ಷಿಣ ಆಫ್ರಿಕದ ಜೋಹಾನ್ಸ್‌ಬರ್ಗಿನ ಮ್ಯಾಗಿ ಬೆಸ್ಸರಳೂ ಹೊರತಲ್ಲ. ಆದರೆ ನಿಸರ್ಗ ವಿಧಿಸಿದ ಶಾಪದಿಂದಾಗಿ ಆಕೆ ಮದುವೆಯಾಗಬೇಕೆಂದರೂ ಆಗಲು ಸಾಧ್ಯವಿಲ್ಲ.

ಅವಳಿಗೀಗ ಇಪ್ಪತ್ತಾರು ವರ್ಷ. ನೋಡಲು ಪುಟ್ಟ ಹುಡುಗಿಯಂತೆಯೆ ಕಾಣುತ್ತಾಳೆ. ಅವಳ ಎತ್ತರ ಇಪ್ಪತ್ತಾರು ಇಂಚಿಗಿಂತ ಹೆಚ್ಚಿಲ್ಲ. ಈಸ್ಟೋಜನಸೆ ಇಂಪರ್‌ಫೆಕ್ಟೋ ಎಂಬ ಅಪರೂಪದ ರೋಗದಿಂದಾಕೆ ಬಳಲುತ್ತಿದ್ದಾಳೆ. ಅದರಿಂದಾಗಿಯೆ ಮ್ಯಾಗಿ ಬೆಸ್ಸರಳ ಬೆಳವಣಿಗೆ ಕುಂಠಿತಗೊಂಡಿದೆ. ಯಾವಾಗಲೂ ಗಾಲಿ ಕುರ್ಚಿಯ ಮೇಲೆಯೆ ಕುಳಿತುಕೊಂಡಿರಬೇಕಾದಂಥ ಸ್ಥಿತಿ ಅವಳದು.

ಪ್ರಪಂಚದ ಕುಬ್ಜರಲ್ಲಿಯೆ ಒಬ್ಬಳು ಆಕೆ. ಆದರೆ ಅವಳ ಆಶೆ-ಆಕಾಂಕ್ಷೆಗಳೇನೂ ಕುಬ್ಜವಾಗಿಲ್ಲ. ಉಳಿದ ಯುವತಿಯರ ಹಾಗೆ ತಾನೂ ಮದುವೆಯಾಗಬೇಕು; ಸಂಸಾರ ನಡೆಯಬೇಕು ಎಂಬ ಆಶೆಯೇನೋ ಇದೆ. ಆದರೆ ತನಗಿಂತ ಕೊಂಚವೇ ಎತ್ತರವಾಗಿರುವವನನ್ನು ಮದುವೆಯಾಗುವ ಇಚ್ಛೆ ಆಕೆಯದು. ಉದ್ದ

**ಅಪರೂಪದ ರೋಗದಿಂದಾಗಿ ಅವಳಿಗೆ ಪುಟ್ಟಾಣಿ ದೇಹ**

ಪೂರ್ಣ ವಿಕಸಿತ ಮಹಿಳೆಯಾಗಿದ್ದಾಳೆ, ಅವ ಳನ್ನು ಪುರುಷನೆಂದು ಶಂಕಿಸುವುದು ತಪ್ಪಾಗು ತ್ತದೆ ಎಂದು ನ್ಯಾಯಾಲಯ ತೀರ್ಪು ನೀಡಿತು.

ನ್ಯಾಯಾಲಯದ ತೀರ್ಪಿನ ಬಳಿಕ ಕಲ್‌ಫುಲಿಯಾಳ ಬಗ್ಗೆ ಜನತೆಯ ವಿಶ್ವಾಸ ಮತ್ತಷ್ಟು ಹೆಚ್ಚಿತು. ಅಮೆರಿಕಾದ ಮ್ಯೂಸಿಯಂ ನಲ್ಲಿ ಕಲ್‌ಫುಲಿಯಾ ಸಾರ್ವಜನಿಕವಾಗಿ ಕಾಣ ಸಿಕೊಂಡಾಗ ಅಪಾರ ಜನಸ್ತೋಮ ಅವಳನ್ನು ನೋಡಲು ಮ್ಯೂಸಿಯಂನಲ್ಲಿ ನೆರೆದಿತ್ತಂತೆ!

## ಆ್ಯನಿ ಜೇಮ್ಸ್‌ಳ ಕತೆ!

ಪಿ.ಟಿ. ಬರ್ನಾಮ್ ಅಮೆರಿಕಾದಲ್ಲಿ ಸಾರ್ವಜನಿಕವಾಗಿ ಪ್ರದರ್ಶಿಸಿದ ಇನ್ನೋರ್ವ ಗಡ್ಡಧಾರಿಣಿಯ ಹೆಸರು ಆ್ಯನಿ ಜೇಮ್ಸ್. ಮೊತ್ತ ಮೊದಲು ರಂಗದ ಮೇಲೆ ಕಾಣಿಸಿ ಕೊಂಡಾಗ ಆಕೆ ಒಂದು ವರ್ಷದ ಪುಟಾಣಿ ಹುಡುಗಿ. ಇಡೀ ಮುಖದಲ್ಲಿ ಕೂದಲು ಬೆಳೆದು ಆಕೆ ಅತ್ಯಂತ ಅಸಹ್ಯವಾಗಿ ಕಾಣಿಸು ತ್ತಿದ್ದಳು.

ಬರ್ನಾಮ್‌ನ ಆಹ್ವಾನ ದೊರೆತ ಬಳಿಕ ಆ್ಯನಿ ಜೇಮ್ಸ್‌ಳ ತಂದೆ ತಾಯಿ ಮಗಳನ್ನು ಕರೆದುಕೊಂಡು ನ್ಯೂಯಾರ್ಕ್‌ಗೆ ಬಂದರು. ಆ್ಯನಿ ಜೇಮ್ಸ್ ನ್ಯೂಯಾರ್ಕ್‌ಗೆ ತಲುಪುವ ಒಂದು ದಿನ ಮೊದಲು ಅಗ್ನಿ ಅನಾಹುತದಲ್ಲಿ ಬರ್ನಾಮ್‌ನ ಎಲ್ಲ ಸ್ವತ್ತುಗಳು ಸುಟ್ಟು ನಾಶ ವಾದುವು. ಆರ್ಥಿಕವಾಗಿ ಆತ ಸಂಪೂರ್ಣ ದಿವಾಳಿಯಾಗಿದ್ದ. ಅದೇ ಸಂದರ್ಭದಲ್ಲಿ ಆ್ಯನಿ ಜೇಮ್ಸ್‌ಳನ್ನು ಸಾರ್ವಜನಿಕವಾಗಿ ಪ್ರದರ್ಶಿ ಸುವ ಸುವರ್ಣಾವಕಾಶ ಅವನಿಗೆ ದೊರಕಿತು. ಅವನ ಪಾಲಿಗೆ ಅದು ವರದಾನವಾಯಿತು. ಬರ್ನಾಮ್ ಪ್ರತಿವಾರ ಆ್ಯನಿ ಜೇಮ್ಸ್‌ಳಿಗೆ

ನೆಯವರು ಆಕೆಯನ್ನು ಮದುವೆಯಾಗಲು ತಯಾರಿಲ್ಲ; ಆಕಸ್ಮಾತ್ತಾಗಿ ಯಾರಾದರೂ ತಯಾರಾದರೂ ಈಕೆ ಅವರನ್ನು ಮದುವೆ ಯಾಗಲು ಸಿದ್ಧಳಿಲ್ಲ. ಅವಳಿಗಿಂತ ಸ್ವಲ್ಪವೇ ಎತ್ತರವಾಗಿರುವವರ ಈ ವರೆಗೂ ಸಿಕ್ಕಿಲ್ಲ; ಸಿಗುವ ಸಂಭವವೂ ತುಂಬಾ ಕಡಿಮೆ. ಆದರೆ 'ಮರಳಿ ಯತ್ನವ ಮಾಡು' ಎನ್ನುವುದರಲ್ಲಿ ಅಚಲ ವಿಶ್ವಾಸ ಮ್ಯಾಗಿ ಬೆಸ್ಪರಳಿಗೆ.

ಇಡಿ ದಿನವನ್ನು ಗಾಲಿ ಕುರ್ಚಿಯ ಮೇಲೆ ಕುಳಿತು ಕಳೆಯುತ್ತಿದ್ದರೂ ಸ್ನಾನಮಾಡುವು ದೊಂದನ್ನು ಹೊರತುಪಡಿಸಿ ಉಳಿದೆಲ್ಲಾ ಕೆಲ ಸಗಳನ್ನೂ ತಾನೇ ಮಾಡಿಕೊಳ್ಳುತ್ತಾಳೆ. ಬಚ್ಚಲು ಮನೆಗೆ ಕರೆದುಕೊಂಡು ಹೋಗಲಾ ಗಲಿ ಸ್ನಾನಮಾಡಲಾಗಲಿ ಆಕೆಗೆ ಇನ್ನೊಬ್ಬರ ಸಹಾಯ ಬೇಕೇಬೇಕು.

"ನೋಡಲೇನೋ ನಾನು ವಿಚಿತ್ರವಾಗಿ ಕಾಣಿಸಬಹುದು. ಆದರೆ ಸ್ತ್ರೀ ಸಹಜವಾದ ಆಶೆ-ಆಕಾಂಕ್ಷೆಗಳು ನನಗೂ ಇವೆ. ನನಗೆ ಅನುರೂಪನಾದ ಜೀವನ ಸಂಗಾತಿಯನ್ನು ನಾನೀಗ ಅರಸುತ್ತಿದ್ದೇನೆ. ಡಾಕ್ಟರರು ಅನುಮ ತಿಕೊಟ್ಟರೆ ಮುಂದೆ ತಾಯಿಯೂ ಆಗುತ್ತೇನೆ. ಆದರೆ ನನ್ನಂತಹ ಕುಬ್ಜ ಮಕ್ಕಳೇ ಹುಟ್ಟುವು ದಾದಲ್ಲಿ ನಾನು ಆ ಗೋಜಿಗೂ ಹೋಗುವು ದಿಲ್ಲ" ಎಂದಾಕೆ ಹೇಳುತ್ತಾಳೆ.

ಸ್ವಲ್ಪ ಒತ್ತಡಬಿದ್ದರೂ ಮುರಿದು ಹೋಗು ವಷ್ಟು ಅವಳ ಎಲವುಗಳು ಸಪೂರವಾಗಿವೆ. ಆಧುನಿಕ, ಸ್ವತಂತ್ರ ಮನೋಭಾವದ ಮಹಿಳೆ ಎಂದು ತನ್ನನ್ನು ಕರೆದುಕೊಳ್ಳುವಲ್ಲಿ ಮ್ಯಾಗಿ ಬೆಸ್ಪರಳಿಗೆ ತುಂಬ ಅಭಿಮಾನ. ಆದರೆ ಅವಳ ಈ 'ಆಧುನಿಕತೆ' ಅವಳ ದೈವಭಕ್ತಿಗೇನೂ ಅಡ್ಡಬಂದಿಲ್ಲ. "ಜೀವನವೆಂದ ಮೇಲೆ ನಿರಾ ಶೆಯ ಕ್ಷಣಗಳಾಗಲಿ ಕಠಿಣ ಪ್ರಸಂಗಗಳಾಗಲಿ ಬರುವಂತಹವೆ. ಹಾಗಾದಾಗಲೆಲ್ಲ ನಾನು 'ಅನ್ಯಥಾ ಶರಣಂ ನಾಸ್ತಿ' ಎಂದು ದೇವರನ್ನು ನೆನೆಯತೊಡಗುತ್ತೇನೆ. ಆಗ ದೇವರು ನನ್ನ ಸಹಾಯಕ್ಕೆ ಬಂದೇಬರುತ್ತಾನೆ. ಒಂದು ಸಲವೂ ಆತ ನನಗೆ ಕೈಕೊಟ್ಟಿದ್ದಿಲ್ಲ" ಎಂದು ಮ್ಯಾಗಿ ಬೆಸ್ಪರ್ ಹೇಳುವುದಿದೆ.

ಸರಿಯೆ, ಇಂಥಾ ಅಪರೂಪವಾದ ರೋಗ ಬಂದರೂ ಆಕೆ ಇಷ್ಟು ವರ್ಷ ಬದುಕಿದ್ದಾಳೆಂದ ಮೇಲೆ ದೇವರಲ್ಲಿ ವಿಶ್ವಾಸ ಬಾರದಿರಲು ಉಂಟೆ? ●

೨೪೦ ಡಾಲರ್ ಸಂಭಾವನೆ ನೀಡುತ್ತಿದ್ದ. ಮೂರು ವರ್ಷಗಳವರೆಗೆ ಈ ಸಂಭಾವನೆ ಆಕೆಗೆ ದೊರಕಿತು. ವಿಲಕ್ಷಣ ಸ್ವರೂಪದ ಹುಡುಗಿ ಆ್ಯನಿ ಜೇಮ್ಸ್‌ಳಿಂದ ಬರ್ನಾಮ್‌ನ ಆರ್ಥಿಕ ಸ್ಥಿತಿ ಸುಧಾರಿಸಿತು. ಆ್ಯನಿ ಜೇಮ್ಸ್‌ಳನ್ನು ಬರ್ನಾಮ್‌ನ ರಕ್ಷಣೆಗೆ ಒಪ್ಪಿಸಿ ಅವಳ ತಂದೆ ತಾಯಿ ತಮ್ಮ ಊರಿಗೆ ವಾಪಸಾದರು. ಅವರ ಅನುಪಸ್ಥಿತಿಯಲ್ಲಿ ಪುಟಾಣಿ ಹುಡುಗಿ ಆ್ಯನಿ ಜೇಮ್ಸ್‌ಳನ್ನು ಯಾರೋ ಅಪಹರಿಸಿಕೊಂಡೊಯ್ದರು.

ವಿಕ್ಸ್ ಎಂಬಾತ ಆ್ಯನಿ ಜೇಮ್ಸ್‌ಳನ್ನು ಅಪಹರಿಸಿದ್ದ. ಆತ ಪರಿಣತ ಮಿದುಳು ವೈದ್ಯನಾಗಿದ್ದ. ಆ್ಯನಿ ಜೇಮ್ಸ್‌ಳನ್ನು ಬಳಸಿ ಕೊಂಡು ಆತ ಹಣ ಸಂಪಾದಿಸಲು ಬಯ ಸುತ್ತಿದ್ದ. "ಆ್ಯನಿ ಜೇಮ್ಸ್ ನಮ್ಮ ಮಗಳು. ಆಕೆಯನ್ನು ನಮಗೆ ಒಪ್ಪಿಸಬೇಕು" ಎಂಬ ಅವಳ ತಂದೆ-ತಾಯಿಗಳ ಕೋರಿಕೆಯನ್ನು ವಿಕ್ಸ್ ಖಂಡತುಂಡವಾಗಿ ನಿರಾಕರಿಸಿದ. ಕೊನೆಗೆ ಬೇರೆ ಮಾರ್ಗವೇ ಇಲ್ಲದೆ ಆ್ಯನಿ ಜೇಮ್ಸ್‌ಳ ತಂದೆ ತಾಯಿ ನ್ಯಾಯಾಲಯದ ಮೊರೆ ಹೊಕ್ಕರು.

ನ್ಯಾಯಾಲಯದಲ್ಲಿ ಹಾಜರಾದ ವಿಕ್ಸ್ ದಂಪತಿ ಅವನ ಪತ್ನಿ ಆ್ಯನಿ ಜೇಮ್ಸ್ ತಮ್ಮ ಮಗಳೆಂದೇ ವಾದಿಸಿದರು. ಆಗ ನ್ಯಾಯಾಧೀ ಶರು ಆ್ಯನಿ ಜೇಮ್ಸ್‌ಳನ್ನು ಒಂದು ಪ್ರತ್ಯೇಕ ಕೋಣೆಯಲ್ಲಿರಿಸಿದರು. ಸ್ವಲ್ಪ ಹೊತ್ತಿನ ತರು ವಾಯ ಅವಳನ್ನು ನ್ಯಾಯಾಲಯದ ಕೊಠ ಡಿಗೆ ಕರೆ ತಂದಾಗ ತಕ್ಷಣ ತನ್ನ ತಂದೆ ತಾಯಿಯ ಬಳಿಗೆ ಓಡಿ ಬಂದು ಅವರನ್ನು ಅಪ್ಪಿಕೊಂಡಳು. ವಿಕ್ಸ್‌ನನ್ನು ಅಪಹರಣದ ಆರೋಪದ ಮೇರೆಗೆ ಬಂಧಿಸಲಾಯಿತು. ಆ್ಯನಿ ಜೇಮ್ಸ್‌ಳನ್ನು ಅವಳ ತಂದೆ ತಾಯಿಯ ವಶಕ್ಕೊಪ್ಪಿಸಲಾಯಿತು.

ಆ್ಯನಿ ಜೇಮ್ಸ್ ಹದಿನೇಳರ ಹದಿಹರೆ ಯದ ಸುಂದರ ತರುಣಿಯಾಗಿ ನಿಂತಳು. ಒಂದೇ ಸಮಸ್ಯೆಯೆಂದರೆ ಅವಳ ಮುಖದಲ್ಲಿ ಬೆಳೆದ ನೀಳವಾದ ಗಡ್ಡಮೀಸೆ. ಅವಳ ಮುಖ ದಲ್ಲಿ ಎಂಟು ಅಂಗುಲಕ್ಕೂ ಉದ್ದವಾದ ಗಡ್ಡ ಬೆಳೆಯಿತು. ಆದರೆ ಅವಳ ಧ್ವನಿ ಹೆಣ್ಣಿಗೆ ಸಹಜವಾದ ಕೋಮಲತೆಯಿಂದ ಕೂಡಿತ್ತು.

ಮುಂದೆ ಆ್ಯನಿ ಜೇಮ್ಸ್ ವಿವಾಹವಾದಳು. ಆದರೆ . ಅದು ವಿಚ್ಛೇದನದಲ್ಲಿ ಕೊನೆಗೊಂ ಡಿತು. ಎರಡನೆಯ ಬಾರಿ ಆಕೆ ವಿಲಿಯಂ ಡೊನಾಲ್ಡ್ ಎಂಬಾತನನ್ನು ಮದುವೆಯಾ ದಳು. ಆ ಮದುವೆ ಸಫಲವಾಯಿತು.

ಪಿ.ಟಿ. ಬರ್ನಾಮ್‌ನೊಂದಿಗೆ ಮಾಡಿ ಕೊಂಡ ಒಪ್ಪಂದದ ಅವಧಿ ಮುಗಿದ ಬಳಿಕ ಆ್ಯನಿ ಜೇಮ್ಸ್ ಆ ತಂಡವನ್ನು ತ್ಯಜಿಸಿ ಸರ್ಕಸ್ ತಂಡವೊಂದರಲ್ಲಿ ಸೇರಿಕೊಂಡಳು. ಹಲವು ದೇಶಗಳಲ್ಲಿ ಪ್ರವಾಸ ಮಾಡಿ ಸಾರ್ವಜನಿಕ ಪ್ರದರ್ಶನ ನೀಡಿದಳು. ಫ್ರಾನ್ಸ್, ಜರ್ಮನಿ, ರಶಿಯಾ ದೇಶಗಳಲ್ಲಿ ಗಡ್ಡಧಾರಿಣಿ ಆ್ಯನಿ ಜೇಮ್ಸ್ ಭಾರೀ ಜನಪ್ರಿಯತೆಗಳಿಸಿದಳು. ಸಾರ್ವಜನಿಕ ಪ್ರದರ್ಶನದ ಮೂಲಕ ಆಕೆ ಅಪಾರ ಹಣ ಸಂಪಾದಿಸಿದಳು. ಯುರೋಪ್‌ನಲ್ಲಿ ಆಕೆ ಪ್ರವಾಸ ಮಾಡುತ್ತಿದ್ದ ಸಂದರ್ಭದಲ್ಲಿದ್ದಾಗಲೇ ಅವಳ ಪತಿ ವಿಲಿಯಂ ತೀರಿಕೊಂಡ. ಕೆಲ ವರ್ಷಗಳ ತರುವಾಯ ಆ್ಯನಿ ಜೇಮ್ಸ್‌ಳೂ ನಿಧನಳಾ ದಳು.

## ಗ್ರೇಸ್ ಗಿಲ್ಬರ್ಟ್

ಇತಿಹಾಸದಲ್ಲಿ ಪ್ರಸಿದ್ಧರಾದ ಗಡ್ಡಧಾರಿಣಿ ಯರ ಪೈಕಿ ಗ್ರೇಸ್ ಗಿಲ್ಬರ್ಟ್‌ಳ ಬದುಕಿನ ಕತೆ ರೋಮಾಂಚಕ. ಗ್ರೇಸ್ ಗಿಲ್ಬರ್ಟ್ ಅಮೆರಿ ಕಾದ ಮಿಶಿಗನ್‌ನಲ್ಲಿ ಮಧ್ಯಮ ವರ್ಗದ ರೈತ ಕುಟುಂಬದಲ್ಲಿ ಜನಿಸಿದಳು. ಹುಟ್ಟಿದಾಗಲೇ ಅವಳ ಮೈ ಮುಖದ ಮೇಲೆಲ್ಲ ಕೆಂಪು ಬಣ್ಣದ ಕೂದಲುಗಳು ಬೆಳೆದಿದ್ದವು. ವಯ ಸ್ಸಾದಂತೆ ಗ್ರೇಸ್ ಗಿಲ್ಬರ್ಟ್‌ಳ ಗಡ್ಡ ಬೆಳೆ ಯುತ್ತಾ ಹೋಯಿತು. ಆಕೆ ಯುವತಿಯಾ ದಾಗ ಅವಳ ಗಡ್ಡ ಏಳು ಅಂಗುಲ ಉದ್ದ ವಾಗಿತ್ತು!

ಗ್ರೇಸ್ ಗಿಲ್ಬರ್ಟ್ ಶಾರೀರಿಕವಾಗಿಯೂ

ಬಲಿಷ್ಠಳಾಗಿದ್ದಳು. ಆಕೆ ತಂದೆಯ ಜೊತೆಯಲ್ಲಿ ಹೊಲದಲ್ಲಿ ಗಂಡಸರು ಮಾಡುವ ಎಲ್ಲ ಕೆಲಸವನ್ನು ಲೀಲಾಜಾಲವಾಗಿ ನಿರ್ವಹಿಸುತ್ತಿದ್ದಳು. ಗ್ರೇಸ್ ಗಿಲ್ಬರ್ಟ್‌ಳೂ ಬರ್ನಾಮ್ ಮತ್ತು ಇತರ ಹಲವು ಸರ್ಕಸ್ ವ್ಯವಸ್ಥಾಪಕರ ಕಂಪನಿಗಳಲ್ಲಿ ಪ್ರದರ್ಶನ ನೀಡುತ್ತಾ ಜಗತ್ತಿನ ಹಲವು ರಾಷ್ಟ್ರಗಳಲ್ಲಿ ಪ್ರವಾಸ ಮಾಡಿದ್ದಳು.

ಮೇಲೆ ಉಲ್ಲೇಖಿಸಿದ ಗಡ್ಡಧಾರಿಣಿಯರು ೧೯, ೧೭ನೇ ಶತಮಾನದಲ್ಲಿದ್ದವರಾದರೆ ಆಧುನಿಕ ಕಾಲದಲ್ಲಿಯೂ ಗಡ್ಡ ಬೆಳೆದ ಕೆಲವರು ಮಹಿಳೆಯರ ಜೀವನದ ನಿದರ್ಶನಗಳು ನಮ್ಮ ಮುಂದಿವೆ. ಅದರಲ್ಲಿ ಓಲ್ಗಾ ಮತ್ತು ಕಲಮೆಂಟ್ಯೆನ್ ಡಿಲೇಡ್ ಎಂಬ ಇಬ್ಬರು ಮಹಿಳೆಯರು ಉಲ್ಲೇಖನಾರ್ಹರು.

ಓಲ್ಗಾಳ ನಿಜ ಹೆಸರು ಜೇನ್ ಬಾರ್ನೆಲ್. ಉತ್ತರ ಕಲೋರಿನಾದ ವಿಲ್ಮಿಂಗ್ಟನ್ ಪಟ್ಟಣದಲ್ಲಿ ಆಕೆ ಜನಿಸಿದಳು. ಸರ್ಕಸ್ ಕಂಪನಿಗಳು ಹಾಗೂ ಮ್ಯೂಸಿಯಂಗಳ ಲೋಕದಲ್ಲಿ ಪದಾರ್ಪಣೆ ಮಾಡಿದ ತರುವಾಯ ಜೇನ್ ಬಾರ್ನೆಲ್ ತನ್ನ ಹೆಸರನ್ನು ಓಲ್ಗಾ ಎಂದು ಬದಲಾಯಿಸಿಕೊಂಡಳು. ಆಕೆ ಹಾಲಿವುಡ್‌ನ ಕೆಲವು ಚಿತ್ರಗಳಲ್ಲಿಯೂ ಅಭಿನಯಿಸಿದ್ದಳು.

ತನ್ನ ಮುಖದಲ್ಲಿ ಬೆಳೆದಿರುವ ಗಡ್ಡ ಸೌಭಾಗ್ಯದ ಸಂಕೇತವೆಂದೇ ಓಲ್ಗಾಳ ನಂಬಿಕೆ. ಮಹಿಳೆಯರು ತಮ್ಮ ಗಡ್ಡವನ್ನು ಹೇಗೆ ಆರೈಕೆ ಮಾಡಿಕೊಳ್ಳಬೇಕು ಎಂಬುದರ ಉಪಾಯವನ್ನು ಆಕೆ ಹೇಳಿಕೊಡುತ್ತಿದ್ದಳು.

ಓಲ್ಗಾ ದಾಂಪತ್ಯ ಜೀವನದಲ್ಲಿ ಅದೃಷ್ಟವಂತೆ. ಆಕೆ ನಾಲ್ಕು ಬಾರಿ ವಿವಾಹವಾದಳು. ಅವಳ ನಾಲ್ಕನೇ ಪತಿ ಸರ್ಕಸ್ ಕಂಪೆನಿಯೊಂದರ ವಿದೂಷಕನಾಗಿದ್ದ. ವಯಸ್ಸಿನಲ್ಲಿ ಆತ ಓಲ್ಗಾಳಿಗಿಂತ ಒಂದು ವರ್ಷ ಕಿರಿಯ. ಸ್ವಭಾವತಃ ಓಲ್ಗಾ ದಯಾಮಯಿ, ದೃಢ ಸಂಕಲ್ಪದ ಮಹಿಳೆಯಾಗಿದ್ದಳು.

## ಗಡ್ಡಧಾರಿಣಿಯ ರೆಸ್ಟೋರೆಂಟ್

ಗಡ್ಡಧಾರಿಣಿಯರ ಪೈಕಿ ಕಲಮೆಂಟ್ಯೆನಳ



ಹದಿನೈದು ಪೌಂಡು ತೂಕದ
ಇಪ್ಪತ್ತೈದು ಅಂಗುಲ ಎತ್ತರದ
ಮೂವತ್ತೈದು ಪುರುಷ
ಪಿ.ಟಿ. ಬಾರ್ನಮ್ ತನ್ನ
ಪ್ರದರ್ಶಕನ ಜೊತೆ.

ಕತೆ ಇನ್ನಷ್ಟು ರೋಚಕ. ಅವಳ ಮುಖದಲ್ಲಿ ಬಾಲ್ಯದಿಂದಲೇ ಗಡ್ಡ ಬೆಳೆಯುತ್ತಿತ್ತು. ವಿವಾಹಾನಂತರ ಕಲಮೆಂಟ್ಯೆನ್ ಮೇಡಂ ಡಿಲೇಡ್ ಎಂದು ಹೆಸರಾದಳು. ಅವಳ ಪತಿ ಜೋಸೆಫ್ ಡಿಲೇಡ್ ರೆಸ್ಟೋರೆಂಟ್ ಒಂದರ ಮಾಲೀಕನಾಗಿದ್ದ. ಮೇಡಂ ಕಲಮೆಂಟ್ಯೆನಳೂ ತನ್ನ ಪತಿಯ ವ್ಯವಹಾರಗಳಲ್ಲಿ ಸಹಕರಿಸುತ್ತಿದ್ದಳು.

ಕಲಮೆಂಟ್ಯೆನ್ ದಿನವೂ ಶೇವ್ ಮಾಡಿಕೊಳ್ಳುತ್ತಿದ್ದಳು. ಸಾಧ್ಯವಾದಷ್ಟು ಮಟ್ಟಿಗೆ ತನ್ನ ಗಡ್ಡ ಮೀಸೆ ಸಾರ್ವಜನಿಕರ ಗಮನಕ್ಕೆ ಬಾರದಂತೆ ಆಕೆ ನೋಡಿಕೊಳ್ಳುತ್ತಿದ್ದಳು. ಒಂದು ಬಾರಿ ಕಲಮೆಂಟ್ಯೆನ್ ತನ್ನ ಪತಿಯೊಂದಿಗೆ ಸರ್ಕಸ್ ಪ್ರದರ್ಶನವೊಂದಕ್ಕೆ ಹೋದಳು. ಅಲ್ಲಿಯ ವಿಶೇಷ ಆಕರ್ಷಣೆ ಎಂದರೆ ಗಡ್ಡಧಾರಿಣಿ ಮಹಿಳೆಯೊಬ್ಬಳ ಪ್ರದರ್ಶನ. ಅವಳನ್ನು ನೋಡಿ ಕಲಮೆಂಟ್ಯೆನ್‌ಗೆ ಭಾರೀ ಆಶ್ಚರ್ಯವಾಯಿತು.

"ಮಹಿಳೆಯರಿಗೆ ಗಡ್ಡ ಬೆಳೆಯುವುದು ಆಶ್ಚರ್ಯಜನಕ ವಿದ್ಯಮಾನವಲ್ಲವೇ?" ಆಕೆ

ಪತಿಯನ್ನು ಪ್ರಶ್ನಿಸಿದಳು.

"ನಿಜ, ಮಹಿಳೆಯರ ಮುಖದಲ್ಲಿ ಗಡ್ಡ ಚಿಗುರುವುದು ಅಸಾಧಾರಣ ಘಟನೆಯೇ ಹೌದು," ಪತಿ ಉತ್ತರಿಸಿದ.

"ನಾನು ಬಯಸಿದರೆ ಸರ್ಕಸ್‌ನಲ್ಲಿ ಕಾಣ ಸಿಕೊಂಡ ಈ ಮಹಿಳೆಗಿಂತ ಹೆಚ್ಚು ಉದ್ದ ವಾದ ಗಡ್ಡ ಬೆಳೆಸಿ ತೋರಿಸುತ್ತೇನೆ" ಎಂದಳು ಕಲಮೆಂಟೈನ್. ಹೆಂಡತಿಯ ಮಾತು ಕೇಳಿ ಈಕೆ ತಮಾಷೆ ಮಾಡುತ್ತಿದ್ದಾಳೆ ಅನಿಸಿತು ಪತಿಗೆ.

ದಿನಗಳೆದಂತೆ ಕಲಮೆಂಟೈನ್‌ಳ ಗಡ್ಡ ಬೆಳೆ ಯತೊಡಗಿತು. ರೆಸ್ಟೊರೆಂಟ್‌ಗೆ ಉಪಾಹಾರ ಸ್ವೀಕರಿಸಲು ಬರುತ್ತಿದ್ದ ಗಿರಾಕಿಗಳು ಅವಳ ಗಡ್ಡ ನೋಡಿ ಬೆಕ್ಕಸ ಬೆರಗಾಗುತ್ತಿದ್ದರು. ಅವಳ ಮುಖದಲ್ಲಿ ಹನ್ನೆರಡು ಅಂಗುಲದಷ್ಟು ಉದ್ದ ಗಡ್ಡ ಬೆಳೆದಿತ್ತು.

ಡಿಲೇಡ್‌ನ ರೆಸ್ಟೊರೆಂಟ್ 'ಗಡ್ಡಧಾರಿಣಿ ಮಹಿಳೆಯ ರೆಸ್ಟೊರೆಂಟ್' ಎಂದೇ ಹೆಸರಾ ಯಿತು. ಚಹಾ, ಕಾಫಿ, ಉಪಾಹಾರ ಸೇವಿ ಸಲು ಬರುವ ಗಿರಾಕಿಗಳಿಗಿಂತಲೂ ಹುಲು ಸಾದ ಗಡ್ಡ ಬೆಳೆದ ಕಲಮೆಂಟೈನ್‌ಳನ್ನು ನೋಡಲು ಬರುವವರ ಸಂಖ್ಯೆಯೇ ಅಧಿಕ ವಾಗಿತ್ತು.

ಫ್ರಾನ್ಸಿನಲ್ಲಿ ಬಹಳಷ್ಟು ಪತ್ರಿಕೆಗಳು ಅವಳ ಸಂದರ್ಶನ ಲೇಖನ ಪ್ರಕಟಿಸಿದುವು. ಪತಿಯ ನಿಧನದ ತರುವಾಯ ಕಲಮೆಂಟೈನ್ ಸ್ವತಂತ್ರ ಳಾದಳು. ಅನಂತರ ಆಕೆಯ ಬದುಕು ಸರ್ಕಸ್ ಕ್ಷೇತ್ರಕ್ಕೆ ಸಮರ್ಪಿತವಾಯಿತು. ಫ್ರಾನ್ಸಿನ ನಗರಗಳಲ್ಲಿ ಅಲ್ಲದೆ, ಲಂಡನ್‌ನಲ್ಲಿಯೂ ಆಕೆ ತನ್ನ ಗಡ್ಡವನ್ನು ಪ್ರದರ್ಶಿಸತೊಡಗಿದಳು. ಆ ಮೂಲಕ ಆಕೆ ಅಪಾರ ಖ್ಯಾತಿ ಗಳಿಸಿದಳು.

ಕಲಮೆಂಟೈನ್‌ಳ ಹೆಸರಿನಲ್ಲಿ ಫ್ರಾನ್ಸಿನಲ್ಲಿ ಒಂದು ಮ್ಯೂಜಿಯಂ ಕೂಡ ಸ್ಥಾಪನೆಯಾ ಗಿತ್ತು. ಹೆಣ್ಣಿನ ಮುಖದಲ್ಲಿ ಗಡ್ಡ ಬೆಳೆಯು ವುದು ಗೌರವ ಹಾಗೂ ಪ್ರತಿಷ್ಠೆಯ ಸಂಕೇತ ಎಂದು ಆಕೆ ಪರಿಗಣಿಸಿದ್ದಳು. ●

# ಛೋಟೂರಾಮ



ಈತನ ಎತ್ತರ ಕೇವಲ ೨೧.೫ ಅಂಗುಲ. "ಅದರೇನಂತೆ? ನನ್ನನ್ನ ಮದುವೆ ಯಾಗೋದಕ್ಕೆ ಯಾರಾದ್ರೂ ಹುಡುಗಿ ತಯಾ ರಾಗಿಬಿಟ್ರೆ ನನ್ನನ್ನ ನಾನೇ ಹತ್ತಡಿ ಎತ್ತರದವನು ಅಂತ ಭಾವಿಸ್ಕೋಳ್ತೀನಿ," ಎನ್ನುತ್ತಾನೆ ಈ ಛೋಟೂರಾಮ.

ಹಾಂ, ಇವನು ನಿಜಕ್ಕೂ ಛೋಟೂರಾಮ ಅಂದ್ಕೋಬೇಡಿ ಮತ್ತೆ. ಈತನ ಹೆಸರು ಸಾಲಿಹ್ ಜೇಲಿ. ಈಗವನಿಗೆ ೨೯ ವರ್ಷ ತುಂಬಿದೆ. ಸಂಗೀತವೆಂದರೆ ಜೀವ. ಅದರಲ್ಲೂ ಗಿಟಾರ್ ನುಡಿಸೋದಂದ್ರೆ ಎಲ್ಲಿಲ್ಲದ ಪ್ರೀತಿ. ತನ್ನ ಕೈಯಳತೆಗೆ ನಿಲುಕುವಂಥ ಗಿಟಾರೊಂ ದನ್ನು ಮಾಡಿಸಿಟ್ಟುಕೊಂಡಿದ್ದಾನೆ.

ಹುಟ್ಟಿನಿಂದಲೇ ಕುಳ್ಳ ಅಲ್ಲ ಸಾಹಿಲ್. ಎಂಟು ತಿಂಗಳವರೆಗೂ ಸರಿಯಾಗೇ ಬೆಳೆದ. ಆದರೆ ಆಗೊಮ್ಮೆ ಆಡಾಡ್ತಾ ಅವನಕ್ಕ ಎತ್ತಿ ಕೊಂಡ ಈ ತಮ್ಮನ್ನ ಎತ್ತಿ ತೂರಿಬಿಟ್ಟು

ಬಿಟ್ಟಂತೆ. ತಲೆ ಕೆಳಗಾಗಿ ಬಿದ್ದನಲ್ಲ, ಹೀಗಾಗಿ ಮಿದುಳಿಗೆ ಪೆಟ್ಟಾಗಿ ಸಾಲಿಹ್‌ನ ಬೆಳವಣಿಗೆಯೇ ನಿಂತು ಹೋಗುವಂತಾಯಿತಂತೆ.

ಅಲ್ಜೀರಿಯಾದ ..ರಿಕಾ ನಗರದಲ್ಲಿ ಅಪ್ಪ-ಅಮ್ಮನ ಜತೆಯಲ್ಲೇ ವಾಸಿಸುತ್ತಾನೆ. ಅರಬ್ಬಿ ಭಾಷೆಯ ದಿನಪತ್ರಿಕೆ 'ಅಲ್ ನಾಸರ್' ಈ ಅದ್ಭುತ ಕುಳ್ಳನನ್ನು ಕಂಡು ಮಾತಾಡಿಸಿ ಆತನ ಬದುಕಿನ ಕಥೆಯನ್ನು ಪ್ರಕಟಿಸಿದ ಮೇಲೆಯೇ ಸಾಲಿಹ್ ಜಗತ್ತಿಗೆ ಪರಿಚಿತನಾದದ್ದು. ಆಫ್ರಿಕಾ ಮತ್ತು ಯುರೋಪಿನ ಟಿ.ವಿ. ಕೇಂದ್ರಗಳವರು ಸಾಲಿಹ್‌ನ ಸಂದರ್ಶನವನ್ನು ಬಿತ್ತರಿಸಿದ್ದಾರೆ.

ಎತ್ತರದ ಹುಡುಗರು ಏನಾದರೂ ಚೇಷ್ಟೆ ಮಾಡಿ ತಮ್ಮ ಮಗನನ್ನು ಮಾನಸಿಕವಾಗಿಯೂ ಕುಬ್ಜನನ್ನಾಗಿಸಿಬಿಟ್ಟಾರೆಂಬ ಭಯದಿಂದ ಸಾಲಿಹ್‌ನ ತಂದೆ-ತಾಯಿಯರು ಆತನನ್ನು ಶಾಲೆಗೆ ಕಳಿಸಲೇ ಇಲ್ಲವಂತೆ. ಮನೆಯಲ್ಲೇ ಪಾಠ ಹೇಳಿಸಿ, ಸಂಗೀತವನ್ನೂ ಕಲಿಸಿದ್ದಾರೆ.

ಮನೆಯಂಗಳದಲ್ಲಿ ಅದೂ ಕಾಂಪೌಂಡಿನ ಒಳಗೆ ಮಾತ್ರ, ತನ್ನ ಟ್ರೈಸಿಕಲ್‌ನಲ್ಲಿ ಕೂತು ಸುತ್ತು ಹಾಕಿ ಸಂತೋಷಪಡುವ ಸಾಲಿಹ್ ಒಂಟಿಯಾಗಿ ಎಂದೂ ಬೀದಿಗಿಳಿಯುವುದಿಲ್ಲ. "ಜನರ ಭಯವೇ?" ಅದಂತೂ ಇದ್ದದ್ದೇ. "ಆದರೆ ಬೀದಿ ನಾಯಿಗಳು ಬೆನ್ನಟ್ಟಿದರೆ ಅವುಗಳಿಂದ ತಪ್ಪಿಸಿಕೊಂಡು ಓಡುವಷ್ಟು ತಾಕತ್ತಿಲ್ಲವಲ್ಲ" ಎನ್ನುತ್ತಾನೆ ಸಾಲಿಹ್.

"ಏನಿದ್ದರೂ ನಾನು ಮನೆಯಿಂದ ಹೊರಬೀಳೋದು ಅಪ್ಪ-ಅಮ್ಮನ ಜತೆ ಮಾತ್ರ. ಅವರೂ ಒಮ್ಮೊಮ್ಮೆ ಬೇಸರಿಸುತ್ತಾರೆ. ಹೀಗಾಗಿ ನನಗೊಬ್ಬ ನನ್ನಷ್ಟೇ ಎತ್ತರದ ಹೆಂಡತಿ ಸಿಕ್ಕರೆ ಇಬ್ಬರೂ ಕೈಗೆ ಕೈ ಬೆಸೆದುಕೊಂಡು ಓಡಾಡಬಹುದು" ಎಂದು ಕಣ್ಣು ಮಿಟುಕಿಸುವ ಸಾಲಿಹ್ ತುಂಬ ತುಂಟನೂ ಹೌದು. ಆದರೆ ತಂಟೆಕೋರ ಮಾತ್ರ ಖಂಡಿತ ಅಲ್ಲ.



# ಗುಂಡು ನಿರೋಧಕ ಔಷಧಿ...



"ಎಂಥ ಗುಂಡೇ ಇರಲಿ, ಅದನ್ನೆದುರಿಸಬಲ್ಲ ಗಂಡೆದೆಯವ ನಾನು" ಎಂದು ನೀವಿನ್ನು ಘಂಟಾಘೋಷವಾಗಿ ಹೇಳಿಬಿಡಲು ಅಡ್ಡಿಯಿಲ್ಲ. ಅದಾವುದೇ ಬಗೆಯ ಬಾಂಬ್ ಅಥವಾ ಬುಲೆಟ್ಟಿದ್ದರೂ ಅದರ ಪರಿಣಾಮ ನಿಮ್ಮ ಮೇಲೆ ಎಳ್ಳಿನಿತೂ ಆಗದ ಹಾಗೆ ನೋಡಿಕೊಳ್ಳಬಲ್ಲ ಔಷಧಿಯೊಂದಿದೆ. ನಿಮ್ಮನ್ನು ಗುಂಡುನಿರೋಧಕ (ಬುಲೆಟ್ ಪ್ರೂಫ್) ಮನುಷ್ಯರಾಗಿ ಮಾಡಬಲ್ಲ ಔಷಧಿ ಅದು.

ಚಿತ್ರದಲ್ಲಿ ಕಾಣುತ್ತಾನಲ್ಲ, ಅವನೇ ಈ ಔಷಧಿಯನ್ನು ತಯಾರಿಸಬಲ್ಲ ವೈದ್ಯ. ಆತ ಕೊಡುವ ಔಷಧಿಯ ಒಂದೇ ಒಂದು ಹನಿ ...ಮ್ಮ ಗಂಟಲಿ... ...ಗಿಳಿದರೂ ಸಾಕು, ... ಬುಲೆಟ್ ಪ್ರೂಫೇ. ...ದರೆ ತೊಂದರೆಯೆಂದರೆ ಈ ವೈದ್ಯ ...ರುವುದು ಭಾರತದಲ್ಲಲ್ಲ. ದೂರದ ಆಫ್ರಿಕದಲ್ಲಿ. ಈ ಆದಿವಾಸಿ ವೈದ್ಯ ಹೇಳುತ್ತಾನೆ-"ಕೇವಲ ಗುಂಡು-ಬಾಂಬು ಅಷ್ಟೇ ಅಲ್ಲ, ಯಾರಾದರೂ ನಿಮ್ಮನ್ನು ಚೂರಿಯಿಂದ ಇರಿದರೂ ಗಾಯವಾಗುವುದಿಲ್ಲ, ನೆತ್ತರೂ ಸುರಿಯುವುದಿಲ್ಲ."

ಥ್ವಿಂಬೆ ಬೂಗಾ ಎಂದು ಕರೆಸಿಕೊಳ್ಳುವ ಈ ಕಾಡುವೈದ್ಯನಿಗೆ ಸುಮಾರು ೮೦ ವರ್ಷ ವಯಸ್ಸು. ಆದರೆ ವಯಸ್ಸು ಆತನ ಮೇಲೆ ಪರಿಣಾಮವನ್ನೇನೂ ಮಾಡಿಲ್ಲ. ಪ್ರತಿದಿನ ಹಗಲಿರುಳೆನ್ನದೇ ಆತನ ಕಣ್ಣುಗಳು ಆ ವಿಶಿಷ್ಟ

ಗಿಡಮೂಲಿಕೆಗಳನ್ನು ಅರಸುತ್ತಿರುತ್ತವೆ. ಕಾಲುಗಳು ದಣಿವರಿಯದೇ ಕಾಡುದಾರಿಯನ್ನು ಸವೆಸುತ್ತಿರುತ್ತವೆ. ನಂತರ ಔಷಧಿ ತಯಾರಿಕೆಯ ಕೆಲಸ. ಅದೆಲ್ಲ ಮಧ್ಯರಾತ್ರಿಯ ನಂತರವೇ ನಡೆಯುವಂಥದು.

ಬುಡಕಟ್ಟು ಜನಾಂಗದ ಬೂಗಾ ಆಧುನಿಕ ಜಗತ್ತಿನ ಎಲ್ಲ ನಯವಂಚಕತನಗಳಿಗೂ ಪರಿಚಿತ. ಪ್ಯಾಂಟು ತೊಟ್ಟ ಯಾರೇ ಇರಲಿ, ಅವರೊಂದಿಗೆ ವ್ಯವಹರಿಸುವಾಗ ಆತನ ಪ್ರತಿ ರೋಮವೂ ಒಂದು ಆ್ಯಂಟೆನಾದಂತೆ ಕೆಲಸ ಮಾಡುತ್ತದೆ.

"ನೀನು ತಯಾರಿಸುವ ಔಷಧಿಯಲ್ಲಿ ಏನೇನು ಸೇರಿಸುತ್ತಿ? ತಯಾರಿಕಾ ವಿಧಾನ ಏನು?" ಎಂದು ಕೇಳಿದರೆ ಆತ ಅಲ್ಲಿಂದೆದ್ದು ಮಾಯವಾಗಿಬಿಡುತ್ತಾನೆ.

"ಅಲ್ಲಪ್ಪಾ, ಹೇಳದಿದ್ದರ ಅಷ್ಟೇ ಹೋಯಿತು. ಯಾಕೆ ಹೇಳುವುದಿಲ್ಲ ಎಂಬುದನ್ನಾದರೂ ಹೇಳಲ್ಲ?" ಎಂದು ದುಂಬಾಲು ಬಿದ್ದರೆ ಬಾಯಿ ಬಿಡುತ್ತಾನೆ.

"ಊಹುಂ, ತಯಾರಿಕೆಯ ಸೂತ್ರವನ್ನು ಹೇಳುವುದಂತೂ ಸಾಧ್ಯವೇ ಇಲ್ಲ. ಅರೆಬರೆ ಅರಿತುಕೊಂಡು ಈ ಔಷಧಿಯನ್ನು ತಯಾರಿಸಲು ಯಾರಾದರೂ ಮುಂದಾದರೆ ಅನರ್ಥವಾಗುತ್ತದೆ. ಆದರೆ ಒಂದು ಮಾತಂತೂ ನಿಜ. ಈ ಔಷಧಿ ಗಿಡಮೂಲಿಕೆಗಳಿಂದಲೇ ತಯಾರಿಸಲ್ಪಡುತ್ತದೆ. ಜತೆಗೆ ಮಾನವ ಶವದ ಉಪಯೋಗವೂ ಇದರಲ್ಲಾಗುತ್ತದೆ".

"ಏನು? ಶವದ ಉಪಯೋಗವಾ?"

"ಹೌದು, ಯಾಕೆ ಭಯಭೀಳುತ್ತೀರಿ? ಮನುಷ್ಯ ಶವವನ್ನು ತೊಳೆದ ನೀರನ್ನೆಲ್ಲ ಶೇಖರಿಸಿ, ಆ ಶವದ ಕಣ್ಣುಗಳನ್ನು ಕಿತ್ತು ಅದರಲ್ಲಿ ಕುದಿಸುತ್ತೇನೆ. ಈ ಕುದಿಸಿ ಆರಿಸಿದ ನೀರೇ ಕಣ್ಣಿನ ರೋಗಗಳಿಗೆಲ್ಲ ಔಷಧಿಯಾಗಿ ಬಳಸಲ್ಪಡುತ್ತದೆ. ಇದು ದುರ್ಗಂಧಮಯ ಔಷಧಿ. ಕಣ್ಣಿಗೇನೋ ಸರಿ. ಆದರೆ ನಾಲಿಗೆಗೆ ತಾಕಿದರೇ ವಾಂತಿ ಬರುವಂಥ ದುರ್ವಾಸನೆ ಅದಕ್ಕೆ. ಔಷಧವನ್ನು ಗಟ್ಟಿಮನಸ್ಸಿನಿಂದ ಗಂಟಲಿಗಿಳಿಸಿ ನುಂಗಿಬಿಟ್ಟರೆ ಮುಗಿಯಲಿಲ್ಲ. ನಿಮ್ಮ ಆಹಾರವೂ ಬಲಕಾರಿಯಾದುದಾಗಿರಬೇಕು. ಒಂದು ಸಲ ಈ ಔಷಧಿ ಕುಡಿದರೆ ವರ್ಷದವರೆಗೆ ಯಾವ ಗುಂಡೂ ನಿಮ್ಮ ದೇಹದ ಮೇಲೆ ಪರಿಣಾಮವುಂಟು ಮಾಡದು."

ಜೈರೆಯ ಬೂಟಾ ಎಂಬಲ್ಲಿವನ ವಾಸ. ಮನೆಯೇ ಪ್ರಯೋಗಾಲಯ ಮತ್ತು ಚಿಕಿತ್ಸಾಲಯ. ತನ್ನ ಹೊಸ ಔಷಧಿಗಳನ್ನೆಲ್ಲ ಆತ ಮೊದಲು ಪ್ರಯೋಗಿಸಿಯೇ ರೋಗಿಗಳಿಗೆ ನೀಡುವುದು. ಈ ಗುಂಡು ನಿರೋಧಕ ಔಷಧಿಯನ್ನಾತ ಮೊದಲ ಸಲ ಪ್ರಯೋಗಿಸಿದ್ದು ಬೇರಾರ ಮೇಲೂ ಅಲ್ಲ. ತನ್ನ ಎಂಟು ವರ್ಷದ ಮೊಮ್ಮಗನನ್ನೇ ಅದಕ್ಕಾಗಿ ಬಳಸಿಕೊಂಡ. ಈ ಔಷಧಿಯ ಏಳೆಂಟು ಹನಿಗಳನ್ನು ಆ ಮಗುವಿನ ಬಾಯಿಗೆ ಹಾಕಿ ಆತನನ್ನು ದೂರದಲ್ಲಿ ಮರವೊಂದರ ಕೆಳಗೆ ನಿಲ್ಲಿಸಿದ. ಆ ಮೇಲೆ ಸತತವಾಗಿ ಮೊಮ್ಮಗನ ಮೇಲೆ ಏಳು ಸಲ ಗುಂಡು ಹಾರಿಸಿದ. ಹುಡುಗನ ದೇಹಕ್ಕೆ ಗುಂಡುಗಳೇನೋ ತಗಲಿದವು. ಆದರೆ ಒಂದಿನಿಂತೂ ಗಾಯವಾಗಲಿಲ್ಲ.

"ನನ್ನ ಈ ಔಷಧಿಯನ್ನು ಸೇವಿಸಿ ಗುಂಡು ನಿರೋಧಕ ಶಕ್ತಿಯನ್ನು ಬೆಳೆಸಿಕೊಂಡ ಅನೇಕ ನಾಯಕರು ಜಗತ್ತಿನ ಬೇರೆ ಬೇರೆ ದೇಶಗಳಲ್ಲಿದ್ದಾರೆ. ಅವರು ವರ್ಷಕ್ಕೊಮ್ಮೆ ನನ್ನ ಬಳಿ ಬಂದು ಹೋಗುತ್ತಿದ್ದಾರೆ. ಅವರೆಲ್ಲ ಈಗ ಮೇಲೆ ಹೇಳಿದ ಆಯುಧ ಅಸ್ತ್ರಗಳಿಂದ ಅಭೇದ್ಯರು. ತಮ್ಮ ಶಕ್ತಿ ಮತ್ತು ಅಧಿಕಾರದ ದುರುಪಯೋಗ ಮಾಡಿಕೊಳ್ಳದವರಿಗೆ ಮಾತ್ರ ನಾನು ಈ ಔಷಧಿಯನ್ನು ಕೊಡುವುದು ಅವರು ನನಗೆ ಅಪಾರ ಹಣ ನೀಡುತ್ತಾರೆ. ಅದಕ್ಕೆ ಪ್ರತಿಯಾಗಿ ನಾನವರನ್ನು ಅಜೇಯರನ್ನಾಗಿ ಮಾಡುತ್ತೇನೆ."

ಬೂಗಾ ಹೇಳುವುದರಲ್ಲಿ ಸತ್ಯವೆಷ್ಟಿದೆ, ಆತನ ಔಷಧಿಯಲ್ಲಿ ಸತ್ವವೆಷ್ಟಿದೆ ಎಂಬುದನ್ನು ಕೇವಲ ವಿಜ್ಞಾನಿಗಳು ನಿಕಷಕ್ಕೊಡ್ಡಲು ಸಾಧ್ಯ ಅಲ್ಲವೆ? ●





# ಮುಟ್ಟಿದರೆ ಮೃತ್ಯು ?

ಆರು ವರ್ಷಗಳ ಹಿಂದೆ ತೆಗೆಯಲ್ಪಟ್ಟ ಈ ಫೋಟೋದ ನಂತರ, ಚಿತ್ರದಲ್ಲಿರುವ ಮಗು ಮುಂದೆಂದೂ ಕ್ಯಾಮರಾಕ್ಕೆ ಮುಖ ಕೊಟ್ಟಿಲ್ಲ. ಇಂಗ್ಲೆಂಡಿನಲ್ಲಿರುವ ಈ ಮಗು ಹುಟ್ಟಿದಾರಭ್ಯವೇ "ಅಸ್ಪೃಶ್ಯ" ವೆನಿಸಿಬಿಟ್ಟಿದೆ.

ಏನು ಈ ಮಗು ಮಾಡಿದ ತಪ್ಪು? ಎಂಥ ಅಭಿಶಾಪ ಅದಕ್ಕೆ? ಪಾಪ, ತಾಯಮಡಿಲಿನ ಸುಖವೆಂದರೆ ಏನೆಂದೇ ಇದಕ್ಕೆ ಗೊತ್ತಿಲ್ಲ. ಅಮ್ಮ-ಅಪ್ಪ, ಸಂಬಂಧಿಕರಾರೂ, ಅದನ್ನು ಮುಟ್ಟುವಂತಿಲ್ಲ, ಬೆನ್ನು ತಟ್ಟುವಂತಿಲ್ಲ. ಅಪ್ಪಿ ಮುದ್ದಾಡಿದರಂತೂ ಮೃತ್ಯುವೇ ಅಪ್ಪಿಕೊಂಡಂತೆ.

ಒಂದು ಭಯಾನಕ ಚರ್ಮರೋಗದಿಂದ ಈ ಮಗು ಬಳಲುತ್ತಿರುವುದೇ 'ಅಸ್ಪೃಶ್ಯ'ವಾಗುಳಿಯಲು ಕಾರಣ. ಭಯಾನಕವಾಗಿರುವಂ

ತೆಯೇ ಅತ್ಯಪರೂಪದ್ದೂ ಹೌದು ಈ ರೋಗ. ತೀರ ನಗಣ್ಯವೆನ್ನಿಸುವಷ್ಟು ಹಿಸುಕಲ್ಪಟ್ಟರೂ ರೋಗಿ ಉಸಿರುಗಟ್ಟಿ ಸತ್ತು ಹೋಗುತ್ತಾನೆ. 'ಇಂಪೀಡರ್ ಮಾಲಿಸಿಸ್ ವುಲೋಸಾ' ಎಂದು ವೈದ್ಯಕೀಯ ಪರಿಭಾಷೆಯಲ್ಲಿ ಹೆಸರಿಸಲ್ಪಟ್ಟ ಈ ರೋಗದಿಂದ ಪೀಡಿತರ ಮುಖ್ಯ ತೊಂದರೆ ಎಂದರೆ ದೇಹದ ಮೇಲೆ ಸ್ವಲ್ಪವೇ ಒತ್ತಡ ಬಿದ್ದರೂ ಅವರ ತ್ವಚೆಯಿಡಿ ಕೆಂಪಗಾಗುತ್ತದೆ ಹಾಗೂ ಅಪರಿಮಿತ ಸಂಕಟದಿಂದ ಅವರು ಒದ್ದಾಡಬೇಕಾಗುತ್ತದೆ.

ಜೋ ಬ್ರೌನ್ ಇಂಥ ತೊಂದರೆಯಿಂದ ಬಳಲುತ್ತಿದ್ದಾಳೆ. ಚೆರಿಲ್ ಮತ್ತು ಹ್ಯಾರಿ ಬ್ರೌನ್‌ರ ಮಗಳೀಕೆ. ಜೋ ಸಂಬಂಧದಲ್ಲಿ ಹೇಳಬೇಕೆಂದರೆ 'ಇಂಪೀಡರ್ ಮಾಲಿಸಸ್ ವುಲೋಸಾ' ಆಕೆಯ ಅಂತರವಯವಗಳಿಗೂ ತಟ್ಟಿದೆ. ಹೀಗಾಗಿ ಜೋ ಜೋರಾಗಿ ಉಸಿರಾಡುವಂತಿಲ್ಲ, ಕೆಮ್ಮುವಂತಿಲ್ಲ, ನಗುವಂತೆಯೂ ಇಲ್ಲ, ಇನ್ನು ಓಡಾಟವಂತೂ ದೂರದ ಮಾತೇ. ಮಲಗಿದಲ್ಲಿಯೇ ಮಲಗಿಕೊಂಡಿರಬೇಕು. ಓರಗೆಯವರೊಂದಿಗೆ ಆಡಿಕೊಂಡು, ಹಾಡಿಕೊಂಡು, ಹಾರಾಡಿಕೊಂಡಿರಬೇಕಾದ ವಯಸ್ಸಿನಲ್ಲಿ ಇದೆಂಥ ಪಡಿಪಾಟಲು ನೋವು-ಹಸಿವೆಗಳು ಆಕೆಯನ್ನು ಬಾಧಿಸದಂತೆ ನೋಡಿಕೊಳ್ಳಬೇಕಾದದ್ದು ತೀರ ಅವಶ್ಯವಾದ್ದರಿಂದ ಮಗಳ ಬಳಿ ಅಪ್ಪ ಇಲ್ಲವೆ ಅಮ್ಮನ ಅಜ್ಜಗಾವಲಿರಲೇಬೇಕು.

ವೈದ್ಯಕೀಯ ತಜ್ಞರ ಸಲಹೆಯಂತೆ ರೂಪಿಸಲ್ಪಟ್ಟ ಉಪಕರಣಗಳು ಜೋಳನ್ನು ಸಲಹುತ್ತಿವೆ. ಒಂದು ರೀತಿಯಲ್ಲವು ಕಂಪ್ಯೂಟರೀಕೃತ ಸ್ವಯಂಚಾಲಿತ ಉಪಕರಣಗಳು. ಸ್ನಾನ ಮಾಡಿಸಲೂ ಯಂತ್ರ, ಊಟ ಮಾಡಿಸಲೂ ಯಂತ್ರ! ಕಾಲ್ಬೆರಳಿನಿಂದ ಕತ್ತಿನ ತನಕ ಬ್ಯಾಂಡೇಜು ಸುತ್ತಲೂ ಯಂತ್ರ!

ಹೂವಿನ ಹಾಗೆ ಸಾಕುವುದು ಎಂಬ ಮಾತೊಂದಿದೆಯಲ್ಲ. ಜೋಳನ್ನು ಈ ಯಂತ್ರಗಳು ಹಾಗೆಯೇ ನೋಡಿಕೊಳ್ಳುತ್ತಿವೆ. ●

ಇಕ್ವೆಡೋರಿನ ಸ್ಯಾನ್ ಮ್ಯಾಟಿಯೋ ಎಂಬ ಹಳ್ಳಿ ಒಂದು ವಿಚಿತ್ರ ಕಾರಣದಿಂದಾಗಿ ವೈದ್ಯ ಜಗತ್ತಿನ ಲಕ್ಷವನ್ನು ಸೆಳೆಯುತ್ತಿದೆ. ಆ ಹಳ್ಳಿಯ ಜನರ ಮೈಯೆಲ್ಲ ಹುರಬರಕು. ನೋಡಲು ಅವರೆಲ್ಲ ಮೀನಿನ ಹಾಗೆಯೇ ಕಾಣುತ್ತಾರೆ. ಮೈಬಣ್ಣ ಕೂಡ ಅಂಥಾದ್ದೆ. ಈ ವಿಚಿತ್ರ ರೋಗ ಅಲ್ಲಿನವರಿಗೆ ದೊಡ್ಡವರಾದ ಮೇಲೆ ತಗಲಿಕೊಳ್ಳುವುದಿಲ್ಲ ; ಹುಟ್ಟುವಾಗಲೇ ಅವರು 'ಮತ್ಸ್ಯಮಾನವ'ರಾಗಿರುತ್ತಾರೆ. ವಿಚಿತ್ರವೆಂದರೆ ಈ ವರೆಗೆ ಒಬ್ಬರಾದರೂ




ಮತ್ಸ್ಯಮಾನವರಲ್ಲದವರು ಸ್ಯಾನ್ ಮಾಟಿಯೋದಲ್ಲಿ ಜನಿಸಿಲ್ಲ. ಆ ಒಂದು ಹಳ್ಳಿಯ ಜನರಿಗೆ ಮಾತ್ರ ಈ ಅಪರೂಪದ ರೋಗ ಶತಮಾನಗಳ ಕಾಲದಿಂದ ಏಕೆ ಗಂಟುಬಿದ್ದಿದೆ

ಯೆನ್ನುವುದು ವೈದ್ಯ ಜಗತ್ತಿಗೆ ಬಿಡಿಸಲಾಗದ ರಹಸ್ಯ.

ವೈದ್ಯ ಜಗತ್ತಿಗೇ ಬಿಡಿಸಲಾಗದ ರಹಸ್ಯವನ್ನು ಅಲ್ಲಿನ ಸಾಮಾನ್ಯಜನ ಹೇಗೆ ಬಿಡಿಸಿಯಾರು? ಹಾಗೆಂದೇ ಈ ರೋಗ ಏಕೆ ತಗಲುತ್ತಿದೆಯೆಂಬ ಬಗ್ಗೆ ಸ್ಯಾನ್ ಮ್ಯಾಟಿಯೋದಲ್ಲಿ ಒಂದು ಕಥೆ ಪ್ರಚಲಿತವಾಗಿದೆ. ಆ ಪ್ರಕಾರ ಅನೇಕ ಶತಮಾನಗಳ ಹಿಂದೆ ಅವರ ಪೂರ್ವಜರು ಸಮುದ್ರದೇವತೆಯ ಮೂರ್ತಿಯನ್ನು ರಚಿಸಿ, ಆರಾಧಿಸಿದಾಗ ಸಮುದ್ರದೇವ ಸಂಪ್ರೀತನಾಗಿ ಪ್ರತ್ಯಕ್ಷನಾದ. ಜೀವನಯಾಪನೆಯಾಗಿ ಮೀನುಗಾರಿಕೆಯನ್ನು ಅವಲಂಬಿಸಿದ್ದ ಅವರಿಗೆ ಎಂದಿಗೂ ಮೀನಿನ ಬರ ಬಾರದಿರಲಿ, ಮೀನು ಹಿಡಿಯಲು ಹೋದಾಗಲೆಲ್ಲ ಸಮೃದ್ಧವಾಗಿ ಅವು ದೊರೆಯಲಿ ಎಂದು ವರವನ್ನು ನೀಡಿದ. ಆ ಪ್ರಕಾರ ಮೀನುಗಳು ವಿಪುಲವಾಗಿ ದೊರೆಯತೊಡಗಿದ್ದರಿಂದ ಸ್ಯಾನ್ ಮ್ಯಾಟಿಯೋದಲ್ಲಿನ ಜನರ ಜೀವನವೂ ವೈಭವೋಪೇತವಾಗಿ ನಡೆಯತೊಡಗಿತು. ಸಮೃದ್ಧಿಯೊಡನೆ ಕೆಟ್ಟಚಟಗಳೂ ಬರುವವೆಂಬುದು ಸುಳ್ಳಲ್ಲ. ಸಾರಾಯಿ ಕುಡಿಯುವ ಚಟ ಕ್ರಮೇಣ ಅಲ್ಲಿನ ಅನೇಕರಿಗೆ ಅಂಟಿಕೊಂಡಿತು. ಒಂದು ರಾತ್ರಿ ಬೆಸ್ತನೊಬ್ಬ ನಶೆಯಲ್ಲಿದ್ದಾಗ, ನಿತ್ಯ ಪೂಜೆಗೊಳ್ಳುತ್ತಿದ್ದ ಆ ಮೂರ್ತಿಯನ್ನು ನಾಶಪಡಿಸಿದ. ಇದನ್ನು ನೋಡಿ ಸಮುದ್ರದೇವನಿಗೆ ಸಿಟ್ಟು ಬಂತು. ಆತ ಆ ಗ್ರಾಮದ ಅನೇಕ ಹಸುಳೆಗಳನ್ನು ತಕ್ಷಣ ಮೀನುಗಳಾಗಿ ಪರಿವರ್ತಿಸಿ ಸಮುದ್ರಕ್ಕೆ ಎಸೆದ. ಮುಂದೆ ಅಲ್ಲಿ ಹುಟ್ಟುವ ಮಕ್ಕಳೂ ಮೀನಿನ ಮೈಯವರಾಗಿಯೇ ಹುಟ್ಟಲೆಂದು ಶಾಪವನ್ನೂ ಕೊಟ್ಟ.

ವಾಸ್ತವವಾಗಿ ಈ ಕಥೆ ಮೂಢನಂಬಿಕೆಯನ್ನು ಆಧರಿಸಿದ್ದಷ್ಟೆ. ಈ ಅಪರೂಪದ ರೋಗಕ್ಕೆ ವೈದ್ಯಕೀಯ ಪರಿಭಾಷೆಯಲ್ಲಿ ಇಕ್ಥಿಯೋಸಿಸ್ ಎಂದು ಹೆಸರು. ಇದು ಬಂದಾಗ ಮೈಯೆಲ್ಲ ಮೀನಿನ ಮೈಯಂತಾಗುತ್ತದೆ.

ಈ ಹಳ್ಳಿಯ ಕ್ರುಜ್ ಮತ್ತು ಜಾಸ್ ಲಾಪೆಜ್ ಎಂಬ ಮತ್ಸ್ಯಮಾನವರ ಬಗೆಗೆ ಹೊರಗಿನಿಂದ ಬಂದವರಿಗೆ ಅದೇಕೋ ವಿಶೇಷ ಆಕರ್ಷಣೆ. ಆದರೆ ಪುಕ್ಕಲು ಸ್ವಭಾವದ ಜಾಸ್ ತನ್ನಷ್ಟಕ್ಕೇ ಇರಬಯಸುವವ; ಯಾರಾದರೂ ಭೇಟಿಯಾಗಲು ಬಂದರೆ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸುತ್ತಾನೆ. ತುಂಬಾ ಸಂಕೋಚದ ಪ್ರವೃತ್ತಿಯವನೂ ಹೌದು. ಆದರೆ ಅವನ ಅಕ್ಕ ಕ್ರುಜ್‌ಳ ಸ್ವಭಾವ ತದ್ವಿರುದ್ಧ. ಹೊರಗಿನಿಂದ ಯಾರಾದರೂ ಬಂದರೆ ತಾನಾಗಿಯೇ ಪರಿಚಯಿಸಿಕೊಂಡು ಹರಟೆಹೊಡೆಯುವ ಸ್ವಭಾವದವಳು. ಬಟ್ಟೆಯ ಹೂಗಳನ್ನು ಮಾಡಿ ಅತಿಥಿಗಳಿಗೆ ಕೊಡುವುದೆಂದರೆ ಅವಳಿಗೆ ಎಲ್ಲಿಲ್ಲದ ಖುಷಿ.

"ಮತ್ಸ್ಯಮಾನವರ ಬಗೆಗೆ ಓದುವುದು ತುಂಬಾ ಮನರಂಜಕವಾಗಿರುತ್ತದೆ. ಆದರೆ ಒಮ್ಮೆ ನೀವು ಅವರನ್ನು ನೋಡಿದಿರೋ ಅವರ ಸ್ಥಿತಿಯನ್ನು ಕಂಡು ಹೃದಯ ಕರಗಿ ಹೋಗುತ್ತದೆ. ಒಬ್ಬರಲ್ಲ, ಇಬ್ಬರಲ್ಲ, ಈ ಹಳ್ಳಿಯಲ್ಲಿ ಇರುವವರೆಲ್ಲರೂ ಈ ರೋಗದಿಂದ ಪೀಡಿತರಾಗಿದ್ದಾರೆನ್ನುವುದನ್ನು ನೆನೆದಾಗ ಮನಸ್ಸಿಗೆ ಸಂಕಟವಾಗದೆ ಇರುವುದಿಲ್ಲ," ಎಂದು ಸ್ಯಾನ್ ಮ್ಯಾಟಿಯೋದಲ್ಲಿ ಸಂಚರಿಸಿ ಬಂದಿರುವ ಡಾ. ಎಡುವಾರ್ಡೋ ಎಂಬ ವೈದ್ಯರು ಹೇಳುತ್ತಾರೆ.

ಈಗ ಸಂಶೋಧನೆಯಲ್ಲಿ ನಿರತರಾದ ವೈದ್ಯಕೀಯ ವಿಜ್ಞಾನಿಗಳು ಇಕ್ಥಿಯೋಸಿಸ್ ಬಗೆಗೆ ಸಂಶೋಧನೆ ನಡೆಸುತ್ತಿದ್ದಾರೆ. ಅದರಿಂದಾಗಿ ಮುಂದೊಮ್ಮೆ ಸ್ಯಾನ್ ಮ್ಯಾಟಿಯೋದ ನಿವಾಸಿಗಳಿಗೆ ಒಂದಿಷ್ಟು ನೆಮ್ಮದಿ ದೊರೆಯಲೂಬಹುದು. ಈ ರೋಗ ಭಾರತಕ್ಕೆ ಅಪರೂಪವಾದದ್ದೇನೂ ಅಲ್ಲ. ಕೆಲವೇ ವರ್ಷಗಳ ಹಿಂದೆ ಇಂಥಾ ಇಬ್ಬರು ಮತ್ಸ್ಯಮಾನವರು ಕೇರಳದ ಸಮುದ್ರತೀರದ ಮೇಲೆ ಕಂಡುಬಂದದ್ದು ವೃತ್ತಪತ್ರಿಕೆಗಳಲ್ಲಿ ದೊಡ್ಡದಾಗಿ ಪ್ರಕಟವಾದದ್ದು ಓದುಗರ ನೆನಪಿನಲ್ಲಿರಲೂ ಸಾಕು.



# ಬ್ರಹ್ಮಚಾರಿಗಳ ದ್ವೀಪ!

ಶ್ರೀಮನ್

## ಸ್ತ್ರೀಯರು ಬಾರದಂತೆ ಇಲ್ಲಿ ಸದಾ ಪಹರೆಯಿದೆ

ಒಂದು ಕಡೆ ನೀಲಿ ಸಮುದ್ರ; ಇನ್ನೊಂದು ಕಡೆ, ದೂರ ದಡದ ಮೇಲೆ, ದ್ವೀಪದೆಡೆಗೆ ಸಾಗಿಬರುತ್ತಿರುವ ನಾವೆಯನ್ನು ನಿರೀಕ್ಷಿಸುತ್ತಾ ನಿಂತಿರುವ ಕ್ರಿಶ್ಚಿಯನ್ ಸಾಧು. ಇಡೀ ಮೈಯನ್ನೆಲ್ಲಾ ಆವರಿಸಿರುವ ಕಪ್ಪನ್ನ ನಿಲುವಂಗಿ; ಮುಖದ ಮೇಲೆ ಉದ್ದನೆಯ ದಾಡಿ. ಯಾತ್ರಿಕರನ್ನು ಹಾರ್ದಿಕವಾಗಿ ಸ್ವಾಗತಿಸುವ ಮುಗುಳ್ನಗೆ. ಜೊತೆಗೆ ಈ ಯಾತ್ರಿಕರಲ್ಲಿ ಯಾರಾದರೂ ಹೆಂಗಸರು ಇದ್ದಾರೆಯೆ? ಎಂಬ ಆತಂಕ ಛಾಯೆ. ಸಂನ್ಯಾಸಿಯ ಹಿಂದೆ ಪರ್ವತಗಳಿಂದಾವೃತವಾದ ನಯನಮನೋಹರ ಪ್ರಾಕೃತಿಕ ನೋಟ.

ಗ್ರೀಸ್ ದೇಶದ ಮೌಂಟ್ ಅಥೋಸ್‌ಗೆ ಬರುವವರೆಲ್ಲರಿಗೆ ಎದುರಾಗುವ ದೃಶ್ಯವಿದು. ಜಗತ್ತಿನ ಜಂಜಡಗಳಿಂದ ಈ ದ್ವೀಪ ದೂರ. ಹೇಗೂ ಗ್ರೀಸ್‌ವರೆಗೆ ಬಂದಿದ್ದೇನೆ, ಈ ಬ್ರಹ್ಮಚಾರಿಗಳ ದ್ವೀಪವನ್ನಿಷ್ಟು ನೋಡಿಯೇ ಬಿಡುವಾ ಎಂಬ ವಿಚಾರ ಬಂತು. ಅದಕ್ಕಾಗಿಯೆ ನಾವೆಯೇರಿ ಈ ದ್ವೀಪಕ್ಕೆ ಹೋದೆ.

ಒಂದು ರೀತಿಯಲ್ಲಿ ಗ್ರೀಕ್ ಜನರೂ ನಮ್ಮ ಹಾಗೆಯೆ. ಪಟ್ಟಾಂಗ ಹೊಡೆಯುವುದರಲ್ಲಿ ಪ್ರವೀಣರು. ಕತೆ ಹೇಳುವುದರಲ್ಲೂ ಎತ್ತಿದ ಕೈ. ಒಂದು ಅವಕಾಶ ಸಿಕ್ಕಿತೋ ಅವಕಾಶಕ್ಕೆ ಅನುಕೂಲವಾಗುವ ಹಾಗೆ ಕಥೆಯನ್ನು ಸೃಷ್ಟಿಸಿಯೇ ಬಿಡುತ್ತಾರೆ. ಗ್ರೀಸ್ ದೇಶದಲ್ಲಿಂದು ಗತಕಾಲದ ಅವಶೇಷಗಳು ಸಾಕಷ್ಟಿವೆ. ಆದರೆ ಪುರಾತನಕಾಲದಲ್ಲಿ ಅನುಸರಿಸಲಾಗುತ್ತಿದ್ದ ಧರ್ಮದ ಲವಲೇಶವೂ ಇಲ್ಲ. "ನಮ್ಮ ದೇವತೆಗಳೆಲ್ಲಾ ಒಲಿಂಪಿಕ್ ಪರ್ವತಕ್ಕೆ ಮಲಗಲು ಹೋದರು. ಹೀಗಾಗಿ ಅಲೆಕ್ಸಾಂಡರನ ಕಾಲದಲ್ಲಿ ಪ್ರಚಲಿತವಾಗಿದ್ದ ಧರ್ಮವೂ ಸಮಾಪ್ತವಾಗಿ ಹೋಯಿತು," ನನ್ನ ಜೊತೆಗಿದ್ದ ಗೈಡ್ ಕಾರಣ ಹೇಳಿದ.

ಈ ದ್ವೀಪ ಸನ್ಯಾಸಿಗಳ ದ್ವೀಪ ಹೇಗಾಯಿತು? ಅದಕ್ಕೂ ಆತ ಅಲ್ಲಿ ಪ್ರಚಲಿತವಿರುವ ಒಂದು ಕಥೆ ಹೇಳಿದ. ಏಸು ಕ್ರಿಸ್ತನ ತಾಯಿ ವರ್ಜಿನ್ ಮೇರಿ ಹಡಗನ್ನೇರಿ ಸೈಪ್ರಸ್ಸಿನತ್ತ ಹೊರಟಾಗ ಒಮ್ಮಿಂದೊಮ್ಮೆಲೇ ಬಿರುಗಾಳಿ ಬೀಸಲು ಪ್ರಾರಂಭಿಸಿತಂತೆ. ಹಡಗದ ಕಪ್ತಾನ್ ಮಾರ್ಗವನ್ನು ಬದಲಿಸಿ, ಹೇಗುಹೇಗೋ ಹಡಗವನ್ನು ನಡೆಸಿ ಮೌಂಟ್ ಅಥೋಸ್‌ಗೆ ತಂದಿಳಿಸಿದ. ಪ್ರಕೃತಿ ರಮ್ಯವಾದ ಈ ಸ್ಥಳ ಆ ತಾಯಿಗೆ ಬಹುವಾಗಿ ಮನಸ್ಸಿಗೆ ಬಂದು, ಪ್ರವಾಸ ಮುಗಿಸಿದ ನಂತರ, ಆ ದ್ವೀಪವನ್ನು ತನಗೇ ಕೊಡಿಸುವಂತೆ ಏಸುಸ್ವಾಮಿಯನ್ನು ಕೇಳಿಕೊಂಡಳು. "ಎಲ್ಲ ಬಿಟ್ಟು ಈ ದ್ವೀಪವನ್ನೇಕೆ ಕೇಳುತ್ತೀ? ಅದರಿಂದ ನಿನಗೆ ಉಪಯೋಗವಾದರೂ ಏನು? ಅದರ ಬದಲು ಮತ್ತೆ ಏನನ್ನಾದರೂ ಕೇಳು," ಅಂದನಂತೆ ಏಸುಕ್ರಿಸ್ತ. ಆದರೆ ವರ್ಜಿನ್ ಮೇರಿಗೆ ಈ ದ್ವೀಪವೇ ಬೇಕಾಗಿತ್ತು. "ಇದರಷ್ಟು ಶಾಂತವಾದ ಜಾಗ ಬೇರೆಲ್ಲಿಯೂ

ಸಿಗುವುದಿಲ್ಲ. ಇದ್ದರೆ ಈ ದ್ವೀಪದಲ್ಲಿಯೇ ಇರುವುದು. ಆದ್ದರಿಂದ ಈ ದ್ವೀಪವನ್ನೇ ಕೊಡು," ಎಂಬ ಹಟ. ಅಷ್ಟರಲ್ಲಿ, "ಈ ಸ್ಥಳವೆಲ್ಲಾ ಇನ್ನು ಮೇಲೆ ನಿನ್ನದೆ. ಜಗತ್ತಿನ ಜಂಜಡದಿಂದ ಪಾರಾಗಬಯಸುವವರಿಗೆ, ಮುಕ್ತಿಯ ಇಚ್ಛುಕರಿಗೆ ಇನ್ನು ಮೇಲೆ ಈ ಸ್ಥಳ ಭೂತಲ ಸ್ವರ್ಗವೇ ಆಗುವುದು," ಎಂದು ಅಶರೀರವಾಣಿಯಾಯಿತಂತೆ.

ಕಥೆಯೆಂದರೆ ಕಥೆಯೆ. ಹೀಗಾಗಿ ಆತ ಹೇಳಿದ್ದರಲ್ಲಿ ಸಟೆಯೆಷ್ಟು, ದಿಟವೆಷ್ಟು ಎಂಬ ಬಗೆಗೆ ಯಾರೂ ತಲೆಕೆಡಿಸಿಕೊಳ್ಳಬೇಕಿಲ್ಲ. ಆದರೆ ಒಂದು ಮಾತು ಮಾತ್ರ ನಿಜ. ಮಾತೆ ಮೇರಿಯ ಈ ಪವಿತ್ರ ದ್ವೀಪದಲ್ಲಿ ಹೆಂಗಸರ ಮಾತಂತೂ ದೂರ ಉಳಿಯಿತು, ಹೆಣ್ಣು ಪಶುಗಳಿಗೆ ಕೂಡ ಸ್ಥಾನವಿಲ್ಲ. ಹೀಗಾಗಿ ಒಂದು ಗ್ಲಾಸ್ ಹಸುವಿನ ಹಾಲು ಬೇಕೆಂದರೂ ಸಮುದ್ರದಲ್ಲಿ ನಾವೆ ನಡೆಸಿಕೊಂಡು ಗ್ರೀಸ್ ದೇಶಕ್ಕೆ ಹೋಗಿ ತರಬೇಕು. ನಿಜ ಹೇಳಬೇಕೆಂದರೆ ಹೆಣ್ಣು ನಾಯಿ ಕೂಡ ಈ ದ್ವೀಪದಲ್ಲಿ ನಿಮಗೆ ಕಾಣಸಿಗಲಿಕ್ಕಿಲ್ಲ. ದೂರದಿಂದ ಬರುವ ನಾವೆಗಳನ್ನು ದುರ್ಬೀನಿನಿಂದ ನಿರೀಕ್ಷಿಸುತ್ತಾ ಇಲ್ಲಿನ ಸನ್ಯಾಸಿಗಳು ಸಮುದ್ರ ತಟದ ಮೇಲೆ ಸದಾ ಕಾವಲು ತಿರುಗುತ್ತಿರುತ್ತಾರೆ. ಆಕಸ್ಮಾತ್ತಾಗಿ ಯಾರಾದರೂ ಹೆಂಗಸರು ಇರುವ ನಾವೆ ಕಣ್ಣಿಗೆ ಬಿದ್ದಿತೋ, ಬಂದದಾರಿಯಲ್ಲೇ ಹಿಂದಿರುಗಿ ಹೋಗುವಂತೆ ಸಂಜ್ಞೆಯ ಮೂಲಕ ಸೂಚಿಸತೊಡಗುತ್ತಾರೆ. ಅವರ ಮಾತನ್ನು ಮೀರಿ ನಾವೆ ಮುಂದುವರೆಯಿತೋ ಸನ್ಯಾಸಿಗಳಿಂದ ಅವುಗಳ ಮೇಲೆ ಕಲ್ಲುಗಳ ಸುರಿಮಳೆಯಾಯಿತೆಂದೇ ಲೆಕ್ಕ. ಉಳಿದ ಪಾಶ್ಚಾತ್ಯದೇಶಗಳಲ್ಲಿರುವಷ್ಟೇ ಸ್ತ್ರೀ ಸ್ವಾತಂತ್ರ್ಯ ಗ್ರೀಸ್ ದೇಶದಲ್ಲೂ ಇದೆ. ಆದರೆ ಮೌಂಟ್ ಅಥೋಸಿನ ಮಾತು ಬಂದ ಕೂಡಲೇ ಅಲ್ಲಿಯ ಸರಕಾರವಾಗಲಿ ಜನರಾಗಲಿ ತೆಪ್ಪಗಾಗಿಬಿಡುತ್ತಾರೆ. ಆ ದ್ವೀಪದಲ್ಲಿ ಪುರುಷ ಪ್ರಾಧಾನ್ಯವನ್ನು ಕಾಯ್ದುಕೊಳ್ಳುವುದು-ಧರ್ಮದ ಮಟ್ಟಿಗಾದರೂ ಸರಿ-ಶ್ರೇಯಸ್ಕರ ಎಂದು ಅವರೆಲ್ಲ ಭಾವಿಸಿದಂತಿದೆ.

ಹಾಂ! ಹೆಂಗಸರಿಗೆ ಸಂಬಂಧಿಸಿದ ಹಾಗೆ ಒಂದು ಅಪವಾದವೂ ಇಲ್ಲಿದೆ. ಬೆಕ್ಕಿಗೆ ಮಾತ್ರ ಲಿಂಗದ ನಿರ್ಬಂಧವಿಲ್ಲ. ಹೀಗಾಗಿ ಈ ಪುಟ್ಟ ದ್ವೀಪದಲ್ಲಿ ನೀವು ನೂರಾರು ಬೆಕ್ಕುಗಳನ್ನು ಕಾಣಬಹುದು. ಇಲ್ಲಿ ಬೆಕ್ಕುಗಳ ಸಂಖ್ಯೆ ಸನ್ಯಾಸಿಗಳ ಸಂಖ್ಯೆಗಿಂತ ಎಷ್ಟೋಪಟ್ಟು ಹೆಚ್ಚಾಗಿದ್ದರೆ ಆಶ್ಚರ್ಯವಿಲ್ಲ.

ಇಲ್ಲಿ ಇಪ್ಪತ್ತು ಕ್ರೈಸ್ತ ಮಠಗಳಿವೆ. ದ್ವೀಪಕ್ಕೆ ತನ್ನದೇ ಆದ ಆಡಳಿತವ್ಯವಸ್ಥೆಯೂ ಇದೆ. ದ್ವೀಪದ ವ್ಯವಹಾರವನ್ನು ನೋಡಿಕೊಳ್ಳಲು ರಾಜ್ಯಪಾಲರೊಬ್ಬರಿದ್ದಾರೆ. ಆಡಳಿತದಲ್ಲಿ ಅವರಿಗೆ ಸಹಾಯಮಾಡಲು ಮಠದಿಂದ ಒಬ್ಬೊಬ್ಬರಂತೆ ಚುನಾಯಿಸಿ ರಚಿಸಲ್ಪಟ್ಟ ಧರ್ಮಸಭೆಯಿದೆ. ವಿದೇಶ ವ್ಯವಹಾರ ಮಾತ್ರ ಗ್ರೀಸ್ ದೇಶದ ವಶದಲ್ಲಿ. ಉಳಿದದ್ದೆಲ್ಲವೂ ರಾಜ್ಯಪಾಲರ ಕೈಯಲ್ಲಿ. ಗ್ರೀಸ್ ದೇಶಕ್ಕೆ ಅಧೀನವಾಗಿದ್ದರೂ ಅಲ್ಲಿ ಒಂದು ರೀತಿಯಲ್ಲಿ ಸ್ವಯಮಾಡಳಿತ ವ್ಯವಸ್ಥೆ.

ಜಗತ್ತಿನ ಉಳಿದೆಡೆಗಳಲ್ಲಿ ಮಧ್ಯರಾತ್ರಿಯ ನಂತರ ಹೊಸ ದಿವಸ ಪ್ರಾರಂಭವಾದರೆ ಇಲ್ಲಿ ಸೂರ್ಯಾಸ್ತದ ನಂತರ ಹೊಸ ದಿನದ ಆರಂಭ. ಆದರೆ ಇವ್‌ರಾನ್ ಮಠ ಮಾತ್ರ ಇದಕ್ಕೆ ಅಪವಾದ. ಭಾರದಲ್ಲಿರುವ ಹಾಗೆಯೇ ಸೂರ್ಯೋದಯದಿಂದ ದಿನವನ್ನು ಗಣಿಸುವ ಪರಿಪಾಠ ಬಹು ಪ್ರಾಚೀನಕಾಲದಿಂದಲೂ ಜಾರಿಯಲ್ಲಿದೆ. ಹೀಗಾಗಿ ಇಲ್ಲಿ ಇವ್‌ರಾನ್ ಮಠದ್ದೇ ಒಂದು ಪಂಚಾಂಗ, ಉಳಿದ ಹತ್ತೊಂಭತ್ತು ಮಠಗಳಿಗೂ ಮತ್ತೊಂದು ಪಂಚಾಂಗ.

ಮೌಂಟ್ ಅಥೋಸಿನ ಸನ್ಯಾಸಿಗಳು ಹೊರ ಜಗತ್ತಿನೊಡನೆ ಯಾವ ಸಂಪರ್ಕವನ್ನೂ ಇಟ್ಟುಕೊಳ್ಳುವುದಿಲ್ಲವಾದ್ದರಿಂದ ಇಲ್ಲಿಗೆ ಟಪ್ಪಾಲನ್ನು ತರುವ, ಇಲ್ಲಿಂದ ಟಪ್ಪಾಲನ್ನು ತೆಗೆದುಕೊಂಡು ಗ್ರೀಸ್ ದೇಶಕ್ಕೆ ಸಾಗಿಸುವ ಕೆಲಸವೆಲ್ಲ ಒಬ್ಬನ ಕೈಯಲ್ಲಿ. ಅವನೊಬ್ಬ



ಸಾಗರ ತಟದಲ್ಲಿರುವ ಮೌಂಟ್ ಎಥಾಸ್‌ನ ಪ್ರವೇಶ ದ್ವಾರ

ಮಾತ್ರ ಇವರಿಗೆ ಸಂಪರ್ಕ ಮಾಧ್ಯಮ. 'ಅತಿಥಿ ದೇವೋಭವ' ಎಂಬ ಮಾತನ್ನು ಇಲ್ಲಿನ ಸನ್ಯಾಸಿಗಳು ಚಾಚೂತಪ್ಪದೇ ಪಾಲಿಸುವುದರಿಂದ ಯಾರೇ ಇಲ್ಲಿಗೆ ಬರಲಿ, ಮಠಗಳಲ್ಲಿ ಅವರಿಗೆ ಅದ್ದೂರಿಯ ಸ್ವಾಗತ. ಆದರದ ಆತಿಥ್ಯ. ಈ ಕ್ರೈಸ್ತಮಠಗಳೆಲ್ಲ ಸಂಪದ್ಭರಿತ. ಹಳೆಗಾಲದ ಚಿತ್ರ, ದಸ್ತಾವೇಜುಗಳ ಸಂಗ್ರಹವೂ ಸಾಕಷ್ಟಿದೆ. ಅಡುಗೆ, ಹೊಲಗೆಲಸ, ಪೂಜೆ- ಪುನಸ್ಕಾರ, ಮುಂತಾದ ಎಲ್ಲ ಕೆಲಸಗಳನ್ನೂ ಸನ್ಯಾಸಿಗಳು ಹಂಚಿಕೊಂಡು ಮಾಡುತ್ತಾರೆ. ಮಠದ ಪ್ರಾಚೀನ ಕಾಗದ ಪತ್ರಗಳನ್ನು ಕಾಯ್ದಿಡಲೂ ಒಂದು ಭಾಗವಿದೆ. ತನ್ನ ಮಾತೂ ಇಲ್ಲಿ ನಡೆಯುತ್ತದೆ ಎನ್ನುವುದನ್ನು ತೋರಿಸಿಕೊಡಲೋ ಏನೊ ಗ್ರೀಸ್ ಸರಕಾರ 'ಶಾಂತಿ ಸುವ್ಯವಸ್ಥೆಯನ್ನು ಕಾಯ್ದುಕೊಳ್ಳಲು' ಅಷ್ಟಿಷ್ಟು ಆರಕ್ಷಕರನ್ನು ನಿಯಮಿಸಿದೆ. ಅಪರಾಧವಾಗಲಿ ಗಲಭೆಯಾಗಲಿ ಇಲ್ಲಿ ಸಂಭವಿಸುವುದೇ ಇಲ್ಲವಾದ್ದರಿಂದ ಸುಮ್ಮನೆ ತಿರುಗಾಡುವುದೊಂದೇ ಅವರಿಗಿರುವ ಕೆಲಸ.

ಏಸು, ಮೇರಿ ಅಥವಾ ಇನ್ನಿತರ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ತೈಲಚಿತ್ರಗಳನ್ನು ಮೌಂಟ್ ಅಥೋಸಿನ ಸನ್ಯಾಸಿಗಳು ಬಿಡಿಸುತ್ತಾರೆ. ಬಿಡುವು ದೊರೆತಾಗ ಕಟ್ಟಿಗೆಯಲ್ಲಿ ಕೆತ್ತನೆಯ ಕೆಲಸವನ್ನೂ ಮಾಡುತ್ತಾರೆ. ಗ್ರೀಸ್ ದೇಶವಂತೂ ಸರಿಯೆ, ಸೈಪ್ರಸ್ ರಶಿಯದಂತಹ ಅನೇಕ ದೇಶಗಳೂ ನೂರಾರು ವರ್ಷಗಳಿಂದ ಹಣವನ್ನು ನಿಯತವಾಗಿ ಕಳಿಸುತ್ತಿರುವುದರಿಂದ ಇಲ್ಲಿನ ಕ್ರೈಸ್ತ ಮಠಗಳಿಗೆ ಅಭಾವವನ್ನು ಅನುಭವಿಸುವ ಪ್ರಸಂಗ ಬಂದೇ ಇಲ್ಲ. ಪ್ರತಿಯೊಂದು ಮಠಕ್ಕೂ ಒಂದೊಂದು ಗ್ರಂಥಾಲಯ. ಪ್ರತಿಯೊಂದು ಗ್ರಂಥಾಲಯದಲ್ಲೂ ಕ್ರೈಸ್ತ ಧರ್ಮಕ್ಕೆ



ವರ್ಜಿನ್ ಮೇರಿಯ ಮಠ

ಸಂಬಂಧಿಸಿದ ದುರ್ಲಭ ಗ್ರಂಥಗಳು. ಗ್ರೇಟ್ ಲಾವರಾ ಮಠದಲ್ಲಿ ಚರ್ಮದ ಮೇಲೆ ಬರೆದ ಐನೂರು ಗ್ರಂಥಗಳನ್ನೊಳಗೊಂಡು ಎರಡು ಸಾವಿರಕ್ಕೂ ಮಿಕ್ಕಿ ಹಸ್ತ ಪ್ರತಿಗಳಿವೆ.

ಪರ್ವತಗಳ ಮಧ್ಯದಲ್ಲಿ ಕಟ್ಟಲ್ಪಟ್ಟ ಜೋಗ ರಾಫೂ ಮಠದ್ದೇ ಒಂದು ಕತೆ. ನೂರಾರು ವರ್ಷಗಳ ಹಿಂದೆ ಬಲ್ಗೇರಿಯದಿಂದ ಮೂವರು ಸನ್ಯಾಸಿಗಳು ಇಲ್ಲಿಗೆ ಬಂದು ಈ ಮಠವನ್ನು ಕಟ್ಟಿದರಂತೆ. ಕಟ್ಟಡ ನಂತರ ಮಠವನ್ನು ಮಾತೆ ಮೇರಿಗೆ ಅರ್ಪಿಸುವುದೋ ಸಂತ ಜಾರ್ಜನಿಗೆ ಅರ್ಪಿಸುವುದೋ ಅಥವಾ ಸಂತ ನಿಕೋಲಸನಿಗೆ ಅರ್ಪಿಸುವುದೋ ಎಂಬ ಬಗ್ಗೆ ಭಿನ್ನಾಭಿಪ್ರಾಯ ಬಂದಾಗ, ಆ ವಿಷಯವನ್ನು ನಿರ್ಧರಿಸಲು ದೇವರಿಗೇ ಬಿಡಲು ನಿರ್ಧರಿಸಿ ತಪಸ್ಸನ್ನಾಚರಿಸಿದರಂತೆ. ಕಣ್ಣು ತೆರೆದಾಗ ಅವರೆಲ್ಲರೆದುರು ಸಂತ ಜಾರ್ಜನ ಚಿತ್ರ ಮೂಡಿಬಂದಂತಾಗಿ ಮಠವನ್ನು ಅವನಿಗೇ ಅರ್ಪಿಸಲು ನಿರ್ಧರಿಸಿದರಂತೆ. ಇಂದಿಗೂ ಜೋಗರಾಫೂ ಮಠದ ಆಡಳಿತವೆಲ್ಲ ಬಲ್ಗೇರಿಯದ ಸನ್ಯಾಸಿಗಳು ಕೈಯಲ್ಲಿ.

ಮೌಂಟ್ ಅಥೋಸಿನ ಸಂತರೆಲ್ಲ ಸನಾತನವಾದಿ (ಅರ್ಥೋಡಕ್ಸ್) ಪಂಥಕ್ಕೆ ಸೇರಿದವರು. ಆದರೆ ಗ್ರೀಸಿನ ರಾಜ ಮಾತ್ರ ಏಕತಾವಾದಿ (ಯುನಿಯನಿಸ್ಟ್) ಪಂಥಕ್ಕೆ ಸೇರಿದವ. ಒಮ್ಮೆ ಆತ ಧರ್ಮಪ್ರಸಾರಕ್ಕಾಗಿ ತನ್ನ ಪಂಥಕ್ಕೆ ಸೇರಿದ ಪ್ರಚಾರಕರನ್ನು ಈ ದ್ವೀಪಕ್ಕೆ ಕಳಿಸಿದನಂತೆ. ಜಾಗರಾಫೂ ಮಂಠದ ಸನ್ಯಾಸಿಗಳು ಯೂನಿಯನಿಸ್ಟ್ ಪಂಥಕ್ಕೆ ಸೇರಲು ಒಪ್ಪದಿದ್ದಾಗ ಧರ್ಮಪ್ರಚಾರಕರು ಅಲ್ಲಿನ ೩೬ ಸನ್ಯಾಸಿಗಳನ್ನೂ ಸಜೀವವಾಗಿ ದಹಿಸಿದರಂತೆ. ಅವರ ಸ್ಮರಣೆಗಾಗಿ ಮಠದ ಆವಾರದಲ್ಲೇ

ಒಂದು ಸ್ಮಾರಕವನ್ನು ನಿಲ್ಲಿಸಲಾಗಿದೆ.

ವೇಗದಿಂದ ಸಾಗುತ್ತಿರುವ ಜಗತ್ತಿನಿಂದ ಮೌಂಟ್ ಅಥೋಸ್ ಬಲು ದೂರ. ಜಗತ್ತಿನ ಆಗುಹೋಗುಗಳಿಗೆ ಸ್ಪಂದಿಸುವುದೂ ಅಲ್ಲಿನ ಸನ್ಯಾಸಿಗಳಿಗೆ ಬೇಕಿಲ್ಲ. ಅವರದು ಅಧ್ಯಾತ್ಮ ಲೋಕ. ಮುಕ್ತಿಯೇ ಪರಮಗುರಿ. ಅದನ್ನೊಂದನ್ನು ಹೊರತುಪಡಿಸಿದರೆ ಉಳಿದ ವಿಷಯಗಳತ್ತ ಅವರ ಆಸಕ್ತಿ ಅಷ್ಟಕ್ಕಷ್ಟೆ. ಮೌಂಟ್ ಅಥೋಸ್ ಅನ್ನು ಪುರುಷದ್ವೀಪವಾಗಿಸಿದ ಬಗ್ಗೆ ಆಗಾಗ ಟೀಕೆಗಳು ಕೇಳಿಬರುವುದೂ ಇದೆ. ಆಗ ಇವರದು ಒಂದೇ ಉತ್ತರ: "ಇದು ಮೇರಿ ತಾಯಿಯ ದ್ವೀಪ. ಹೀಗಾಗಿ ಇಲ್ಲಿ ನಡೆಯುವ ನಿಯಮಗಳೆಲ್ಲ ಅವಳದೇ."

*****

## ಸಣ್ಣ ತಪ್ಪು!

**ನಗು:** ಯಾವುದೇ ಉಪ ಪರಿಣಾಮಗಳಿಲ್ಲದ ಶಾಮಕ.

• ಆರ್ನೊಲ್ಡ್ ಗ್ಲಾಸ್ಗೋ

ಈಜುವುದರಿಂದ ಅಂಗಸೌಷ್ಠವವನ್ನು ಉಳಿಸಿಕೊಳ್ಳಬಹುದು ಎಂಬ ಮಾತನ್ನು ಹೇಗೆ ನಂಬುವುದು-ಸಮುದ್ರದಲ್ಲಿ ಅಷ್ಟೆಲ್ಲಾ ತಿಮಿಂಗಲಗಳು ತೇಲುತ್ತಿರುವಾಗ!

ಸ್ಮರಣಶಕ್ತಿಯೂ ಜಾಣ್ಮೆಯೂ ಒಂದೇ ಅಲ್ಲ ನಿಜ. ಆದರೆ ಸ್ಮರಣಶಕ್ತಿಯ ಬೆಂಬಲವಿಲ್ಲದಿದ್ದರೆ ಜಾಣ್ಮೆಯ ಗತಿಯೇನಾಗುತ್ತಿತ್ತು?

• ಮಾರ್ಟಿನ್ ಟಪ್ಪರ್

"ನೀವು ವೃತ್ತಿಪರ ಚೋರರೇನು?"-ಊಹುಂ. ಸಿಟ್ಟಾಗೇಳಬೇಡಿ. ಇದು ಒಬ್ಬ ಸಲಹೆಗಾರ ಕೇಳುವ ಪ್ರಶ್ನೆ. ನಿಮಗಲ್ಲ, ಆ ಧಂದೆಯಲ್ಲಿ ತೊಡಗಿರುವವರಿಗೆ. ಆತ ಹೇಳುತ್ತಾನೆ, "ಹೂಂ, ಹಾಗಿದ್ದರೆ ಸ್ವಲ್ಪ ಸಾವಧಾನದಿಂದಿರಿ. ಸಣ್ಣದೊಂದು ತಪ್ಪು ನಿಮ್ಮನ್ನು ಸರಳುಗಳಾಚೆಯ ಗಾಳಿಗಾಗಿ ತಹತಹಿಸುವಂತೆ ಮಾಡುತ್ತದೆ".

ಜಾನ್ ವಿಲಿಯಮ್ಸ್ ಎಂಬೊಬ್ಬ ಐರ್ಲ್ಯಾಂಡ್ ನಿವಾಸಿ ಲಂಡನ್ನಿನಲ್ಲಿ ಕದ್ದ ಒಂದು 'ಕ್ರೆಡಿಟ್ ಕಾರ್ಡ್' ಮೇಲೆ ಏನೇನೋ ಖರೀದಿಸಲೆತ್ನಿಸಿದ. ಸುಂದರ ಕೋಟೊಂದನ್ನು ಖರೀದಿಸುವ ಆಸೆ. ಆದರೆ ವೋಚರಿನಲ್ಲಿ ಆತ ಸಹಿ ಮಾಡಿದ್ದು ತಪ್ಪು ಜಾಗದಲ್ಲಿ. ಸೇಲ್ಸ್‌ಮನ್ ಒಬ್ಬ ಅಲ್ಲಿದ್ದ 'ಜ' ಅಕ್ಷರವಿರುವುದು ಯಾವ ಶಬ್ದಕ್ಕಾಗಿ ಎಂದು ವಿಚಾರಿಸಿದರೆ 'ಜಾನ್'ಗಾಗಿ ಎಂದು ಉತ್ತರ ಬಂತು.

ಸರಿ, ಶುರುವಾಯಿತು ಸಂಶಯ. ತನ್ಮೂಲಕ ವಿಚಾರಣೆ ಇತ್ಯಾದಿ ಸರಮಾಲೆ. ಆತನೊಬ್ಬ ಕಳ್ಳ ಎಂಬುದು ಗೊತ್ತಾಗಿ ಆರು ತಿಂಗಳಿನ ಶಿಕ್ಷೆ ವಿಧಿಸಲ್ಪಟ್ಟಿತು.

**ವಯಸ್ಕರ ಶಿಕ್ಷಣ:** ಮಕ್ಕಳಿಗೆ ಹೋಮ್‌ವರ್ಕ್ ಇರುವವರೆಗೂ ಚಾಲ್ತಿಯಲ್ಲಿರುವಂಥಾದ್ದು.

ಹಳೆಯ ಕಾರುಗಳನ್ನು ಮಾರುತ್ತಿದ್ದ ಏಜಂಟ್ ಹೇಳಿದ್ದು: ನಿಜ ಹೇಳಬೇಕೆಂದರೆ ಈ ಕಾರನ್ನು ಹಳೆ ಮಾಲೀಕ ಬಹಳ ಸಲ ಉಪಯೋಗಿಸಿದ್ದೇ ಇಲ್ಲ. ಕಾರನ್ನು ಸ್ಟಾರ್ಟ್ ಮಾಡಲು ಸಾಧ್ಯವಾದಾಗ ಮಾತ್ರ ಆತ ಇದನ್ನು ಓಡಿಸುತ್ತಿದ್ದ.

# ಮಾಸ್ತಿ ಪ್ರಸಂಗ

**ಕ**ನ್ನಡ ಸಾಹಿತ್ಯದಲ್ಲಿ ಸಣ್ಣಕತೆಗೆ ಭದ್ರಸ್ಥಾನವನ್ನು ದೊರಕಿಸಿಕೊಟ್ಟ ಮಾಸ್ತಿ ಅವರ ಸಣ್ಣಕತೆಗಳನ್ನು ಆಂಗ್ಲಭಾಷೆಗೆ ಭಾಷಾಂತರಿಸಿ ಪ್ರಕಟಿಸಲು ವಿಶ್ವವಿಖ್ಯಾತ ಮ್ಯಾಕ್ಮಿಲನ್ ಕಂಪನಿಯ ಮ್ಯಾನೇಜರರೊಬ್ಬರು ಬೆಂಗಳೂರಿಗೆ ಬಂದು (೧೯೨೫) ಮಾಸ್ತಿಯವರನ್ನು ಭೇಟಿಯಾಗಿ ಅನುಮತಿಯನ್ನು ಕೋರಿದರು. ಆ ಕುರಿತು ಮಾಸ್ತಿಯವರು ಹೀಗೆ ಬರೆದಿದ್ದಾರೆ:

"ನನಗೆ ನನ್ನ ಕನ್ನಡದ ಕತೆಗಳು ಇಂಗ್ಲಿಷ್ ಭಾಷೆಗೆ ಭಾಷಾಂತರಗೊಳ್ಳುವುದು ಇಷ್ಟವೆ. ಆದರೆ ಅದನ್ನು ಆಂಗ್ಲ ಕಂಪನಿಯೊಂದು ಮಾಡುವುದು ಇಷ್ಟವಿಲ್ಲ. ಮೊದಲಾಗಿ ಈ ಜನ ನಮ್ಮ ಜನರನ್ನು ಕಡಿಮೆ ಜನ ಎಂದು ಎಣಿಸುತ್ತಿದ್ದಾರೆ. ಇದು ಎಲ್ಲಾ ರಂಗಗಳಲ್ಲೂ ಎದ್ದು ಕಾಣಿಸುತ್ತಿರುವ ಅಂಶ. ಅಂದಮೇಲೆ ಇಂಥ ಕೆಲಸದಲ್ಲೂ ಕಾಣುವುದು ನಿಜ. ಆದ್ದರಿಂದ ನಾವು ಇದಕ್ಕೆ ಎಡೆ ಕೊಡಬಾರದು ಎನ್ನುವುದು. ಎರಡನೇಯದಾಗಿ, ನನ್ನ ಪುಸ್ತಕಗಳನ್ನು ಭಾಷಾಂತರಿಸಿ, ಪ್ರಕಟಿಸಿ, ಮಾರುವ ಈ ಜನ ಅದರಿಂದ ಬರುವ ಹತ್ತು ಕಾಸಿನಲ್ಲಿ ಒಂಭತ್ತು ಕಾಸನ್ನು ತಾವೇ ತೆಗೆದುಕೊಂಡು, ಇಂಗ್ಲೆಂಡ್ ದೇಶ ನಮ್ಮ ಬಡದೇಶವನ್ನು ದೋಚುತ್ತಾ ಬಂದಿದೆ ಎಂದು ನನಗೆ ಅಸಮಾಧಾನ. ಇಂತಹ ದೋಚುವ ಉದ್ಯಮದಲ್ಲಿ ನಾನೂ ಇವರಿಗೆ ನೆರವಾಗಬೇಕೆ? ಮೂರನೆಯದಾಗಿ, ನಾವು ರಾಜಕೀಯವಾಗಿ ಈ ಜನಕ್ಕೆ ಅಧೀನರಾಗಿದ್ದೇವೆ, ವಿಧಿ ಇಲ್ಲ. ಆದರೆ ಅನವಶ್ಯಕವಾಗಿ ಸಾಹಿತ್ಯ ಕ್ಷೇತ್ರದಲ್ಲಿ ನಾವೇಕೆ ಈ ಜನರಿಗೆ ಅಧೀನರಾಗಬೇಕು? ಇವರ ಒಪ್ಪಿಗೆ, ಮೆಚ್ಚಿಗೆ, ಉತ್ತೇಜನಗಳಿಲ್ಲದೆ ನಾವು ಬದುಕಲಾರರೆ? ಈ ಎಲ್ಲ ಯೋಚನೆಗಳಿಂದ ಆ ಮಹಾನುಭಾವರಿಗೆ ಹೀಗೆಂದೆ: 'ನಿಮ್ಮ ಯೋಚನೆ ಒಳ್ಳೆಯದು. ಆದರೆ ನಾನು ಇದರಲ್ಲಿ ನಿಮ್ಮೊಂದಿಗೆ ಸಹಕರಿಸಲಾರೆ; ಕ್ಷಮಿಸಬೇಕು'. ಅದಕ್ಕೆ ಮ್ಯಾನೇಜರ್, 'ಏನು ಕಾರಣ ತಿಳಿಯಬಹುದೆ ಸ್ವಾಮಿ?' ಎಂದರು. 'ನನ್ನ ಮೇಲೆ ನೀವು ಬೇಸರಮಾಡಿಕೊಳ್ಳಬಾರದು. ಮಾಡಿಕೊಳ್ಳುವುದಿಲ್ಲ ಎಂದು ಧೈರ್ಯ ಹೇಳಿದರೆ ಕಾರಣ ಹೇಳುತ್ತೇನೆ' ಎಂದೆ. 'ಬೇಸರ ಮಾಡಿಕೊಳ್ಳುವುದಿಲ್ಲ; ದಯವಿಟ್ಟು ಹೇಳೋಣವಾಗಲಿ' ಎಂದರು. 'ಹಾಗಾದರೆ ಕಾರಣ ಇದು, ನೀವು ಮಾಡುವ ಕೆಲಸದಿಂದ ಬರುವ ಲಾಭದ ಬಹುಪಾಲು ನಿಮ್ಮ ಜನರದಾಗುತ್ತದೆ. ಇಂಥ ಕೆಲಸವನ್ನು ಪ್ರೋತ್ಸಾಹಿಸುವುದು ನನಗೆ ಇಷ್ಟವಿಲ್ಲ, ಎಂದೆ. 'ನಾವು ದೇಶೀಯರಿಗೆ ನಮ್ಮ ಕಂಪನಿಗಳಲ್ಲಿ ಕೆಲಸ ಕೊಡುತ್ತಿದ್ದೇವೆ.' 'ಯಾವ ಕೆಲಸ? ಗುಮಾಸ್ತನ ಕೆಲಸ; ಬಹಳವೆಂದರೆ ಸಹಾಯಕನ ಕೆಲಸ. ಗುಮಾಸ್ತನ ಸಂಬಳ ಐವತ್ತು ರೂಪಾಯಿ. ಸಹಾಯಕ ಎಂದರೆ ಹೆಸರು ದೊಡ್ಡದು, ಸಂಬಳ ನೂರು ರೂಪಾಯಿ. ಅದೇ ವೇಳೆ ನಿಮ್ಮ ಆಂಗ್ಲ ಒಬ್ಬ ಸಹಾಯಕನಾಗಿದ್ದರೆ ಅವನ ಸಂಬಳ ಐನೂರು ರೂಪಾಯಿ. ನೀವು ಮ್ಯಾನೇಜರ್. ನಿಮ್ಮ ಸಂಬಳ ಸಾವಿರ. ಆಂಗ್ಲರಿಗೆ, ದೇಶೀಯರಿಗೆ ಕೊಡುವ ನಿಮ್ಮ ಸಂಬಳಗಳ ಈ ವ್ಯತ್ಯಾಸ ನಮಗೆ ರುಚಿಸುವುದಿಲ್ಲ' ಎಂದು ಸ್ಪಷ್ಟವಾಗಿ ಹೇಳಿದೆ. ಮ್ಯಾನೇಜರ್, 'ಸರಿ ಸ್ವಾಮಿ, ತಮ್ಮ ದೃಷ್ಟಿಯಿಂದ ಈ ನಿಲುವು ಸರಿಯಾದದ್ದೆ. ನಿಮ್ಮ ಕಥೆಗಳ ಭಾಷಾಂತರ ಪ್ರಕಟಿಸುವುದು ಸಾಧ್ಯವಾಗಿದ್ದರೆ ಕಂಪನಿಯ ಒಡೆಯರಿಗೆ ತುಂಬಾ ಸಂತೋಷವಾಗುತ್ತಿತ್ತು. ಅದು ಸಾಧ್ಯವಿಲ್ಲ ಎಂದು ನನಗೆ ವ್ಯಸನ. ತಮ್ಮ ಬಿಚ್ಚು ಮಾತಿನಿಂದ ನನಗೆ ತುಂಬಾ ಸಂತೋಷವಾಯಿತು. ಬೇಸರ ಇಲ್ಲ' ಎಂದು ಬೀಳ್ಕೊಂಡರು.

• ಎಸ್ಕೆ ಹಳೆಯಂಗಡಿ




# ವಿಚಿತ್ರವಾದ ಗಣಿತ ಸಮಸ್ಯೆಗಳು

*• ದೇವಿ ಪ್ರಶಾಂತ ಕಟೀಲ್*

ಸಾವಿರಾರು ವರ್ಷಗಳಷ್ಟು ಹಿಂದಿನ ಕತೆಯಿದು. ಅಕಿಲಿಸ್ ಎನ್ನುವವ ಗ್ರೀಕ್ ದೇಶದ ಅತಿವೇಗವಾಗಿ ಓಡುವ ಶೂರನಾಗಿದ್ದ. ತನ್ನ ಸಾಮರ್ಥ್ಯದ ಬಗ್ಗೆ ಅತಿಯಾದ ಅಭಿಮಾನವಿದ್ದ ಆತನನ್ನು ಬುದ್ಧಿವಂತ ಆಮೆಯೊಂದು ಓಟದ ಪಂದ್ಯಕ್ಕೆ ಆಹ್ವಾನಿಸಿತು. ಆಶ್ಚರ್ಯದೊಂದಿಗೆ ಅಕಿಲಿಸ್ ಅದಕ್ಕೊಪ್ಪಿದ. ಆಮೆಯು ಓಟಕ್ಕೆ ಮುಂಚೆ ತನಗೆ ಅಕಿಲಿಸನಿಗಿಂತ ಸ್ವಲ್ಪ ದೂರ ಮುಂದಕ್ಕೆ ನಿಲ್ಲುವ ರಿಯಾಯತಿಯನ್ನು ಕೊಡಬೇಕೆಂಬ ಶರ್ತನ್ನು ಒಡ್ಡಿತು. ಅದಕ್ಕೆ ಅಕಿಲಿಸನು ಸಂತೋಷದಿಂದಲೇ ಒಪ್ಪಿಕೊಂಡ.

ಓಟ ಶುರುವಾಯಿತು. ಒಂದೇ ಕ್ಷಣದಲ್ಲಿ ಅಕಿಲಿಸ್ ತನ್ನ ಮತ್ತು ಆಮೆಯ ನಡುವಿನ ದೂರದ ಅರ್ಧದಷ್ಟನ್ನು ಕ್ರಮಿಸಿದ್ದ. ಮುಂದಿನ ಕ್ಷಣದಲ್ಲಿ ಮುಕ್ಕಾಲು ಭಾಗ, ಇನ್ನೊಂದು ಕ್ಷಣದಲ್ಲಿ ಎಂಟರಲ್ಲಿ ಏಳು ಭಾಗ ಹೀಗೆ ಓಟ ಮುಂದುವರೆಯಿತು. ಅಕಿಲಿಸ್ ಅದೆಷ್ಟು ವೇಗವಾಗಿ ಓಡಿದರೂ, ಅವನು ಆಮೆಗಿಂತ ಸ್ವಲ್ಪ ಪ್ರಮಾಣದಷ್ಟಾದರೂ ದೂರದಲ್ಲಿ ಯಾವಾಗಲೂ ಹಿಂದಿರುವುದರಿಂದ ಅವನಿಗೆ ಆಮೆಯನ್ನು ಹಿಂದೆ ಹಾಕಲು ಯಾವತ್ತೂ ಸಾಧ್ಯವಾಗುವುದಿಲ್ಲ.

ವಾಸ್ತವವಾಗಿ ಈ ಕತೆ ಅಥವಾ ಸಮಸ್ಯೆಯನ್ನು ಸೃಷ್ಟಿಸಿದವನು ಜೀನೋ ಎಂಬ ತತ್ವಜ್ಞಾನಿ. ಈ ಸಮಸ್ಯೆಯು ವಿರೋಧಾಭಾಸದಂತೆ ಕಂಡರೂ ತಾತ್ವಿಕವಾಗಿ ಅದು ಸರಿಯೇ? ತತ್ವಜ್ಞಾನದಲ್ಲಿ ಇದಕ್ಕೆ ದ್ವಿಧಾಭಾವ (Dichotomy) ಎಂದು ಹೆಸರು.

ಇದನ್ನೇ ಇನ್ನೊಂದು ಉದಾಹರಣೆಯ ಮೂಲಕ ವಿಚಾರಿಸುವಾ.

ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಸ್ತುವೊಂದು ಚಲಿಸುತ್ತಿದೆಯೆಂದು ಭಾವಿಸಿ. ಅದು ಇನ್ನೂ ಚಲಿಸಬೇಕಾದ ದೂರವನ್ನು ಅರ್ಧಗಳನ್ನಾಗಿ ವಿಂಗಡಿಸಬಹುದು. ಅಂದರೆ ಅದು ಕ್ರಮಿಸಬೇಕಾದ ಅಂತರವನ್ನು (೧/೨ + ೧/೪ + ೧/೮ + ೧/೧೬ ...) ಹೀಗೆ ಬರೆಯಬಹುದು. ಅಂದರೆ ಆ ವಸ್ತುವು ಸಂಪೂರ್ಣ ಅಂತರವನ್ನು ಕ್ರಮಿಸಬೇಕಾದರೆ ಮೇಲಿನ ಸಂಖ್ಯಾಸರಣಿಯ ಮೊತ್ತ ಒಂದಾಗಬೇಕು ತಾನೆ? ಆದರೆ ಹಾಗಾಗಲು ಯಾವತ್ತೂ ಸಾಧ್ಯವಿಲ್ಲ. ಏಕೆಂದರೆ ಆ ಸರಣಿಯ ಸಂಖ್ಯೆಗಳನ್ನು ಅನಂತವಾಗಿ ಕೂಡಿಸುತ್ತಾ ಹೋದರೂ ಅದು ಪೂರ್ಣ ಒಂದಾಗು

ವುದೇ ಇಲ್ಲ. ಆದ್ದರಿಂದ ಅಕಿಲಿಸ್‌ನಿಗೆ ಆಮೆಯನ್ನು ಹಿಂದಿಕ್ಕಲು ಸಾಧ್ಯವೇ ಆಗುವುದಿಲ್ಲ.

ಮೇಲಿನ ಪರಿಹಾರವು ಎಷ್ಟು ಸರಳವೋ ಅಷ್ಟೇ ಜಟಿಲ ಕೂಡ. ಸಾವಿರಾರು ವರ್ಷಗಳ ಹಿಂದೆ ಸೃಷ್ಟಿಸಲ್ಪಟ್ಟ ಈ ಸಮಸ್ಯೆಯನ್ನು ಕೇವಲ ಕೆಲವು ದಶಕಗಳ ಹಿಂದೆ ಅನಂತೀಕರಣದ ಕಲ್ಪನೆಯ ಮೂಲಕ ಪರಿಹರಿಸಲಾಯಿತು.

ಕ್ರಿ.ಪೂ. ೪೫೦ರ ಸುಮಾರಿಗೆ ಜೀವಿಸಿದ್ದ ಜೀನೋ ಈ ರೀತಿಯ ವಿಚಿತ್ರವಾದ ಸಮಸ್ಯೆಗಳಿಂದಲೇ ಜಗತ್ತಿನಾದ್ಯಂತ ಹಲವಾರು ಗಣಿತಜ್ಞರ ನಿದ್ದೆಯನ್ನು ಕೆಡಿಸಿದ್ದ. ನನಗೆ, ನಿಮಗೆ ಹೊಳೆಯದೆ ಇದ್ದ ಈ ಸಮಸ್ಯೆ ಜೀನೋನಿಗೆ ಸಾವಿರಾರು ವರ್ಷಗಳ-ಹಿಂದೆ ಅದೂ ಗಣಿತವು ಕೇವಲ ಪ್ರಾಥಮಿಕ ಹಂತದಲ್ಲೇ ಒದ್ದಾಡುತ್ತಿದ್ದ ಸಮಯದಲ್ಲಿ- ಹೇಗೆ ಹೊಳೆಯಿತೆಂದು ಆಶ್ಚರ್ಯವಾಗುವುದಿಲ್ಲವೆ?

ಯಾವುದೇ ವಸ್ತುವಿನ ಅಥವಾ ಕ್ರಿಯೆಯ ವಕ್ರತೆಯನ್ನು ಗುರುತಿಸಬೇಕಾದರೆ ಅದನ್ನು ವಕ್ರದೃಷ್ಟಿಯಿಂದಲೇ ನಾವು ನೋಡಬೇಕೆಂದು ಜೀನೋ ಸಾರಿ ಹೇಳಿದ. ಇವನ ಚಿಂತನೆ ಎಷ್ಟು ಅಗಾಧವಾಗಿದೆಯೆನ್ನುವುದನ್ನು ಅರಿಯಲು ಅವನ ಇನ್ನೊಂದು ಸಮಸ್ಯೆಯನ್ನು ನೋಡಿ.

ಬಿಲ್ಲಿನಿಂದ ಬಾಣವೊಂದು ಅತಿವೇಗವಾಗಿ ಈಗ ತಾನೆ ಹೊರಬಂದಿದೆ ಎಂದು ಊಹಿಸಿ. ಈಗ ಅದು ಗಾಳಿಯಲ್ಲಿ ಚಲಿಸುತ್ತಿರುವಷ್ಟು ಕಾಲ ಯಾವುದೇ ಒಂದು ಕ್ಷಣದಲ್ಲಿ ಅದನ್ನು ನೋಡಿದರೆ ಅದು ನಿಂತಿರುವಂತೆಯೂ, ತನ್ನ ಉದ್ದದಷ್ಟು ದೂರವನ್ನು ಆಕ್ರಮಿಸಿಕೊಂಡಿರುವಂತೆಯೂ ಕಾಣುತ್ತದೆ ತಾನೆ? ಆ ಬಾಣವನ್ನು ಪ್ರತಿ ಅತಿ ಕಡಿಮೆ ಅವಧಿಯ ಕ್ಷಣಕ್ಕೊಮ್ಮೆ ನೋಡುತ್ತ ಬಂದರೆ ಆ ಬಾಣವು ಪ್ರತಿ ವೀಕ್ಷಣೆಯಲ್ಲೂ ನಿಂತಿರುವಂತೆ ಕಾಣುತ್ತದೆ. ಆದ್ದರಿಂದ ಆ ಬಾಣವು ಚಲನೆಯಲ್ಲಿ ಇಲ್ಲವೇ ಇಲ್ಲ. ಈ ಸಮಸ್ಯೆಯನ್ನು ಆಳವಾಗಿ ಚಿಂತಿಸಿ, ತಾತ್ವಿಕವಾಗಿ ವಿಚಾರಿಸಿದರೆ ಜೀನೋವಿನ ಈ ವಾದವೂ ಸರಿಯೇ. ನನ್ನ ಪ್ರಕಾರ ಅವನ ವಾದವನ್ನು ಸಿನೆಮಾ ರೀಲಿನೊಂದಿಗೆ ಹೋಲಿಸಿ ನೋಡಿದರೆ ಸಮಸ್ಯೆಯು ಸ್ಪಷ್ಟವಾಗುತ್ತದೆ. ಸ್ವಲ್ಪವೇ ವ್ಯತ್ಯಾಸಗಳಿರುವ ಸ್ತಬ್ಧ ಚಿತ್ರಗಳಿರುವ ರೀಲನ್ನು ವೇಗವಾಗಿ ಓಡಿಸಿದರೆ ಪರದೆಯ ಮೇಲೆ ಅದು ಚಲಿಸಿದಂತೆ ಕಾಣುತ್ತದೆ. ಆದರೆ ವಾಸ್ತವವಾಗಿ ಆ ಚಿತ್ರಗಳು ಚಲನೆಯಲ್ಲಿ ಇಲ್ಲ ತಾನೆ. ಅಲ್ಲಿ ಚಲನೆಯು ಕೇವಲ ದೃಷ್ಟಿಭ್ರಮೆ ಅಷ್ಟೆ. ಇದೇ ವಿದ್ಯಮಾನವನ್ನು ಜೀನೋ ವಾಸ್ತವಿಕ ಜಗತ್ತಿಗೆ ಹೋಲಿಸಿ ಅದೂ ಒಂದು ದೃಷ್ಟಿಭ್ರಮೆ ಎಂದು ಪ್ರತಿಪಾದಿಸಿದ್ದಾನೆ.

ಸರಿ, ಶುರುವಾಯಿತು ತತ್ವಜ್ಞಾನಿಗಳ ಪರಿಹಾರಾನ್ವೇಷಣೆ. ಒಬ್ಬೊಬ್ಬರದ್ದು ಒಂದೊಂದು ನಿಲುವು. ಅವುಗಳಲ್ಲಿ ತುಂಬಾ ಸ್ವಾರಸ್ಯಕರವಾದ ಪರಿಹಾರವನ್ನು ನೀಡಿದವನೆಂದರೆ ಯೋಹಾನ್ ಗಾಟ್ಲೆಬ್ (ಕ್ರಿ.ಶ. ೧೭೮೨). ಅವನ ಪ್ರಕಾರ ಈ ಸಮಸ್ಯೆಗೆ ಪರಿಹಾರವೇನೆಂದರೆ ಸಮಸ್ಯೆಯೇ ಇಲ್ಲವೆಂದು ತಿಳಿಯುವುದು. ಚೆನ್ನಾಗಿಲ್ಲವೆ ಗಾಟ್ಲೆಬ್‌ನ ಪರಿಹಾರ! ತಲೆ ತಿನ್ನುವ ಸಮಸ್ಯೆಗಳಿಗೆ ಪರಿಹಾರ ಸಿಕ್ಕದಿದ್ದರೆ ಆ ಸಮಸ್ಯೆಯೇ ಇಲ್ಲವೆಂದಾಯಿತು; ಸಮಸ್ಯೆ ಸೃಷ್ಟಿಸಿದವನಿಗೂ ಬೇಜಾರಿಲ್ಲ ನಮಗೂ ಕಷ್ಟವಿಲ್ಲ!

ಆದರೆ ಗಣಿತದ ವಾದಗಳು ಬರೀ ತಾತ್ವಿಕವಲ್ಲ ತಾನೆ? ಆದ್ದರಿಂದ ಆನಂತರ ಬಂದ ನ್ಯೂಟನ್‌ನಂತಹ ಮೇಧಾವಿಗಳು ಈ ಸಮಸ್ಯೆಗೆ ಸಮರ್ಪಕವಾದ ಪರಿಹಾರವನ್ನು ಸೂಚಿಸಿದರು. ಅದೇನೆಂದರೆ, ಯಾವುದೇ ಸಮಯದ ಅವಧಿಯನ್ನು ಅನಂತ ಸಮಭಾಗಗಳನ್ನಾಗಿ ವಿಭಜಿಸಿದರೆ ಪ್ರತಿಯೊಂದು ಭಾಗವೂ ಸೊನ್ನೆಗೆ ಅತಿ ಸಮೀಪದಲ್ಲಿರುತ್ತದೆ. ಈ ಪರಿಮಾಣ ಎಷ್ಟು ಸಣ್ಣದೆಂದರೆ ನಾವು ಇನ್ನೂ ಮುಂದುವರೆದು ಅದು ಸೊನ್ನೆಗೆ ಸಮವೆಂದು ಹೇಳಿದರೂ ಗಣಿತಕ್ಕೆ ಖಂಡಿತವಾಗಿಯೂ ಅನ್ಯಾಯವಾಗಲಿಕ್ಕಿಲ್ಲ. ಆಗ ಈ ಸೊನ್ನೆಯಷ್ಟು ಕಾಲಾವಧಿಯ ಸಮಯವು

ಯಾರ ಕೈಗೂ ಸಿಗದೆ ಮಾಯವಾಗಿ ಬಿಡುತ್ತದೆ. ಆದ್ದರಿಂದ ಬಾಣವು ಚಲನೆಯಲ್ಲೇ ಇರುವುದಿಲ್ಲ.

ಈ ಪರಿಹಾರಕ್ಕೆ ಅನೇಕರು ಹಾಗೆಲ್ಲ ಭೌತಶಾಸ್ತ್ರದ ಪರಿಮಾಣವಾದ ಸಮಯವನ್ನು ಅನಂತ ಭಾಗಗಳನ್ನಾಗಿ ಮಾಡಬಾರದೆಂದು ಹೇಳಿ ಇನ್ನೊಂದು ಸಮಸ್ಯೆಯನ್ನು ತಂದಿತ್ತರು. ಕೊನೆಗೆ ಡೇವಿಡ್ ಹ್ಯೂಮ್ ಎಂಬ ತತ್ವಶಾಸ್ತ್ರಜ್ಞನು ಯಾವುದೇ ಪರಿಮಾಣದ ಮೇಲೆ ಅದು ಚಲನೆಯಲ್ಲಿರಲಿ ಅಥವಾ ಇಲ್ಲದಿರಲಿ ಗಣಿತವು ಅದನ್ನು ನಿರ್ದಿಷ್ಟವಾಗಿ ಪರಿಗಣಿಸುತ್ತದೆಂದೂ ಹಾಗೆ ಮಾಡುವುದು ಕಾಲ್ಪನಿಕತನದ ಪರಮಾವಧಿಯೆಂದೂ ಹೇಳಿ ಎಲ್ಲರ ಬಾಯಿ ಮುಚ್ಚಿಸಿದ.

ಆದರೆ ಜೀನೋನ ಸಮಸ್ಯೆಗಳು ಇಷ್ಟಕ್ಕೇ ಮುಗಿಯಲಿಲ್ಲ. ತನ್ನ ಮೊದಲ ಸಮಸ್ಯೆಯನ್ನೇ ಇನ್ನೂ ಮುಂದುವರೆಸಿದ ಆತ. ಅಕಿಲಿಸ್‌ನು ಕೆಲವು ಕ್ಷಣಗಳಲ್ಲಿ ಆತನ ಮತ್ತು ಆಮೆಯ ನಡುವಿನ ಅಂತರದ ಅರ್ಧದಷ್ಟನ್ನು ಕ್ರಮಿಸಿರುತ್ತಾನೆ. ಈಗ ಹಿಂದೆ ವಿವರಿಸಿದ ಆತನ ವಾದವನ್ನು ಅಲ್ಲಿಂದಲೇ ಆರಂಭಿಸಿದರೆ ಅಕಿಲಿಸ್‌ನು ಯಾವುದೋ ಪ್ರಮಾಣದ ಸಮಯದಷ್ಟು ಹಿಂದೆ ಕಾಲುಭಾಗವನ್ನೂ ಇನ್ನೂ ಮುಂಚೆ ೧/೮ ನಷ್ಟು ಭಾಗವನ್ನೂ ಕ್ರಮಿಸಿರುತ್ತಾನೆ. ಇದನ್ನು ಅನಂತವಾಗಿ ಮುಂದುವರೆಸಿದರೆ ಅಕಿಲಿಸ್‌ನು ಓಟವನ್ನು ಆರಂಭಿಸಿಯೇ ಇಲ್ಲವೆಂದಾಗುತ್ತದೆಂದು ವಾದಿಸಿದ. ಇದೇ ರೀತಿ ಮೇಲಿನಿಂದ ಕೆಳಕ್ಕೆ ಬೀಳುತ್ತಿರುವ ಸೇಬು ಹಣ್ಣೊಂದು ನೆಲಕ್ಕೆ ಮುಟ್ಟಲು ಸಾಧ್ಯವೇ ಇಲ್ಲವೆಂದು ಆತ ವಾದಿಸಿದ್ದ. ಆದರೆ ಜೀನೋ ಇನ್ನೂ ಮುಂದುವರೆದು ಈ ಸಮಸ್ಯೆಗಳೇ ತನ್ನಿಂದ ಸೃಷ್ಟಿಸಲ್ಪಟ್ಟಿಲ್ಲವೆಂದು ಸಾಧಿಸಲು ಅದೇಕೆ ಮರೆತುಬಿಟ್ಟನೋ!

ಇವಿಷ್ಟು ಜೀನೋನ ಸಮಸ್ಯೆಗಳ ಸಮಸ್ಯೆಗಳಾದರೆ, ಬರ್ಟ್ರಂಡ್ ರಸೆಲ್ಲರ ಸಮಸ್ಯೆಗಳು ಇನ್ನೂ ಸ್ವಾರಸ್ಯಕರ. ಟ್ರಿಸ್ಟಮ್ ಷಾಂಡಿ ಎಂಬವ ಅತಿ ಕುತೂಹಲ ಕರವಾದ ಅಭಿವ್ಯಕ್ತಿಯುಳ್ಳ ಯುವಕ. ಯಾವುದೋ ಆತ್ಮಕಥೆಯನ್ನೋದುತ್ತಿದ್ದಾಗ ಆತನಿಗೊಮ್ಮೆ ದುರ್ಬುದ್ಧಿಯೊಂದು ಹೊಳೆಯಿತು. ಅದೇನೆಂದರೆ ತನ್ನ ಜೀವನವನ್ನೂ ಆತ್ಮಕತೆಯನ್ನಾಗಿಸುವುದು. ಆದರೆ ಆತನ ಜೀವನವು ಎಷ್ಟೊಂದು ಪ್ರಾಮುಖ್ಯ ಮತ್ತು ಸ್ವಾರಸ್ಯಕರವೆಂದರೆ, ಆತನ ಜೀವನದ ಒಂದು ದಿನದ ಕತೆಯನ್ನು ಬರೆಯಲು ಆತನಿಗೆ ಒಂದು ವರ್ಷವೇ ಬೇಕಾಗುತ್ತಿತ್ತು. ಆತನ ಜೀವಿತಾವಧಿಯು ಅನಂತವಾದರೆ ಮಾತ್ರ ಆತನ ಜೀವನದ ಎಲ್ಲಾ ದಿನಗಳನ್ನೂ ಆತ ಆತ್ಮಕಥೆಯನ್ನಾಗಿ ಬರೆಯುತ್ತಾನೆ.

ಮೇಲಿನ ವಾದವು ಸೈದ್ಧಾಂತಿಕವಾಗಿ ಸತ್ಯವೇ. ಏಕೆಂದರೆ ಆತನ ಇವತ್ತಿನ ಆತ್ಮಕಥೆ ಈ ವರ್ಷ, ನಾಳಿನದ್ದು ಮುಂದಿನ ವರ್ಷ, ಹೀಗೆ ಆತನ ಜೀವನದ ಎಲ್ಲಾ ದಿನಗಳೂ ಒಂದಿಲ್ಲೊಂದು ವರ್ಷದಲ್ಲಿ ಬರೆಯಲ್ಪಡುತ್ತವೆ. ಆದ್ದರಿಂದ ಷಾಂಡಿಯು ತನ್ನ ಆತ್ಮಕತೆಯನ್ನು ಪೂರ್ಣಮಾಡಿಯೇ ಸಾಯುತ್ತಾನೆ.

ಈತನಕ ಹೇಳಿದ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲಾಗಿದೆಯಾದರೂ ಗಣಿತ ಮೇಧಾವಿಗಳಿಂದ ಕಂಡುಹಿಡಿಯಲ್ಪಟ್ಟ ಇನ್ನಿತರ ಸಮಸ್ಯೆಗಳಿಗೆ, ಈತನಕ ಪರಿಹಾರವನ್ನು ಕಂಡುಕೊಳ್ಳಲಾಗಿಲ್ಲ. ಉದಾಹರಣೆಗೆ ಫಾರ್ಮಾಟ್ ಎಂಬ ಗಣಿತಜ್ಞ Xn + Yn = Zn ಎಂಬ ಸಮೀಕರಣವು 'n'ನ ಬೆಲೆ ಎರಡಕ್ಕಿಂತ ಹೆಚ್ಚಾದರೆ ಯಾವಾಗಲೂ ಸುಳ್ಳಾಗುತ್ತದೆಂದು ಸೂಚಿಸಿದ್ದ. ತನ್ನ ಸಂಶೋಧನೆಗಳು ಎಷ್ಟೊಂದು ಅಮೂಲ್ಯವೆಂದು ಆ ಕಾಲದಲ್ಲಿ ಅರಿಯದ ಫಾರ್ಮಾಟನು ಹೀಗೆ ಅನೇಕ ಸಮಸ್ಯೆಗಳನ್ನೂ ಅದಕ್ಕೆ ಸರಳವಾದ ಪರಿಹಾರವನ್ನೂ, ಕಾಗದ ಉಳಿಸುವ ಯೋಜನೆಯಿಂದಲೋ ಏನೋ ಯಾವುದೋ ಪುಸ್ತಕದ ಅಂಚಿನಲ್ಲಿ ಇಲ್ಲವೆ ಖಾಲಿ ಇರುವ ಜಾಗದಲ್ಲಿ ಬರೆದುಬಿಡುತ್ತಿದ್ದ. ಮೇಲೆ ಹೇಳಿದ ಸಮಸ್ಯೆಯನ್ನು ಫಾರ್ಮಾಟನ ಕೊನೆಯ ಸಮಸ್ಯೆಯೆಂದು ಕರೆಯಲಾಗುತ್ತದೆ. ಈ ಸಮಸ್ಯೆಗೆ ಸರಳವಾದ ಪರಿಹಾರವನ್ನು ತಾನು

ಕಂಡುಹಿಡಿದುದಾಗಿಯೂ ಆದರೆ ಬರೆಯಲು ಜಾಗವಿಲ್ಲದ್ದರಿಂದ ಅದನ್ನು ಬರೆದಿಲ್ಲವೆಂದೂ ಹೇಳಿ ಯಾವುದೋ ಒಂದು ಪುಸ್ತಕದ ಅಂಚಿನಲ್ಲಿ ಬರೆದು ಎಲ್ಲಿ ಬರೆದೆನೆನ್ನುವುದನ್ನು ಮರೆತುಬಿಟ್ಟ. ಆದರೆ ಮುನ್ನೂರು ವರ್ಷಗಳಾದರೂ ಆತ ಸೂಚಿಸಿದ ಪರಿಹಾರವನ್ನು ಸ್ವತಂತ್ರವಾಗಿ ಕಂಡುಹಿಡಿಯಲು ನಮಗಾಗಲಿಲ್ಲ.

ಯಾವುದೇ ವಾದವನ್ನು ಗಣಿತದಲ್ಲಿ ಸೈದ್ಧಾಂತಿಕವಾಗಿ ಸಾಧಿಸುವುದು ಸುಲಭದ ಕೆಲಸವಲ್ಲವೆನ್ನುವುದಂತೂ ಸಾರ್ವಕಾಲಿಕ ಸತ್ಯವೇ ಆದರೂ ಯಾವುದೇ ಸಿದ್ಧಾಂತವನ್ನು ಸಾಧಿಸುವಲ್ಲಿಯೂ ಹಲವಾರು ಗೊಂದಲಗಳುಂಟು. ಅತಿ ಕ್ಲಿಷ್ಟ ಸಮಸ್ಯೆಯೆಂದು ತಿಳಿಯಲ್ಪಟ್ಟ ಸಮಸ್ಯೆಗೆ ಅತಿ ಸಾಧಾರಣ ಗಣಿತಜ್ಞನೊಬ್ಬ ಸರಳವಾದ ಪರಿಹಾರವನ್ನು ಸೂಚಿಸಿದ್ದುಂಟು. ಹಾಗೆಯೇ ಅನೇಕ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಾಗದೇ ಅದನ್ನು ಸಾಧಿಸಲು ಅಸಾಧ್ಯವೆಂದು ಗಣಿತಜ್ಞರು ಸಾಧಿಸಿದ್ದೂ ಉಂಟು. ಏನೇ ಆದರೂ ಮನುಷ್ಯನ ನಿಜವಾದ ಬುದ್ಧಿಶಕ್ತಿಯನ್ನು ಸಾಣೆ ಹಿಡಿಯಲು ಗಣಿತವು ಹೇಳಿ ಮಾಡಿಸಿದ್ದು ಎಂದರೆ ಅತಿಶಯೋಕ್ತಿಯೇನೂ ಆಗಲಾರದು. ●

## ಲಾರ್ಕ್ ಮತ್ತು ಲಾರ್ಚ್: ಅಂತರವೇನು?

ಲಾರ್ಕ್ (ಬೆಳ್ಳಕ್ಕಿ) ಎಂಬುದು ಪಕ್ಷಿಗಳ ಒಂದು ಪ್ರಭೇದ. ಸ್ಕೈಲಾರ್ಕ್, ವುಡ್‌ಲಾರ್ಕ್ ಇತ್ಯಾದಿ ಪಕ್ಷಿಗಳು ಈ ಪ್ರಭೇದದವು.

ಲಾರ್ಚ್ ಒಂದು ಮರದ ಜಾತಿ. ನಮ್ಮಲ್ಲಿಯ ದೇವದಾರು ಥರದ್ದು.

● ಸಂಗ್ರಹ: *ಬಸವೇಗೌಡ*

## ಪ್ರಪಂಚದ ಅತ್ಯಂತ ದೊಡ್ಡ ಹಲ್ಲಿ "ಕಮೋಡೋ ದೈತ್ಯ"

ಪ್ರಪಂಚದಲ್ಲಿ ಜೀವಿಸುತ್ತಿರುವ ಅತ್ಯಂತ ದೊಡ್ಡ ಹಲ್ಲಿಯ ಹೆಸರು 'ಕಮೋಡೋ ಡ್ರೇಗನ್'. ಇದು ಇಂಡೋನೇಶಿಯಾದ ಕಮೋಡೋ, ರಿತ್‌ಜಾ, ಫ್ಲೋರಸ್ ದ್ವೀಪಗಳಲ್ಲಿ ವಾಸಿಸುತ್ತದೆ. ಕಮೋಡೋ ಡ್ರೇಗನ್ ಹಲ್ಲಿ ಸರಾಸರಿಯಾಗಿ ೧೦ ಅಡಿಗಳಷ್ಟು ಉದ್ದವಾಗಿರುತ್ತದೆ. ಇದರ ತೂಕ ೮೦ ಕಿಲೋಗ್ರಾಂಗಳಷ್ಟು. ಇದು ನೋಡಲು ಎಷ್ಟು ಭಯಂಕರವಾಗಿರುತ್ತದೋ ಅಷ್ಟೇ ಚುರುಕು ಹಾಗೂ ಶಕ್ತಿಶಾಲಿ. ಕಾಡಿನ ಹಂದಿ ಹಾಗೂ ಜಿಂಕೆಗಳು ಇದರ ಆಹಾರ.

● *ಟೇಕಲ್ ಗೋಪಾಲಕೃಷ್ಣ*



# ಜ್ಞಾನನಿಧಿ

# ಕನ್ನಡದ ಪ್ರಥಮಗಳು

ಸಂಗ್ರಹ: ಅನಿತಾ ಶಶಿಕುಮಾರ್

| | |
|---|---|
| ೧. ಮೊದಲ ಕವಿ | ಪಂಪ |
| ೨. ಮೊದಲ ಕವಯಿತ್ರಿ | ಕಂತಿ |
| ೩. ಮೊದಲ ವಚನಕಾರ | ದೇವರದಾಸಿಮಯ್ಯ |
| ೪. ವಿಷಯ ವಿಶ್ವಕೋಶ | ವಿವೇಕ ಚಿಂತಾಮಣಿ |
| ೫. ಮೊದಲ ಗ್ರಂಥ | ಕವಿರಾಜಮಾರ್ಗ |
| ೬. ಗದ್ಯ ಬರಹ | ವಡ್ಡಾರಾಧನೆ |
| ೭. ಮಹಾಕಾವ್ಯ | ಆದಿಪುರಾಣ |
| ೮. ಗದ್ಯ ನಿಘಂಟು | ಕರ್ನಾಟಕ ಶಬ್ದಸಾರ |
| ೯. ಮೊದಲ ದೊರೆ | ಕದಂಬವಂಶದ ಮಯೂರವರ್ಮ |
| ೧೦. ಮೊದಲ ಶಾಸನ | ಹಲ್ಮಿಡಿಯ ಶಾಸನ |
| ೧೧. ಹಾಸ್ಯ ಪತ್ರಿಕೆ | ವಿಕಟ ಪ್ರತಾಪ |
| ೧೨. ಜ್ಯೋತಿಷ ಗ್ರಂಥ | ಜಾತಕ ತಿಲಕ |
| ೧೩. ಆಯುರ್ವೇದ ಗ್ರಂಥ | ಕರ್ನಾಟಕ ಕಲ್ಯಾಣಕಾರಕ |
| ೧೪. ಕಾವ್ಯ ನಿಘಂಟು | ರನ್ನಕಂದ |
| ೧೫. ವೈದ್ಯ ಗ್ರಂಥ | ಗೋವೈದ್ಯ |
| ೧೬. ಅಭಿನಂದನಾ ಗ್ರಂಥ | ಸಂಭಾವನೆ |
| ೧೭. ನಾಟಕ | ಮಿತ್ರವಿಂದಾ ಗೋವಿಂದಾ |
| ೧೮. ಮಹಮದೀಯ ಕವಿ | ಶಿಶುನಾಳ ಶರೀಫರು |
| ೧೯. ಪ್ರವಾಸ ಕಥನ | ದಕ್ಷಿಣ ಭಾರತ ಯಾತ್ರೆ |
| ೨೦. ಜೀವನ ಚರಿತ್ರೆ | ಕುಣಿಗಲ್ ರಾಮಾಶಾಸ್ತ್ರಿ ಗತಜೀವನ ಚರಿತ್ರೆ |
| ೨೧. ಗೀತನಾಟಕ | ಮುಕ್ತದ್ವಾರ |
| ೨೨. ಬೀದಿ ನಾಟಕ ಪ್ರಯೋಗ | ಕಟ್ಟುಕಟ್ಟು |
| ೨೩. ವೃತ್ತಿ ಕಂಪೆನಿ | ವೀರನಾರಾಯಣ ಪ್ರಸಾದಿತ ಕೃತಪುರ ನಾಟಕ ಮಂಡಳಿ |
| ೨೪. ಹವ್ಯಾಸಿ ನಾಟಕ ತಂಡ | ಭಾರತ ಕಲೋತ್ತೇಜಕ ಸಂಗೀತ ಸಮಾಜ |
| ೨೫. ಮಕ್ಕಳ ವಿಶ್ವಕೋಶ | ಬಾಲ ಪ್ರಪಂಚ |
| ೨೬. ಪತ್ತೇದಾರಿ ಕಾದಂಬರಿ | ಚೋರಗ್ರಹಣ ತಂತ್ರ |
| ೨೭. ಸ್ವತಂತ್ರ ಸಾಮಾಜಿಕ ಕಾದಂಬರಿ | ಇಂದಿರಾಬಾಯಿ |
| ೨೮. ಛಂದಃಶಾಸ್ತ್ರ ಗ್ರಂಥ | ಛಂದೋಂಬುಧಿ |
| ೨೯. ಒಗಟುಗಳ ಸಂಗ್ರಹ | ಮಕ್ಕಳ ಒಡಪುಗಳು |
| ೩೦. ದಿನಪತ್ರಿಕೆ | ಸೂರ್ಯೋದಯ ಪ್ರಕಾಶಿಕಾ |
| ೩೧. ವಿಜ್ಞಾನ ಪತ್ರಿಕೆ | ವಿಜ್ಞಾನ |
| ೩೨. ಚಲನಚಿತ್ರ ಪತ್ರಿಕೆ | ಚಿತ್ರ ಸಮಾಚಾರ |
| ೩೩. ಮಕ್ಕಳ ಪತ್ರಿಕೆ | ಮಕ್ಕಳ ಪುಸ್ತಕ |

# ಸಿ.ಬಿ.ಐ. ಹುಟ್ಟಿದ್ದು ಹೇಗೆ?

**ರ**ಕ್ಷಣಾ ಕಾರ್ಯ ಹಾಗೂ ಉಪಕರಣಗಳಿಗಾಗಿ ಬ್ರಿಟಿಶರು ಹೆಚ್ಚು ಹಣ ಹೂಡಲಾರಂಭಿಸಿದ್ದರು. ಆಗ ಅಧಿಕಾರಿಗಳು ಮತ್ತು ಅಧಿಕಾರೇತರರು ಖಜಾನೆಯಿಂದ ತಮ್ಮ ಜೇಬು ತುಂಬಿಸಿಕೊಳ್ಳಲಾರಂಭಿಸಿದಾಗ ಸರ್ಕಾರ ೧೯೪೧ರಲ್ಲಿ ವಿಶೇಷ ಪೊಲೀಸ್ ಸಂಸ್ಥೆ (ಎಸ್‌ಪಿಇ)ಯನ್ನು ರೂಪಿಸಲು ನಿರ್ಧರಿಸಿತು. ಇದರ ಕೇಂದ್ರ ಕಚೇರಿಯನ್ನು ಲಾಹೋರಿನಲ್ಲಿ ಸ್ಥಾಪಿಸಲಾಯಿತು.

ಸರಕಾರದ ಯುದ್ಧ ಮತ್ತು ಸರಬರಾಜು ಇಲಾಖೆಗೆ ಸಂಬಂಧಿಸಿದಂತೆ ಲಂಚ ರುಷುವತ್ತು ಪ್ರಕರಣಗಳ ತನಿಖೆ ನಡೆಸಲು ಈ ಸಂಸ್ಥೆಗೆ ಆದೇಶ ನೀಡಲಾಯಿತು. ಯುದ್ಧ ಇಲಾಖೆ ಮೇಲ್ವಿಚಾರಣೆ ವಹಿಸಿಕೊಂಡಿತ್ತು. ಸಮರದ ಸಮಯದಲ್ಲಿ ರೈಲ್ವೆ ಇಲಾಖೆ ಪ್ರಮುಖ ಪಾತ್ರವಹಿಸಿದ್ದರಿಂದ ರೈಲ್ವೆಯಲ್ಲಿನ ಭ್ರಷ್ಟಾಚಾರ ಪ್ರಕರಣಗಳನ್ನೂ ಈ ಸಂಸ್ಥೆಯ ಕಾರ್ಯವ್ಯಾಪ್ತಿಗೇ ಸೇರಿಸಲಾಯಿತು. ಇದರ ಚಟುವಟಿಕೆಯನ್ನು ವಿಸ್ತರಿಸಲು ಅನುಕೂಲವಾಗುವ ಹಾಗೆ ಕಾನೂನಿನಲ್ಲಿ ತಿದ್ದುಪಡಿಯನ್ನೂ ಮಾಡಲಾಯಿತು.

ನಂತರ ಈ ಸಂಸ್ಥೆಯ ಕಾರ್ಯವ್ಯಾಪ್ತಿ ವಿಶಾಲವಾಗುತ್ತ ಹೋಯಿತು. ಮುಖ್ಯ ಕಮೀಶನರ್ ಮತ್ತು ಗವರ್ನರರ ಆಡಳಿತಕ್ಕೊಳಪಟ್ಟ ಪ್ರಾಂತ್ಯಗಳಲ್ಲಿ ಸಂಸ್ಥೆ ತನ್ನ ಕಾರ್ಯಾಚರಣೆ ನಡೆಸಲು ೧೯೪೬ರ ದೆಹಲಿ ವಿಶೇಷ ಪೊಲೀಸ್ ಕಾಯ್ದೆ ಅಧಿಕಾರ ನೀಡಿತು. ಬಕ್ಷಿ ತೇಕ್‌ಚಂದ್ ಸಮಿತಿಯ ಶಿಫಾರಸಿನಂತೆ ೧೯೪೮ರ ವೇಳೆಗೆ ಸಂಸ್ಥೆಯ ವ್ಯಾಪ್ತಿ ಮತ್ತು ಅಧಿಕಾರವನ್ನು ಇನ್ನಷ್ಟು ವಿಸ್ತರಿಸಲಾಯಿತು. ೧೯೪೭ರ ಭ್ರಷ್ಟಾಚಾರ ಕಾಯ್ದೆ ಉಲ್ಲಂಘನೆ ಪ್ರಕರಣಗಳನ್ನೂ ಕೈಗೆತ್ತಿಕೊಳ್ಳುವಂತೆ ಮಾಡಿದ್ದು ಅದು ಕೈಗೊಂಡ ಮುಖ್ಯ ಕ್ರಮಗಳಲ್ಲೊಂದು.

ಸರಕಾರದಲ್ಲಿನ ಭ್ರಷ್ಟಾಚಾರವನ್ನು ಕುರಿತಂತೆ ಒಂದು ಅಧ್ಯಯನ ನಡೆಸಿ ಭ್ರಷ್ಟಾಚಾರ ನಿರ್ಮೂಲನೆಗೆ ಸಲಹೆಗಳನ್ನು ಶಿಫಾರಸು ಮಾಡಲು ಸಮಿತಿಯನ್ನು ರಚಿಸಲಾಗುವುದೆಂದು ಅಂದಿನ ಗೃಹಸಚಿವ ಲಾಲ್ ಬಹಾದ್ದೂರ್ ಶಾಸ್ತ್ರಿಯವರು ೧೯೬೨ರ ಜೂನ್ ೬ ರಂದು ಸಂಸತ್ತಿನಲ್ಲಿ ಪ್ರಕಟಿಸಿದ್ದೇ ಇಂದಿನ ಸಿ.ಬಿ.ಐ.ಗೆ ನಾಂದಿಯಾಯಿತು. ಆ ಸಮಿತಿಯು ಮಾಡಿದ್ದ ಸಲಹೆಯ ಮೇರೆಗೆ ಸರಕಾರ ೧೯೬೩ರ ಏಪ್ರಿಲ್ ೧ ರಂದು ಅಂಗೀಕರಿಸಿದ ನಿರ್ಣಯಕ್ಕೆ ಅನುಗುಣವಾಗಿ 'ಸಿ.ಬಿ.ಐ.' ಅಸ್ತಿತ್ವಕ್ಕೆ ಬಂದಿತು. ಈ ಹಿಂದೆ ಇದ್ದ ವಿಶೇಷ ಪೊಲೀಸ್ ಸಂಸ್ಥೆ ಕಾಲಕ್ರಮೇಣ ಸಿ.ಬಿ.ಐ.ನಲ್ಲಿ ವಿಲೀನವಾಯಿತು.

• ರಾಮನ್

## ಐಸ್ಕ್ರೀಮ್ ಪೌಡರ್ ಹೇಗೆ ಮಾಡುತ್ತಾರೆ?

ಐಸ್ಕ್ರೀಮ್ ಪೌಡರಿನಲ್ಲಿ ಹಾಲಿನ ವಿಶೇಷ ತತ್ವಗಳು ಮತ್ತು ಅನ್ಯ ಸ್ಥಾಯಿತ್ವಕಾರಿ ಪದಾರ್ಥಗಳನ್ನು ಒಂದು ವಿಶಿಷ್ಟ ಅನುಪಾತದಲ್ಲಿ ಮಿಶ್ರಗೊಳಿಸಲಾಗುತ್ತದೆ. ಶೇ. 12ರಷ್ಟು ಹಾಲಿನ ಕೆನೆ, ಶೇ. 11ರಷ್ಟು ಕೆನೆರಹಿತ ಹಾಲು, ಶೇ. 15ರಷ್ಟು ಸಕ್ಕರೆ ಮತ್ತು ಶೇ. 3ರಷ್ಟು ಸೋಡಿಯಂ ಆಲ್ಜಿನೇಟ್ ಕೂಡಿಸಿ ಒಣಗಿಸಲಾಗುತ್ತದೆ.

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಶಬ್ದವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

೧) ದುರತ್ಯಯ
ಅ) ದಾಟಲಾರದ
ಆ) ದುಃಖಪೂರ್ಣ
ಇ) ಕಲಿಯಲು ಬಾರದ
ಈ) ಮಿತಿಮೀರಿದ

೨) ತನಿ
ಅ) ತುಂಪಾಗು
ಆ) ಶರೀರ
ಇ) ಪೂರ್ಣ
ಈ) ಸೋತು ಹೋಗು

೩) ಪಡಿನೆಳಲು
ಅ) ದಟ್ಟವಾದ ನೆರಳು
ಆ) ಪ್ರತಿಬಿಂಬ
ಇ) ಸಂಜೆಗತ್ತಲು
ಈ) ಕಗ್ಗತ್ತಲು

೪) ಮಾರ್ಮಲೆ
ಅ) ಬಹಳ ನೋವುಮಾಡು
ಆ) ಕೊಳೆತ ನೀರು
ಇ) ವಿರೋಧಿಸು
ಈ) ಸೈನ್ಯ

೫) ಮಿದಿ
ಅ) ತಾರೀಕು
ಆ) ಕುಟ್ಟು
ಇ) ಮೀರಿಸು
ಈ) ಮೆತ್ತಗಾಗು

೬) ಹಣೆ
ಅ) ಬಡಿ
ಆ) ಏತ
ಇ) ಕದ್ದು ನೋಡು
ಈ) ನಮಸ್ಕರಿಸು

೭) ಆಸ್ತಿಕ್ಯ
ಅ) ಹೆಚ್ಚಳ
ಆ) ಆಸ್ತಿ ಉಳ್ಳವ
ಇ) ಎಲುಬಿನ ಗೂಡು
ಈ) ದೇವರು ಇರುವನೆಂಬ ನಂಬಿಕೆ

೮) ಆಸತ್ತು
ಅ) ಹಿಟ್ಟಿನ ಮುದ್ದೆ
ಆ) ಕೂದಲು ಬೆಳೆದು
ಇ) ಹಂಬಲ
ಈ) ಆಯಾಸಪಟ್ಟು

೯) ಉಪಜ್ಞ
ಅ) ಸ್ವತಂತ್ರ ವಿಚಾರವುಳ್ಳ
ಆ) ಪುರೋಹಿತ
ಇ) ಸ್ವಲ್ಪ ಕಲಿತ
ಈ) ಶಿಷ್ಯ

೧೦) ಉದ್ಯಾಪನ
ಅ) ಬೆಳಕು ಬೀರು
ಆ) ಹೂದೋಟ
ಇ) ಮೇರೆದಪ್ಪಿ ವರ್ತಿಸುವುದು
ಈ) ಕೊನೆಗೊಳಿಸುವುದು

೧೧) ಕಾಷಾಯ
ಅ) ಕೊಳಕು ನೀರು
ಆ) ಕಾವಿ
ಇ) ಹೊಟ್ಟೆಕಿಚ್ಚು
ಈ) ಪ್ರಭೆ

೧೨) ಧುನಿ
ಅ) ಹಾಡು
ಆ) ಹೊಗೆ
ಇ) ನದಿ
ಈ) ಭೂಮಿ

## 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧) ದುರತ್ಯಯ

ಅ) ದಾಟಲಾರದ, ಬಹುಕಷ್ಟದಿಂದ ದಾಟಬಹುದಾದ, ಮೀರಿಸಲಾರದ ಉದಾ: ದುರತ್ಯಯವಾದ ಕಷ್ಟಗಳು, ಅವನ ಪರಾಕ್ರಮ ದುರತ್ಯಯವಾಗಿತ್ತು.

(ಸಂ ದುರ್ = ಕಷ್ಟದಿಂದ, ಅತ್ಯಯ = ದಾಟಿ ಹೋಗುವಂಥಾದ್ದು)

೨) ತನಿ

ಇ) ಪೂರ್ಣ, ತುಂಬಿದ, ಬಲಿಷ್ಠ, ಮಾಗಿದ, ಬೆಳೆದ, ಸುಖಾವಹ ಉದಾ: ತನಿಗಂಪು, ತನಿವಣ್ಣು, ತನಿರಸ, ತನಿವಾಲು (ಕನ್ನಡ)

೩) ಪಡಿನೆಳಲು

ಆ) ಪ್ರತಿಬಿಂಬ, ಪ್ರತಿಚ್ಛಾಯೆ, ನೀರು, ದ್ರವ ಇಲ್ಲವೆ ಕನ್ನಡಿಯಲ್ಲಿ ಕಾಣಸುವ ಪ್ರತಿಬಿಂಬ. (ಪಡಿ= ಪ್ರತಿ ನೆಳಲು= ನೆರಳು)

೪) ಮಾರ್ಮಲೆ

ಇ) ವಿರೋಧಿಸು, ಎದುರುಬೀಳು, ಪ್ರತಿಭಟಿಸು, ಉದಾ: ಕೊನೆಗೊಮ್ಮೆ ಬಡವರು ಮಾರ್ಮಲೆಯುವುದು ಖಂಡಿತ.

(ಕನ್ನಡ ಮಾರ್= ಪ್ರತಿಯಾಗಿ, ಮಲೆ= ಎದುರಿಸು)

೫) ಮಿದಿ

ಆ) ಕುಟ್ಟು ಬಡಿ, ತಿಕ್ಕು ಅರೆ,

ಮರ್ದಿಸು: ಕೊಲ್ಲು, ನಾಶಮಾಡು (ಕನ್ನಡ)

೬) ಹಣೆ

(ಅ) ಬಡಿ, ಕುಟ್ಟಿ ತೆಳ್ಳಗೆ ಮಾಡು, ಬಡಿದು ಹರಿತವಾಗಿಸು ಉದಾ: ಕಬ್ಬಿಣವನ್ನು ಹಣದು ಕತ್ತಿ ಮಾಡಿದ (ಕನ್ನಡ)

೭) ಆಸ್ತಿಕ್ಯ

ಈ) ದೇವರಿದ್ದಾನೆಂಬ ನಂಬಿಕೆ, ಧರ್ಮದಲ್ಲಿ ವಿಶ್ವಾಸ, ಸಾತ್ವಿಕತೆ (ಸಂ ಆಸ್ತಿಕ= ಅಸ್ತಿ ಅಂದರೆ ಇದೆ ಎಂದು ನಂಬುವವ)

೮) ಆಸತ್ತು

ಈ) ಆಯಾಸಪಟ್ಟು, ಶ್ರಮಗೊಂಡು, ಬೇಸತ್ತು ಉದಾ: ಬಿಸಿಲಿನಲ್ಲಿ ಆಸತ್ತು ಬಂದಿದ್ದಾನೆ. (ಕನ್ನಡದ ಆಸರು = ಶ್ರಮಗೊಳ್ಳು ಎಂಬುದರಿಂದ)

೯) ಉಪಜ್ಞ

ಅ) ಸ್ವತಂತ್ರ ವಿಚಾರಶಕ್ತಿಯುಳ್ಳ, ಸ್ವಯಂ ಜ್ಞಾನವುಳ್ಳ, ಸ್ವಂತವಾಗಿ ಕಲಿತುಕೊಂಡವ, ಉದಾ: ಅವನು ಈ ವಿಚಾರದಲ್ಲಿ ಉಪಜ್ಞ (ಸಂ ಉಪ=ಹತ್ತಿರ ಜ್ಞ=ತಿಳುವಳಿಕೆಯುಳ್ಳವ).

೧೦) ಉದ್ಯಾಪನ

ಈ) ಕೊನೆಗೊಳಿಸುವುದು, ಮುಕ್ತಾಯ, ಯಾವುದಾದರೂ ಧಾರ್ಮಿಕ ವ್ರತವನ್ನು ಮುಗಿಸುವ ಸಮಾರಂಭ. ಉದಾ: ಇಂದು ಚಂಡೀಯಾಗದ ಉದ್ಯಾಪನ (ಸಂ ಉದ್= ಮೇಲೆ, ಯಾಪನ = ಕಳಿಸುವುದು).

೧೧) ಕಾಷಾಯ

ಆ) ಕಾವಿ, ಕಾವಿಬಟ್ಟೆ, ಕೆಂಪು, ಕೆಂಪುಬಟ್ಟೆ; ಉದಾ: ಕಾಷಾಯ ಧರಿಸಿದರೆ ಸಂನ್ಯಾಸಿಯೆ? (ಸಂ)

೧೨) ಧುನಿ

ಇ) ನದಿ, ಹೊಳೆ; ಅಬ್ಬರಿಸುವ, ಗರ್ಜಿಸುವ ಸಪ್ಪಳ (ಸಂ)

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | |
|---|---|
| ೬-೮ ಸರಿಯಿದ್ದರೆ .... | ಸಾಧಾರಣ |
| ೯-೧೦ ಸರಿಯಿದ್ದರೆ .... | ಉತ್ತಮ |
| ೧೧-೧೨ ಸರಿಯಿದ್ದರೆ .... | ಅತ್ಯುತ್ತಮ |

## ಕನ್ನಡ ಕಥೆ

# ಶ್ರೀರಾಮಚಂದ್ರ

• ವೈ.ಎಸ್. ಗುಂಡೂರಾವ್

ಅನುವಿನ ಪಾಲಿಗೆ ಚಂದ್ರು ಶ್ರೀರಾಮಚಂದ್ರನೇ. ಆ ಯುಗದ ರಾಮಚಂದ್ರ ಈ ಯುಗದಲ್ಲೂ ಮನಸ್ಸು ಬದಲಿಸಿಲ್ಲ... ಹೆಂಡತಿಯ ವಿಷಯಲ್ಲಿ ಗಂಡ ಯಾವ ಕಾಲಕ್ಕೂ ಹಾಗೆಯೇ...?

ಆಫೀಸಿನ ಕೆಲಸ ಎಷ್ಟು ಮಾಡಿದರೂ ಮುಗಿಯದಾದಾಗ ಸಹಾಯಕ್ಕೆ ಬಂದವ ಅಶೋಕ. "ನೋಡಿ, ನೀವೇನೂ ಯೋಚನೆ ಮಾಡಬೇಡಿ ಅನುರಾಧಾರವರೇ. ನಾನು ಹೇಗೂ ಅದೇ ರಸ್ತೆಯಲ್ಲೆ ನಮ್ಮ ಬಡಾವಣೆ ತಲುಪಬೇಕು. ಎಷ್ಟು ಹೊತ್ತಾಗಿ ಬಿಡುತ್ತದೋ ಏನೋ ಎಂದು ಗಾಬರಿಯಾಗಬೇಕಾದುದಿಲ್ಲ, ನಿಮ್ಮ ಕೆಲಸ ಮುಗಿಸಿದ ನಂತರ ಹೇಳಿ, ನಾನೇ ಮನೆತನಕ ಬಿಡುತ್ತೇನೆ" ಎಂದಾಗ, ಅನು ಕೊಂಚ ನಿರಾಳವಾಗಿ ಮನಸ್ಸನ್ನು ಕೆಲಸದಲ್ಲಿ ತೊಡಗಿಸಿಕೊಂಡಿದ್ದರಿಂದ ಕೆಲಸವೂ ಬೇಗನೆ ಮುಗಿದು, ಇನ್ನುಳಿದುದ್ದು ಮ್ಯಾನೇಜರ್ ಒಮ್ಮೆ ನೋಡಿ ಸಹಿ ಹಾಕುವುದಷ್ಟೆ. ಅಂತೂ ಅವರು ಹಾಕಿದ್ದ ಗಡುವಿಗಿಂತ ಮೊದಲೇ ಕೆಲಸ ಮುಗಿಯಿತಲ್ಲಾ ಎಂದುಕೊಂಡು ಕಾಯುತ್ತ ಕುಳಿತಿದ್ದ ಅಶೋಕನ ಜೊತೆ ಹೊರಟಳು.

'ಬನ್ನಿ' ಎಂದ ಅಶೋಕ ಸ್ಕೂಟರ್ ಸ್ಟಾರ್ಟ್ ಮಾಡಿದ. ಬಸ್ಸು ಸಿಕ್ಕಿದರೆ ಹೋಗಿಬಿಡಬ



ಹುದೆಂಬ ಆಸೆಯಿಂದ ಅನು ಬಸ್‌ಸ್ಟಾಪಿನ ಕಡೆ ಕಣ್ಣಾಡಿಸಿದಳು. ಒಂದು ಬಸ್ಸೂ ಕಣ್ಣಿಗೆ ಕಾಣಲಿಲ್ಲ. "ಹೊಸ ಬಡಾವಣೆ ಅಂದ್ರೆ ಹೀಗೆ, ಇಷ್ಟು ಜನ ಇದ್ದರೂ ಇನ್ನು ಒಂದು ನಾಲ್ಕು ಬಸ್ಸು ಓಡಿಸಲು ಏನವರಿಗೆ?" ಎಂದು ಯೋಚಿಸುತ್ತಿರುವಲ್ಲೇ ಮನೆ ತಲುಪಿಯಾಗಿತ್ತು.

ಚಂದ್ರು ಮನೆ ಬಾಗಿಲು ತೆಗೆಯುವುದಕ್ಕೂ ಅನುರಾಧ ಅಶೋಕನ ಜೊತೆ ಸ್ಕೂಟರಿನಿಂದ ಇಳಿಯುವುದಕ್ಕೂ ಸರಿಹೋಯಿತು. ಸ್ಕೂಟರಿನಿಂದ ಇಳಿದ ಅನುರಾಧ, ಅಶೋಕನನ್ನು ಮನೆ ಒಳಗೆ ಬರುವಂತೆ ಎಷ್ಟೇ ಬಲವಂತಪಡಿಸಿದರೂ ಹೊರಟೇ ಹೋದನು. ಇದನ್ನು ನೋಡಿದ ಚಂದ್ರುವಿಗೆ ಮೈ ಎಲ್ಲಾ ಉರಿದು ಹೋಗತೊಡಗಿತು. ಅನುರಾಧ ಒಳಗೆ ಬಂದ ತಕ್ಷಣ ರಪ್ ಎಂದು ಬಾಗಿಲು ಮುಚ್ಚಿ ಕುರ್ಚಿಯಲ್ಲಿ ಕುಳಿತನು.

ಏಕೆ ಕೋಪ ಬಂದಿದೆ? ಏನಾಯಿತು, ಏನು, ಎತ್ತ? ಎಂದು ವಿಚಾರಿಸದೆ ಸುಮ್ಮನೆ ಕುಳಿತಾಗಲೇ ಬಹುಶಃ ಅಶೋಕನೊಟ್ಟಿಗೆ ಸ್ಕೂಟರಿನಲ್ಲಿ ಬಂದುದೇ ಇವರ ಕೋಪಕ್ಕೆ ಕಾರಣವಾಗಿರಬಹುದು ಎಂದು ಯೋಚಿಸಿದ ಅನು, ಮುಖ ತೊಳೆದು ಕಾಫಿ ಬಿಸಿ ಮಾಡಿಕೊಂಡು ಬಂದು ಚಂದ್ರುವಿನ ಮುಂದೆ ಲೋಟ ಇಟ್ಟು, 'ತಗೊಳ್ಳಿ, ಕಾಫಿ ಕುಡೀರಿ' ಎಂದಳು.

'ನಂಗೆ ಕಾಫೀನೂ ಬೇಡ ಏನೂ ಬೇಡ' ಎಂದು ಮುಖ ಅತ್ತ ತಿರುವಿ ಕುಳಿತನು. "ಏನಾಗೋಯ್ತು ಅಂತಾ ಈ ರೀತಿ ಕೋಪ ಹೇಳಿ," ಎಂದಳು ಅನು, ಕೊಂಚ ಸಮಾಧಾನದಿಂದಲೇ.

"ಏನಾಗಬೇಕು ಅಂತಾ ನಿನಿಷ್ಟ ಹೇಳು? ನೀನು ಈ ರೀತಿ ಯಾವನೊಟ್ಟೊತೇನೋ ತಿರುಗೋದು ನಂಗಿಷ್ಟವಿಲ್ಲ".

"ಅಲ್ರೀ, ನಾನ್ಯಾರ ಜೊತೆ ತಿರುಗ್ತಾಯಿದ್ದೇನೆ ಅಂತಾ ಈ ನಿಮ್ಮ ಅಪವಾದ ಹೇಳಿ? ಇವತ್ತು ಸ್ಟೇಟ್‌ಮೆಂಟ್ಸ್ ಮುಗಿಸಲೇಬೇಕಿತ್ತು. ಅದಕ್ಕೆ ಅಶೋಕ, ನೀವು ಮುಗ್ಸಿ ಮೇಡಂ, ನಾನು ಮನೆ ತಲುಪಿಸ್ತೇನೆ ಅಂದ್ರು. ಹೇಗೂ ಅವರ ಮನೆ ಇರೋದು ಮುಂದಿನ ಬಡಾವಣೇಲೇ. ಇದೇ ರಸ್ತೆಯಲ್ಲೇ ಹೋಗಬೇಕಿತ್ತು. ಅದೂ ಅಲ್ದೆ ಇಷ್ಟೊತ್ತಿನಲ್ಲಿ ಯಾವ ಬಸ್ಸಿದೆ ಈ ಏರಿಯಾಗೆ ಹೇಳಿ? ಬಿಟಿಎಸ್ ಬಸ್ ಕಾಯ್ದು ಕುಳಿತಿದ್ದರೆ ಒಂಬತ್ತಾದರೂ ಮನೆ ತಲುಪೋಕಾಗ್ತಾಯಿರ್‍ಲಿಲ್ಲ ಗೊತ್ತಾ," ಎಂದಳು.

"ಹೌದೌದು, ಯಾರ್‍ಯಾರ ಜೊತೇಲಿ ಸುತ್ತೋಕೆ ಈ ರೀತಿ ಕಾರಣಗಳು ದಿನ ಬೆಳಗಾದ್ರೆ ಯಥೇಚ್ಛವಾಗಿ ಸಿಗುತ್ವೆ."

"ಛೀ, ನೀವು ಹೀಗೆ ಹೆಜ್ಜೆ ಹೆಜ್ಜೆಗೂ ನನ್ನನ್ನು ಸಂಶಯಿಸುವುದಕ್ಕೆ ಪ್ರಾರಂಭಿಸಿದರೆ ಇದಕ್ಕೆ ಕೊನೆ ಮೊದಲೇ ಇರೋಲ್ಲ. ಇದರಿಂದ ನಿಮ್ಮ ನೆಮ್ಮದಿಯನ್ನು ಹಾಳು ಮಾಡಿಕೊಳ್ಳೋದಲ್ಲದೆ ನನ್ನ ನೆಮ್ಮದಿಯನ್ನೂ ಹಾಳು ಮಾಡ್ತಾ ಇದ್ದೀರಾ. ದಿನ ಬೆಳಗಾದ್ರೆ ಈ ರೀತಿ ಒಬ್ಬರಿಗೊಬ್ಬರು ಮನಸ್ಸನ್ನು ಕಹಿ ಮಾಡಿಕೊಂಡೇ ಮನೆ ತಲುಪಿದರೆ, ಅದೇ ಯೋಚನೆಯಲ್ಲಿ ರಾತ್ರಿಯೆಲ್ಲಾ ಕಳೆದು ಮಾರನೆಯ ದಿನ ಆಫೀಸಿನಲ್ಲಿ ಕೆಲಸ ಮಾಡೋದಾದ್ರೂ ಹೇಗ್ರಿ?" ಎಂದಳು.

ಊಟಕ್ಕೆ ಕುಳಿತರೂ ಊಟ ಸೇರದಾಗಿತ್ತು ಅನುರಾಧಳಿಗೆ. ಎದುರಿಗೆ ಬಡಿಸಿಕೊಂಡು ಕುಳಿತಿದ್ದ ಚಂದ್ರುವನ್ನು ನೋಡಿದಳು. ಅವನ ಸ್ಥಿತಿಯೂ ಅದೇ ಆಗಿತ್ತು. ತಟ್ಟೆಯಲ್ಲಿ ಹಾಕಿಕೊಂಡಿದ್ದ ಅನ್ನಕ್ಕೆ ಸಾರು ಬಡಿಸಿಕೊಂಡು ಬೆರಳಾಡಿಸುತ್ತಿದ್ದವ ನಾಲ್ಕು ತುತ್ತು ತಿಂದ ಶಾಸ್ತ್ರ ಮಾಡಿ ಮೇಲೆದ್ದ.

ಛೇ, ಗಂಡಸರ ಸ್ವಭಾವವೇ ಇಷ್ಟು. ಇಷ್ಟಕ್ಕೂ ನನಗೇನು ಕೆಲಸಕ್ಕೆ ಹೋಗಬೇಕೆಂಬ ಆಸೆಯೇನಿರಲಿಲ್ಲ. "ಸೈಟಂತೂ ಆಗಿದೆ, ನೀನು ಸ್ವಲ್ಪ ಸಂಪಾದಿಸಿದರೆ, ಬಂದ ಸಂಬಳವನ್ನು ಕೂಡಿ ಹಾಕಿದರೆ, ಹೇಗೋ ಒಂದು ಚಿಕ್ಕ ಗೂಡೂಂತ ಕಟ್ಟಿಸಿ ಬಿಡಬಹುದು. ಯಾರಿಗೆ ಬೇಕು ಈ ಬಾಡಿಗೆ ಮನೆ ಗೋಳು. ಆರು ತಿಂಗಳಿಗೊಮ್ಮೆ ಬಾಡಿಗೆ ಏರಿಸ್ತಾನೆ ಇರ್‍ತಾರೆ.

ಈ ಮನೆ ಓನರ್ ಜೊತೆ ಏಗೋದು ಕಷ್ಟವೇ,'' ಎಂದು ಇವರು ಹೇಳಿದ್ದಕ್ಕೆ ತಾನೆ ನಾನು ಕೆಲಸಕ್ಕೆ ಸೇರಿದ್ದು. ಇಲ್ಲದಿದ್ದರೆ ಯಾರಿಗೆ ಬೇಕಿತ್ತು ಈ ಹಾಳು ಕೆಲಸ. ಪ್ರೈವೇಟ್‌ದು ಅಂದಮೇಲೆ ಕೆಲಸದ ವೇಳೆಯಲ್ಲಿ ಕೊಂಚ ವ್ಯತ್ಯಯ ಆಗೋದು ಸಹಜವೇ. ಇವರ ತರಹಾ ಸೈರನ್ ಕೂಗಿದ ತಕ್ಷಣ ಎದ್ದುಬಂದು ಬಿಡುವುದಕ್ಕಾಗುತ್ತದೆಯೇ? ಎಂದು ಯೋಚಿಸಲಾರಂಭಿಸಿದಳು.

ಕೇಶರಾಶಿಯು ಮೇಘಗಳ
ಕಟ್ಟಿಟ್ಟುಕೊಂಡರೆ ನೀ
ಬಂದೀತು ಹ್ಯಾಗೆ ಶ್ರಾವಣ
ಕುಣಿದಾವು ಹ್ಯಾಗೆ ನವಿಲು?

• ವಿಭಾ

ರಾತ್ರಿಯೆಲ್ಲಾ ಹೊರಳಾಡಿದರೂ ಅನುಗೆ ನಿದ್ರೆ ಬರಲಿಲ್ಲ. ಮೆಚ್ಚಿ ಮದುವೆಯಾದ ಪತಿಯೇ ಹೀಗೆ ಸಂಶಯಿಸುವ ಪ್ರಾಣಿಯಾದರೆ ಇಡೀ ಜೀವನವೇ ಏಗೋದು ಹೇಗೆಂದು ಯೋಚಿಸತೊಡಗಿದಳು. ತಕ್ಷಣ ರಮೇಶ ಜ್ಞಾಪಕಕ್ಕೆ ಬಂದ. ಹೌದು, ಯಾವಾಗಲಾದರೊಮ್ಮೆ 'ಅತ್ತೆ ಅತ್ತೆ' ಎಂದು ಅಮ್ಮನನ್ನು ನೋಡಲು ಬಂದುಬಿಡುತ್ತಿದ್ದ. ಅದು-ಇದು ಮಾತನಾಡುತ್ತಾ ರಾತ್ರಿ ಊಟ ಮಾಡಿಯೇ ಹೋಗುತ್ತಿದ್ದ. ಬಂದಾಗಲೆಲ್ಲಾ ಹಿರಿಯವಳಾದ ನನ್ನೊಡನೆ ಅಷ್ಟೊಂದು ಸಲಿಗೆ ಇಲ್ಲದಿದ್ದರೂ ವಿನುತ, ಶ್ರೀದೇವಿಯರನ್ನಂತೂ ಗೋಳು ಹೊಯ್ದುಕೊಳ್ಳುತ್ತಿದ್ದ. ಅದಕ್ಕೆ ಸರಿಯಾಗಿ ಹೊರಗಡೆ ಕರೆದೊಯ್ದು ಪಾನಿಪೂರಿ, ಐಸ್ ಕ್ರೀಂ ಮತ್ತೊಂದೋ ಕೊಡಿಸಿ ಕರೆತರುತ್ತಿದ್ದ. "ಯಾಕೆ ಅನೂ, ನಿಂಗೆ ಐಸ್ ಕ್ರೀಂ ಅಂದ್ರೆ ಆಗ್ದಾ?'' ಎಂದು ರಮೇಶ ರೇಗಿಸಿದಾಗ, "ಇಲ್ಲ ಮಾಮ, ಅವಳಿಗೆ ತಿಂಡಿ ಕೊಡಿಸೋರು ಬೇರೇನೇ ಬರ್ತಾರಂತೆ,'' ಎಂದು ವಿನುತ, ಶ್ರೀದೇವಿ ರೇಗಿಸಿದಾಗ, "ಹೌದಾ,'' ಎಂದು ಇಷ್ಟಗಲ ಮುಖಮಾಡಿ ಆಶ್ಚರ್ಯದಿಂದ ನನ್ನನ್ನೇ ನೋಡಿದರೂ ಅವನ ಮುಖದಲ್ಲೆಲ್ಲೋ ನಿರಾಶೆಯ ಛಾಯೆ ಮೂಡಿದ್ದನ್ನು ಗುರುತಿಸಲಾರದವಳಾಗಿರಲಿಲ್ಲ.

ಆದರೂ ಅವನನ್ನು ನಿರಾಶೆಗೊಳಿಸಬಾರದೆಂದು ಕೆಲವು ಸಾರೆ ಅವನೊಡನೆ ಹೊರಗಡೆ ಹೋಗಿಬರುತ್ತಿದ್ದೆ. ಇದರ ಹಿಂದೆ ಅಮ್ಮನ ಕೈವಾಡವೂ ಇರುತ್ತಿತ್ತು. "ಏನ್ ಅನು, ಹೀಗೆ ಮಾಡ್ತಿ, ಅವನ ಕೆಲಸದ ಅವಾಂತರದಲ್ಲಿ ಬಿಡುವು ಮಾಡಿಕೊಂಡು ಸ್ವಲ್ಪಹೊತ್ತು ಹುಡುಗರ ಜೊತೆ ಕಾಲ ಕಳೆಯೋಣ ಅಂತ ಬಂದ್ರೆ ನೀನ್ಯಾಕೆ ಹೀಗಾಡಬೇಕು. ಅವನೇನು ದೂರದವನ? ನಿಮ್ಮ ಸೋದರತ್ತೆ ಮಗನಲ್ವಾ? ಇಷ್ಟಕ್ಕೂ ವಿನು, ಶ್ರೀದೇವಿ ಜೊತೆಗಿರೋದಿಲ್ವಾ?'' ಎನ್ನುತ್ತಿದ್ದುದರಿಂದ ಅವನೊಡನೆ ಹೋಗಿಬರುತ್ತಿದ್ದೆ.

ಆಗ ನಾನಿನ್ನೂ ಕೆಲಸಕ್ಕೆ ಸೇರಿರಲಿಲ್ಲ. ಓದು ಮುಗಿದಿದ್ದು ಫಲಿತಾಂಶ ಬಂದ ನಂತರ ಬಂದ ರಮೇಶ, "ಮುಂದೇನ್ಮಾಡ್ತಾಳಂತೆ ಅತ್ತೆ?'' ಎಂದು ಅಮ್ಮನೆದುರು ಕೇಳಿದ್ದ. "ಬೇಕಾದ್ರೆ ನಮ್ಮ ಕಂಪನಿಯಲ್ಲೇ ಹೇಳಿನೋಡ್ತೇನೆ'' ಎಂದಿದ್ದ. "ಬೇಡಪ್ಪ, ನಿಮ್ಮ ಕಂಪನಿ-ಅದೊಂದು ಕಂಪನೀನಾ? ಹೊತ್ತಿಲ್ಲ, ಗೊತ್ತಿಲ್ಲ. ನೀನು ದುಡಿಯುತ್ತಿರುವುದು ಸಾಲ್ದಾ! ಇನ್ನು ಅನೂ ಕೂಡಾ ಹೀಗೆ ದುಡೀಬೇಕಾ,'' ಎಂದು ಅಮ್ಮ ಅಂದದ್ದು ನನಗೆ ಒಳಗೊಳಗೇ ಸಂತೋಷವೆನಿಸಿದರೂ ರಮೇಶನಿಗಂತೂ ನಿರಾಸೆ ತರಿಸಿದ್ದು ಅವನ ಮುಖದಲ್ಲೇ ವ್ಯಕ್ತವಾಗಿತ್ತು. "ಹೋಗ್ಲಿಬಿಡಿ ಅತ್ತೆ, ನಮ್ಮ ಕಂಪನಿ ಬೇಡದಿದ್ರೆ ಬೇರೆಲ್ಲಾದ್ರೂ ಟ್ರೈ ಮಾಡ್ತೇನೆ,'' ಎಂದಿದ್ದ. ಇದರಿಂದ ನನಗೂ ಒಂದು ರೀತಿಯ ನೆಮ್ಮದಿ ಬಂದಿತ್ತು. ನಾಳೆ ಒಂದೇ ಕಡೆ ದುಡಿಯಲು ಪ್ರಾರಂಭಿಸಿದರೆ ಏನೋ ಒಂದು ರೀತಿಯ ಬಂಧನಕ್ಕೊಳಗಾಗಿ, ಅವನೊಡನೆ ಮದುವೆಯನ್ನು ನಿರಾಕರಿಸಿ ಬಿಡಲಾರದವಳಾಗಿ ಬಿಡುತ್ತೇನೆ

ಎನ್ನಿಸುತ್ತಿತ್ತು.

ಅಂದು ಸಂಜೆ ಮೂವರನ್ನೂ ಹೊರಗಡೆ ಕರೆದೊಯ್ದಿದ್ದ ವಿನು, ಶ್ರೀದೇವಿಯ ಸ್ನೇಹಿತ ರಾರೋ ಸಿಕ್ಕಿದರೆಂದು ಅವರಿಬ್ಬರೂ ಮಾತ ನಾಡುತ್ತಾ ನಿಂತಾಗ ವಿಧಿಯಿಲ್ಲದೆ ರಮೇಶ ನೊಡನೆ ಮಾತನಾಡಬೇಕಾಯಿತು. "ಯಾಕೆ ಅನು, ಒಂದು ರೀತಿ ಇದ್ದೀಯಲ್ಲಾ. ಮಾತೇ ಆಡೋಲ್ಲ. ನಾನು ನಿಮ್ಮನೆಗೆ ಬರೋದು, ಹೀಗೆ ಹೊರಗಡೆ ಕರೆದೊಯ್ಯೋದು ಇಷ್ಟವಿ ಲ್ಲದಿದ್ದರೆ ಹೇಳಿಬಿಡು. ಇನ್ನುಮುಂದೆ ಬರೋದೇ ಇಲ್ಲ," ಎಂದು ನೇರವಾಗಿ ಎದೆಗೆ ಗುಂಡಿಟ್ಟು ಹೊಡೆದಂತೆ ಹೇಳಿದ.

"ಇಲ್ಲ, ಹಾಗೇನಿಲ್ಲ," ಎಂದುತ್ತರಿಸಿ ಮುಖ ಕೆಳಗೆ ಹಾಕಿ ನಿಂತೆ. ಗಲ್ಲವನ್ನು ಹಿಡಿದೆತ್ತಿ, "ಅನು, ನೀನೊಪ್ಪಿದರೆ ನಾನು ನಿನ್ನನ್ನು ಸುಖವಾಗಿಟ್ಟುಕೊಳ್ಳಬಲ್ಲೆನೆಂಬ ಭರ ವಸೆ ಕೊಡಬಲ್ಲೆ. ಯೋಚಿಸಿ ಹೇಳು," ಎಂದುಸುರಿದ್ದ. ಅಷ್ಟರಲ್ಲಿ ವಿನು, ಶ್ರೀದೇವಿ ಬಂದಿದ್ದರಿಂದ ಹೊರಟೆವು. ಅಂದು ರಾತ್ರಿ ಒಂದೇ ಘೋರ್ಗರೆತ. ರಮೇಶ ಕೇಳಿದ್ದಕ್ಕೆ ಏನುತ್ತರಿಸುವುದು? ನನಗೆ ಅವನನ್ನು ತಿರಸ್ಕ ರಿಸಲು ಏನೊಂದು ಕಾರಣವಿಲ್ಲದಿದ್ದರೂ ಅದೇಕೋ ಅವನೊಡನೆ ಮದುವೆಗೆ ಮನಸ್ಸು ಒಡಂಬಡುತ್ತಿರಲಿಲ್ಲ. ಅವನಿದ್ದ ಕೆಲಸವೇ, ಊರೂರು ಸುತ್ತುತ್ತಾನೆಂಬ ಕಾರಣವೇ, ಇಲ್ಲ ಸಂಬಂಧದಲ್ಲಿ ಮದುವೆಯಾಗಬಾರದೆಂದೇ? ಈ ಯಾವ ಪ್ರಶ್ನೆಗೂ ನನ್ನಲ್ಲಿ ಉತ್ತರವಿರಲಿಲ್ಲ.

ಆದರೆ ಇದೇ ಮಾತನ್ನು ನನ್ನ ಅಮ್ಮ ಅಪ್ಪನ ಮುಂದೆ ಆಡಿದ್ದರೆ ಚೆನ್ನಾಗಿತ್ತೇನೋ ಎಂದು ಒಮ್ಮೊಮ್ಮೆ ಅನಿಸಿಬಿಡುತ್ತಿತ್ತು. ಅಷ್ಟ ರಲ್ಲಿ ಒಂದು ದಿನ ಇದ್ದಕ್ಕಿದ್ದಂತೆ ನಮ್ಮ ಏರಿಯಾದಲ್ಲಿದ್ದ ಯಾರದ್ದೋ ಮನೆ ಹುಡು ಕಿಕೊಂಡು ಬಂದಳು ಶಾರಿ. ಅವಳೂ ಕೂಡ ನಮ್ಮ ಆಫೀಸಿನ ಪಕ್ಕದ ಆಫೀಸಿನಲ್ಲೇ ಕೆಲಸ ಮಾಡುತ್ತಿದ್ದುದರಿಂದ ಕಾಫಿಗೋ ಮತ್ತೊಂ ದಕ್ಕೋ ಹೋದಾಗ ಭೇಟಿಯಾಗುತ್ತಿದ್ದೆವು. ಹಲೋ, ಹಲೋಯಿಂದ ಪ್ರಾರಂಭವಾದದ್ದು ಈಗ. 'ಏನೇ, ಹೋಗೆ, ಬಾರೆ'ವರೆಗೆ ತಲು ಪಿತ್ತು. ಅಂದು ಬಂದಾಗ, "ಯಾವುದಾದರೂ ಹುಡುಗನಿದ್ದರೆ ಹೇಳಮ್ಮ ಈ ಸಾರೆ ಮದುವೆ ಮಾಡಿಬಿಡೋಣ," ಎಂದು ಅಮ್ಮ ಅಂದದ್ದಕ್ಕೆ ಸರಿಯಾಗಿ, "ಅಯ್ಯೋ, ನನ್ನ ಗುರುತಿನವರು ಒಬ್ಬರಿದ್ದಾರೆ. ಬಹಳ ಒಳ್ಳೆಯವರು. ನಿಧಾನ ಸ್ಥರು. ವಿಚಾರಿಸು ಎಂದರೆ ವಿಚಾರಿಸುತ್ತೇನೆ," ಎಂದಿದ್ದಳು. ಹೀಗೆ ಹಲವಾರು ಜನ ಹೇಳಿ ಹೋಗಿದ್ದರಿಂದ ಇದೂ ಅದೇ ರೀತಿ ಅಂತ ಭಾವಿಸಿದ್ದೆ. ಆದರೆ ಒಂದು ಭಾನುವಾರ ಕರೆದುಕೊಂಡು ಬನ್ನಿ ಬೇಕಾದರೆ, ನಮ್ಮ ಮನೆಯಲ್ಲೇ ಭೇಟಿ ಮಾಡಿಸುತ್ತೇನೆ' ಎಂದಿ ದ್ದಳು ಶಾರಿ. ಚಂದ್ರುವನ್ನು ಶಾರಿಯ ಮನೆ ಯಲ್ಲಿ ನೋಡಿದ ನಂತರ ಮೂರು ದಿವಸ ಅಳೆದು ಸುರಿದು ನೋಡಿದೆ. ಸ್ಫುರದ್ರೂಪಿ ಯುವಕ, ಗುಂಗುರು ಕೂದಲು, ಕಣ್ಣಲ್ಲೇ ಸೆಳೆಯುವ ಗುಣ. ಏನೇ ಮಾಡ್ತೀಯಾ ಎಂದು ಆತ್ಮೀಯವಾಗಿ ಶಾರಿ ಕೇಳಿದಾಗ ಏನೊಂದೂ ಉತ್ತರಿಸದವಳಾಗಿದ್ದೆ. "ಅಲ್ವೇ ಶ್ರೀರಾಮಚಂದ್ರನಂತಹ ಹುಡುಗ, ಕೈ ತುಂಬ ಸಂಬಳ, ಹಳ್ಳಿಯಲ್ಲಿ ತಂದೆ-ತಾಯಿಗಳು ಇವನ ಅಣ್ಣನ ಮನೆಯಲ್ಲಿದ್ದಾರೆ. ಪಟ್ಟಣ ಕ್ಕಂತೂ ಬರೋಲ್ಲ. ಹೇಳೋರಿಲ್ಲ, ಕೇಳೋ ರಿಲ್ಲ, ರಾಣಿ ಇದ್ದಾಗೆ ಇರಬೋದು," ಎಂದು ಆಸೆ ಹುಟ್ಟಿಸಿದಳು.

ಮುಂದಿನ ಎರಡು ತಿಂಗಳಲ್ಲಿ ಮದುವೆ ಮುಗಿದೇಹೋಗಿತ್ತು. ನಾನು ರಮೇಶನಿಗೆ ಏನೊಂದೂ ಉತ್ತರವನ್ನೇ ಕೊಡದೆ ದೊಡ್ಡ ತಪ್ಪು ಮಾಡಿಬಿಟ್ಟೆನೆಂದು ಒಮ್ಮೊಮ್ಮೆ ಮನಸ್ಸಿ ನಲ್ಲಿ ಕುಟುಕುತ್ತಲೇ ಇತ್ತು. ಅಷ್ಟೊಂದು ಸಲಿಗೆಯಿಂದಿದ್ದವನಿಗೆ ಸೌಜನ್ಯಕ್ಕಾದರೂ ಉತ್ತರಿಸದೆ ಮೋಸ ಮಾಡಿದೆನಲ್ಲಾ ಎನಿಸು ತ್ತಿತ್ತು. ಊರೂರು ಸುತ್ತುವ ಕೆಲಸವಿದ್ದರೂ ಎಷ್ಟೋ ಬಾರಿ ಮನೆಗೆ ಬಂದುಹೋಗುತ್ತಿ ದ್ದವ ಮದುವೆಗೆ ಬಾರಲೇ ಇಲ್ಲ. ಥೇ, ಎಂಥ ಕೆಲಸ ಮಾಡಿಬಿಟ್ಟೆ! ಅವನಿಗೊಂದು ಮಾತು ಹೇಳಿ ಸಮಾಧಾನ ಮಾಡದೆ ಅನಾಗರಿಕಳಂತೆ

ವರ್ತಿಸಿದೆನಲ್ಲಾ ಎನಿಸಿತು.

ಮದುವೆಯಾಗಿ ಎರಡು ವರ್ಷ ಕಳೆದಿದ್ದರೂ ರಮೇಶ ಮದುವೆಯೇ ಆಗಿಲ್ಲವೆಂದು ತಿಳಿದು ಬೇಸರ ತರಿಸಿತ್ತು. ಆಗಾಗ್ಗೆ ಅಮ್ಮನ ಮನೆಗೆ ಹೋಗಿ ಬರುತ್ತಿರುತ್ತಾನೆ ಎಂದು ಕೇಳಿದ್ದರೂ ಒಂದು ಸಾರೆ ಕೂಡ ನಮ್ಮ ಮನೆಗೆ ಬಂದು ನೋಡಲಿಲ್ಲ. ಹೇಗೆ ಬಂದಾನು? ಯಾತಕ್ಕೋಸ್ಕರ ಬಂದಾನು?

ರಾತ್ರಿಯೆಲ್ಲಾ ಅತ್ತಿಂದಿತ್ತ ಹೊರಳಿದ್ದೇ ವಿನಾ ನಿದ್ರೆಯಂತೂ ಹತ್ತಿರವೂ ಸುಳಿಯಲಿಲ್ಲ. ಬೆಳಗಾಗೆದ್ದಾಗ ಕಣ್ಣೆಲ್ಲಾ ಉರಿ. ಕಣ್ಣುಗಳೆರಡೂ ಊದಿಕೊಂಡಹಾಗಿತ್ತು. ಊಟ, ತಿಂಡಿ, ಕೆಲಸ ಮುಗಿಸಿ ಆಫೀಸಿಗೆ ಹೊರಟದ್ದಾಗಿತ್ತು. ಆದರೂ ಮನಸ್ಸು ಕೆಟ್ಟುಹೋಗಿ ಚಂದ್ರುವಿನೊಡನೆ ಮಾತನಾಡಬೇಕೆನಿಸಲೇ ಇಲ್ಲ.

*

ಭಾನುವಾರದ ದಿನ ನನ್ನ ಸ್ನೇಹಿತರ ಮಗುವಿಗೆ ನಾಮಕರಣ. ಹೋಗಿ ಬರಬೇಕು, ಅಡಿಗೆ ಮಾಡಬೇಡವೆಂದರು. ಹೋಗಿಬನ್ನಿ ಎಂದು ಹೇಳಿ ಬಿಡಬೇಕೆನ್ನಿಸಿದರೂ, ನಾಲ್ಕಾರು ಜನರೊಡನೆ ಬೆರೆತಾಗಲಾದರೂ ಈ ವಿಕ್ಷಿಪ್ತತೆ ಕೊಂಚ ಕಡಿಮೆಯಾದೀತೇನೋ ಎನಿಸಿ ಜೊತೆಯಲ್ಲಿ ಹೊರಟೆ. ನಾಮಕರಣದ ಕಾರ್ಯಕ್ರಮ ಮುಗಿದು ಊಟವೂ ಆಯಿತು. ಅಷ್ಟರಲ್ಲಿ ಇವರ ಹಳೆಯ ದೋಸ್ತನೊಬ್ಬ ಬಂದನೆಂದು ಮಾತನಾಡುತ್ತಾ ಹೊರಗಡೆ ನಿಂತಿದ್ದರು. ಮಾತನಾಡುತ್ತಿದ್ದಾರಲ್ಲಾ ಎಂದು ಒಳಗಡೆಯೇ ಇದ್ದೆ. ಅಷ್ಟರಲ್ಲಿ ನಮ್ಮ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ರಜನಿ ಕೂಡ, ತಮ್ಮ ದೂರದ ಸಂಬಂಧದವರೇ ಎಂದು ಅವಳೂ ಅವಳ ಗಂಡನೂ ಬಂದಿದ್ದು, ಗಂಡನನ್ನು ಪರಿಚಯಿಸಿದಳು. ಅಷ್ಟರಲ್ಲಿ ಮಗು ಬಲೂನ್ ಬೇಕೆಂದು ಗಲಾಟೆ ಮಾಡಿತೆಂದು ರಜನಿ ಹೊರಗೆ ಕರೆದೊಯ್ದಳು. ರಜನಿ ಗಂಡನೊಬ್ಬನನ್ನೇ ಬಿಟ್ಟುಹೋಗಿದ್ದರಿಂದ ವಿಧಿಯಿಲ್ಲದೆ ಅವರೊಡನೆ ಮಾತನಾಡಬೇಕಾಯಿತು. ಎರಡು



ಮಾತನಾಡಿದ್ದೇನೋ ಇಲ್ಲವ್ವೋ, ಒಳಗೆ ಬಂದ ಇವರು "ಹೊರಡು" ಎಂದು ಹೊರಡಿಸಿದರು. ನನ್ನ ಕಲೀಗ್ ರಜನಿಯ ಯಜಮಾನರು ಎಂದು ಪರಿಚಯಿಸಿದೆ. ಮಾತನಾಡಿಸಿದರು. "ಬರ್ತೀವಿ" ಎಂದು ಹೇಳಿ ಹೊರಟರು. ದಾರಿಯಲ್ಲಿ ಏನೊಂದೂ ಮಾತನಾಡದೆ ಬಂದಾಗಲೇ ನನಗೆ ಸಂಶಯ ಬಂದಿತ್ತು.

ಬಾಗಿಲು ಬೀಗ ತೆಗೆಯುತ್ತಿದ್ದಂತೆ, "ನಿನಗೆ ಎಲ್ಲಿ ಹೋದ್ರೂ ನಿನ್ನನ್ನು ಮಾತನಾಡಿಸುವವರು ಅದು ಹೇಗೆ ಸಿಗುತ್ತಾರೋ. ಗುರುತು ಪರಿಚಯವಿಲ್ಲದವರನ್ನು ಯಾಕೆ ಮಾತನಾಡಿಸಿಕೊಂಡು ಹೋಗಬೇಕು? ರಜನಿ ನಿನ್ನ ಸ್ನೇಹಿತೆ ಇರಬಹುದು. ಆದರೆ ಅವಳ ಗಂಡನೊಡನೆ ಎಂಥ ಸಲಿಗೆ?" ಎಂದು ಪ್ರಾರಂಭಿಸಿದರು.

"ಅಲ್ರೀ, ಅವಳು ಮಗುವನ್ನು ಹೊರಗೆ ಕರೆದೊಯ್ದಿದ್ದಳು. ಪರಿಚಯಿಸಿದಾಗ ಮಾತನಾಡದೆ ಪೆಗ್ರಿ ಇರೋಕ್ಕಾಗುತ್ತೆ? ಅಷ್ಟೊಂದು ಅನಾಗರಿಕವಾಗಿ ವರ್ತಿಸಲಾದೀತೇನ್ರಿ?" ಎಂದೆ.

"ಹೌದೌದು, ಮೇಲೆ ಬಿದ್ದು ಮಾತನಾಡಿಸಿಕೊಂಡು ಹೋಗುವುದು ಮಹಾನಾಗರಿಕತೆಯ ಲಕ್ಷಣ ಅಲ್ವಾ?"

"ಛೀ, ಎಂಥ ಸಂಶಯದವರೂರೀ ನೀವು! ಹಾಗೆ ಸಂಶಯಿಸುವ ಹಾಗಿದ್ದರೆ ನನ್ನನ್ನು ಕರ್ಕೊಂಡು ಹೋಗಬೇಡಿ. ಮನೆಯಲ್ಲೇ ಬಿದ್ದಿರುತ್ತೇನೆ," ಎಂದು ನುಡಿದು, ರೂಮಿಗೆ ಹೋಗಿ ಹಾಸಿಗೆಯಲ್ಲುರುಳಿಕೊಂಡೆ.

ಹೀಗೆ ದಿನೇ ದಿನೇ ಸಂಶಯದ ಹುಳು ಅವರ ತಲೆಯಲ್ಲಿ ಹೊಕ್ಕು ಕೊರೆಯತೊಡಗುತ್ತಲೇ ಇತ್ತು. ಅಕ್ಕಪಕ್ಕದ ಮನೆಯವರೇನಾದರೂ ಬೀಗದ ಕೈಯನ್ನೋ, ಮತ್ತೊಂದನ್ನೋ ಕೊಟ್ಟು ಹೋಗಿ ತೆಗೆದುಕೊಳ್ಳಲು ಬಂದ ಗಂಡಸರೊಡನೆ ಎರಡು ಮಾತನಾಡಿಸಿದರೆ ಸಾಕು, ಇವರಿಗೆ ಎಲ್ಲಿಲ್ಲದ ಕೋಪ. ಅಕ್ಕಪಕ್ಕದವರೊಡನೆ ಏನಾದರೂ ವಿಚಾರಿಸಿದರೆ ಸಾಕು, ವೃಥಾ ಅಪವಾದ ಹೊರಿಸಲು ಕಾಯ್ದು ಕುಳಿತಿರುತ್ತಿದ್ದರು. ಒಂದೊಂದು ದಿನವನ್ನೂ ಯಾತನೆಯಲ್ಲೇ ಕಳೆಯಬೇಕಾಗಿದೆಯಲ್ಲಾ. ಇನ್ನು ಜೀವನ ಪೂರ್ತಿ ಈ ವ್ಯಕ್ತಿಯೊಡನೆ ಹೇಗೆ ತಾನೇ ಬಾಳುವುದು ಎನಿಸಿದಾಗ ಜೀವನವೇ ಬೇಸರ ಹುಟ್ಟಿಸುವಂತಾಗಿಬಿಡುತ್ತಿತ್ತು.

ಅಂದು ಆಫೀಸಿನಲ್ಲಿ ಬೆಳಗಿನಿಂದಲೂ ವಿಪರೀತ ಕೆಲಸ. ಮಧ್ಯಾಹ್ನ ಊಟ ಮಾಡಲು ಹೋದಾಗ, ಡಬ್ಬಿಯಲ್ಲಿ ತಂದಿದ್ದ ಅನ್ನ ಕೂಡ ಹಳಸಲು ವಾಸನೆ ಬಂದಂತಾಗಿ, ಕಡೆಗೆ ಅದನ್ನೂ ತಿನ್ನದೆ ಬಿಸಾಡಿ ಬಂದು, ಹಾಗೇ ಕುರ್ಚಿಗೊರಗಿ ಕುಳಿತಿದ್ದೆ. ತಿಂಡಿ ತಿಂದು ಬಂದ ಅಶೋಕ, "ಯಾಕೆ ಮೇಡಂ, ಹುಷಾರಿಲ್ವಾ," ಎಂದರು ಆತ್ಮೀಯವಾಗಿ. "ಇಲ್ಲ, ಹುಶಾರಾಗೇ ಇದ್ದೇನೆ. ಏಕೋ ಊಟ ಕೂಡಾ ಸೇರಲಿಲ್ಲ. ತಲೆಸಿಡಿತ ಬೇರೆ, ಬೆಳಗಿನಿಂದ ವಿಪರೀತ ಕೆಲಸ," ಎಂದೆ.

ಬನ್ನಿ ಕಾಫಿನಾದ್ರೂ ಕುಡಿದು ಬಂದರೆ ಸರಿಹೋದೀತೆಂದು ಕರೆದೊಯ್ದರು. "ಈ ಆತ್ಮೀಯತೆ ಚಂದ್ರುವಿನಲ್ಲಿ ಏಕೆ ಬರಡಾಗಿಬಿಟ್ಟಿದೆ? ರಮೇಶ ಹೇಳಿದಂತೆ ಅವನ ಕಂಪನಿಗೆ ಸೇರಿದ್ದರೆ ಇದೇ ರೀತಿ ರಮೇಶನೊಡನೆಯಾದರೂ ಆತ್ಮೀಯವಾಗಿರಬಹುದಾಗಿತ್ತೇನೋ"ಎಂದು ಕಾಫಿ ಕುಡಿದು ಹಿಂದಿರುಗುವುದರೊಳಗೆ ಇವರು ಬಂದು ಕುಳಿತಿರಬೇಕೆ!

"ಅಮ್ಮನಿಗೆ ಹುಷಾರಿಲ್ಲವೆಂದು ಟೆಲಿಗ್ರಾಂ ಬಂದಿದೆ. ನೀನು ಅಲ್ಲಿ ಇಲ್ಲಿ ಸಿಕ್ಕಿದವರೊಡನೆ ತಿರುಗುತ್ತಿದ್ದೀಯಾ," ಎಂದು ಪ್ರಾರಂಭಿಸಿದರು.

"ನೋಡಿ, ಇದು ಆಫೀಸು, ಮೆಲ್ಲಗೆ ಮಾತನಾಡಿ. ನಾನೇನೂ ಮಾಡಬಾರದ್ದು ಮಾಡಿಲ್ಲ. ಬೆಳಗಿನಿಂದಲೂ ಕೆಲಸದ ಒತ್ತಡ, ಊಟ ಕೂಡಾ ಸೇರಲಿಲ್ಲ. ತಲೆನೋವು ಬಂದು, ಕಾಫಿ ಕುಡಿದು ಬರೋಣವೆಂದು ಹೋಗಿದ್ದೆ. ಅಲ್ಲಿ ಅಶೋಕ್ ಸಿಕ್ಕಿದರು,"

ಎಂದೆ.

"ಸರಿ ಸರಿ ಹೊರಡು, ರಜ ಹೇಳಿ ಬಾ," ಎಂದರು. ಊರಿಗೆ ಹೋಗಿ ಇವರಮ್ಮನನ್ನು ಕರೆದುಕೊಂಡು ಬಂದು ಡಾಕ್ಟರಿಗೆ ತೋರಿಸಿದ್ದಾಗಿತ್ತು. ಔಷಧಿ ಬರೆದುಕೊಟ್ಟು ದಿನಂಪ್ರತಿ ಬಿಡದೆ ಮಾತ್ರೆಗಳನ್ನು ತೆಗೆದುಕೊಳ್ಳಲು ಸೂಚಿಸಿದರು. ಮಾತ್ರೆ ತಿಂದು ಎಷ್ಟು ದಿವಸಾಂತ ಇಲ್ಲಿ ಕುಳಿತಿರೋಣು, ಹಳ್ಳಿಗೇ ಹೋಗಿಬಿಡುತ್ತೇನೆಂದು ಹೊರಟೇಬಿಟ್ಟರು. ಇವರಮ್ಮ ಇರುವವರೆವಿಗೂ ಎಷ್ಟೊಂದು ಹೊಂದಿಕೊಂಡಿದ್ದರೆಂದರೆ ಈ ರೀತಿ ಮಾತು ಮಾತಿಗೂ ಸಂಶಯಿಸುತ್ತಿದ್ದ ವ್ಯಕ್ತಿ ಇವರೇ ಎಂಬ ಸಂಶಯ ಬರುವಂತಿದ್ದರು. ಅತ್ತೆ ಊರಿಗೆ ಹೋದ ನಂತರ ಪುನಃ ಯಥಾಪ್ರಕಾರ ಸಂಶಯದ ಹುಳು ಇವರ ತಲೆಹೊಕ್ಕು ತಿನ್ನತೊಡಗಿತು.

ಅಂದು ರಜನಿ ಕಚೇರಿಗೆ ಬಂದಿರಲಿಲ್ಲ. ಏಕೆ ಬಂದಿರಲಿಲ್ಲವೋ ವಿಚಾರಿಸಬೇಕಿತ್ತು ಎಂದು ಯೋಚಿಸುತ್ತಿರುವಾಗಲೇ ರಜನಿಯ ಗಂಡ ಎದುರಿಗೆ ಸಿಕ್ಕಬೇಕೆ! "ನೋಡಿ, ರಜನಿಗೆ ಹುಷಾರಿಲ್ಲ. ನನ್ನ ಬಿಡುವಿಲ್ಲದ ಕೆಲಸದಲ್ಲಿ ನಿಮ್ಮ ಆಫೀಸಿಗೆ ಫೋನ್ ಮಾಡಿ ತಿಳಿಸಲಾಗಲಿಲ್ಲ. ಮ್ಯಾನೇಜರ್‌ಗೆ ಕೊಂಚ ಹೇಳಿಬಿಡಿ. ರಜನಿ ನಿಮ್ಮ ಮನೆ ಗುರುತು ಹೇಳಿದ್ದರೂ ಹುಡುಕಲಾಗಲಿಲ್ಲ. ಸದ್ಯ ನೀವಿಲ್ಲೇ ಸಿಕ್ಕಿದ್ದು ಒಳ್ಳೆಯದಾಯಿತು," ಎಂದರು.

"ಬನ್ನಿ ಹಾಗಾದರೆ, ಮನೆಯನ್ನೊಮ್ಮೆ ನೋಡಿದ ಹಾಗಾಗುತ್ತೆ," ಎಂದು ಕರೆದೊಯ್ದೆ. ಹಿಂದೊಮ್ಮೆ ನಾಮಕರಣದ ಸಂದರ್ಭದಲ್ಲಿ ಪರಿಚಯಿಸಿದ್ದರೂ ಮತ್ತೊಮ್ಮೆ ಪರಿಚಯಿಸಿ ಕಾಫಿ ತರಲು ಒಳನಡೆದೆ. ಆತ ಚಂದ್ರುವಿನೊಡನೆ ಅದು ಇದು ಮಾತನಾಡುತ್ತಿದ್ದು ಕಾಫಿ ಕುಡಿದು ಹೊರಟುಹೋದರು.

ನಾನಂದುಕೊಂಡಂತೆ ರಜನಿ ಗಂಡನೊಡನೆ ಮಾತನಾಡುತ್ತಾ ಬಂದಿದ್ದರಿಂದ ಸಂಶಯಕ್ಕೊಳಗಾಗಿದ್ದಾರೆ ಎಂಬುದು ಅವರ ಬಿಗಿದ ಮುಖ ನೋಡೇ ಅರ್ಥ ಮಾಡಿಕೊಳ್ಳಬಹುದಾಗಿದ್ದರೂ ನಾನು ಏನೊಂದೂ ಮಾತನಾಡಲಿಲ್ಲ.

**ಗೆಜ್ಜೆಯ ಧರಿಸಿಯೂ**
**ಹೆಜ್ಜೆಯನಿಡದೆಯೆ**
**ಕೂತದ್ದಾಕೆ ಓ ಗೆಳತಿ?**
**ಬಂದಿಹೆ ನಾನಿದೋ ಸಂಗಾತಿ.**

• ವಿಭಾ

ರಾತ್ರಿ ಅಡಿಗೆಯನ್ನೂ ಮಾಡಲಿಲ್ಲ. ಇದ್ದುದನ್ನು ಅವರಿಗೆ ಬಡಿಸೋಣವೆಂದು ಊಟಕ್ಕೆಬ್ಬಿಸಿದೆ. ಊಟ ಮಾಡದೆ ಮಲಗಿದರು. ಬಾಳೆಹಣ್ಣು ತಿಂದು, ಹಾಲು ಕುಡಿದು ಮಲಗಿದೆ. ಬೆಳಿಗ್ಗೆ ಎದ್ದಾಗಲೂ ತಲೆಸಿಡಿತ ಹೋಗಿರಲೇ ಇಲ್ಲ. ಯಾವುದಾದರೊಂದು ನಿರ್ಧಾರ ತೆಗೆದುಕೊಳ್ಳಲೇಬೇಕೆನಿಸಿತ್ತು. ಎದ್ದು ಸ್ನಾನ ಮುಗಿಸಿ, ಅವರು ತೆಗೆದುಕೊಂಡು ಹೋದರೂ ಸರಿ, ಇಲ್ಲದಿದ್ದರೂ ಸರಿ ಎಂದು ತಿಂಡಿ, ಊಟ ಸಿದ್ಧಗೊಳಿಸಿಟ್ಟೆ. ತೆಗೆದುಕೊಂಡು ಹೊರಟರು.

ಎರಡು ವರ್ಷದ ಸಂಬಂಧವನ್ನು ಕಡಿದುಕೊಂಡು ಬಿಡಬೇಕೆಂದು ಮನಸ್ಸಿನಲ್ಲಿ ಒತ್ತತೊಡಗಿತು. ಆದರೂ ಅದೇಕೋ ಮನಸ್ಸು ಹಿಂಜರಿಯತೊಡಗಿತು. ಆದರೆ ಅವರ ಈ ಸಂಶಯ ಪ್ರವೃತ್ತಿಯನ್ನು ನೆನೆದಾಗ ಜೀವನಪೂರ್ತಿ ಅವರೊಡನೆ ಏಗುವುದು ದುಸ್ಸಾಹಸದ ಕೆಲಸವೇ ಎನಿಸಿದಾಗ ಅನ್ಯಮಾರ್ಗವಿಲ್ಲದೆ ನಿರ್ಧರಿಸಲೇಬೇಕಿತ್ತು. ಆದರೆ ಮುಖತಃ ನಿರ್ಧಾರ ತಿಳಿಸುವುದಕ್ಕಿಂತ ಪತ್ರ ಬರೆದಿಡುವುದೇ ಸರಿ ಎನಿಸಿದಾಗ ಪತ್ರ ಬರೆಯತೊಡಗಿದ್ದೆ:

"ಮದುವೆಗೆ ಮುಂಚೆ ಶಾರಿಯ ಮನೆಯಲ್ಲಿ ನಿಮ್ಮನ್ನು ಮೊಟ್ಟ ಮೊದಲು ನೋಡಿದಾಗ ಯಾವ ನಿರ್ಧಾರಕ್ಕೂ ಬಾರದೆ

ಡೋಲಾಯಮಾನ ಸ್ಥಿತಿಯಲ್ಲಿದ್ದಾಗ 'ಶ್ರೀರಾಮಚಂದ್ರನಂಥವ ಒಪ್ಪಿಕೊಳ್ಳಿ' ಎಂದಿದ್ದಳು ಶಾರಿ. ಹೌದು, ನನಗೆ ಬೇಕಾದ್ದು ಸಂಪೂರ್ಣವಾಗಿ ಪ್ರೀತಿಸುವ ಶ್ರೀರಾಮಚಂದ್ರನಂಥವನೇ ವಿನಾ ಸಂಶಯಿಸುವ ಶ್ರೀರಾಮಚಂದ್ರನಲ್ಲ. ಅಗ್ನಿದಿವ್ಯೆಯಾದ ಸೀತೆಯಂತೆ ನಾನೆಂದೂ ಅಗ್ನಿಪರೀಕ್ಷೆಗೊಳಪಡಲಾರೆ. ಇಬ್ಬರದೂ ಕೂಡದ ಹಾದಿಯ ಪಯಣ. ಸಂಶಯಿಸುವ ಶ್ರೀರಾಮಚಂದ್ರನ ನೆರಳಲ್ಲಿ ಬಾಳಲಾರೆನೆನಿಸಿಬಿಟ್ಟಿದೆ. ಅಗ್ನಿದಿವ್ಯೆಯಾಗಿ ಬರುವಂತಹ ಹೆಂಡತಿ ಸಿಕ್ಕರೆ ನೀವು ಪುನಃ ಮದುವೆಯಾಗಲು ನನ್ನ ಅಭ್ಯಂತರವೇನಿಲ್ಲ. ಸಂಶಯಿಸಲ್ಪಟ್ಟ ಶ್ರೀರಾಮಚಂದ್ರ ಸೀತೆಯನ್ನು ಹೊರಗಟ್ಟಿದರೆ, ಇಲ್ಲಿ ನಾನೇ ಸ್ವಇಚ್ಛೆಯಿಂದ ನಿರ್ಗಮಿಸುತ್ತಿದ್ದೇನೆ. ನಮ್ಮಿಬ್ಬರದು ಧ್ರುವಮಿಲನ" ಎಂದು ಪತ್ರ ಬರೆದು ಟೇಬಲ್ಲಿನ ಮೇಲಿಟ್ಟಳು. ಮನೆಯನ್ನೆಲ್ಲಾ ಒಮ್ಮೆ ನೋಡಿ ಕಣ್ಣಲ್ಲಿ ತುಂಬಿಕೊಂಡು ಹೊರಬಿದ್ದಳು.

ಸೂಟ್‌ಕೇಸ್ ಹಿಡಿದು ನಡೆಯುತ್ತಲೇ ಇದ್ದಳು. ಸೂಟ್‌ಕೇಸಿನ ಭಾರ ಒಂದು ಕಡೆಗೇ ಜಗ್ಗುತ್ತಿತ್ತು. ಆದರೂ ಕಾಲೆಳೆಯುತ್ತಾ ನಡೆಯುತ್ತಾ ದೂರದಲ್ಲಿ ಬರುತ್ತಿದ್ದ ವ್ಯಕ್ತಿಯನ್ನೇ ದಿಟ್ಟಿಸಿದಳು. ಪರಿಚಿತ ನಡಿಗೆ. ಹತ್ತಿರ ಹತ್ತಿರ ಬಂದಾಗ ದಿಗ್ಭ್ರಾಂತಳಾಗಿಬಿಟ್ಟಳು. ಈ ಸಮಯದಲ್ಲಿ... ಇಲ್ಲಿ...? ಎಂದು ಆಶ್ಚರ್ಯದಿಂದ ಹತ್ತಿರಬಂದ ವ್ಯಕ್ತಿಯನ್ನೇ ದಿಟ್ಟಿಸಿದಳು. ಬಹುಶಃ ಅನುವಿನ ಸ್ಥಿತಿ ಅವನ ಅರಿವಿಗೆ ಬಂದಿರಬಹುದು. ಅರೆಗಳಿಗೆ ಅನುವನ್ನು ದಿಟ್ಟಿಸಿದ ಆತ ಸೂಟ್‌ಕೇಸನ್ನು ಅವಳ ಕೈಯಿಂದ ತೆಗೆದುಕೊಂಡ. ರಮೇಶನ ಹಿಂದೆ ಅನು ಹೆಜ್ಜೆ ಹಾಕತೊಡಗಿದಳು.

★








# ರಾ.ಶಿ.: ಒಂದು ನೆನಹು

## ಅವರದು ಆತ್ಮಪರೂಪದ ಅದ್ಭುತ ವ್ಯಕ್ತಿತ್ವ

• ಅರುಣಾ ಆರ್. ಕಾರಂತ

ರಾ.ಶಿ. ವೃತ್ತಿಯಲ್ಲಿ ಮಾತ್ರ ವೈದ್ಯರಾಗಿರಲಿಲ್ಲ. ಬದುಕಿನುದ್ದಕ್ಕೂ ನಿಜವಾದ ವೈದ್ಯರೆನ್ನಿಸಿ ತಮ್ಮ ಬಳಿ ಬಂದ ರೋಗಿಗಳಿಗೆ ಔಷಧ ಅನುಪಾನ ನೀಡಿ ಅವರನ್ನು ಆರೋಗ್ಯವಂತರನ್ನಾಗಿಸುವುದರ ಜೊತೆಗೆ ತಮ್ಮ ಬಳಿ ಬಂದ ಅದೆಷ್ಟೋ ನೊಂದ ಜೀವಿಗಳ ಮನಸ್ಸಿಗೆ ಸಾಂತ್ವನವನ್ನು ನೀಡಿ ಅವರ ಬದುಕಿಗೆ ಹೊಸ ಚೈತನ್ಯವನ್ನು ನೀಡಿದವರು. ಯಾರೇ ಆಗಲಿ, ಯಾವುದೇ ಹೊತ್ತಿನಲ್ಲಿ ಬಂದರೂ ರೋಗಿಯನ್ನು ನೋಡಲು ಆಗಿಂದಾಗ ಹೊರಟುಬಿಡುವ ಜಾಯಮಾನ ರಾ.ಶಿ.ಯವರದು. ಒಮ್ಮೆ ಜ್ವರದಿಂದ ಸುಸ್ತಾಗಿ ನಡೆಯಲೂ ಆಗದ ಪರಿಸ್ಥಿತಿ ರಾ.ಶಿ.ಯವರಿಗೆ ಇದ್ದಾಗ ಡಿಫ್ತೀರಿಯಾದಿಂದ ಬಳಲುತ್ತಿದ್ದ ಮಗುವಿನ ಬಡತಾಯಿ ಅವರನ್ನು ಕರೆಯಲು ಬಂದಳು. ಆಗ ಅದೇ ಸ್ಥಿತಿಯಲ್ಲಿ ಹೊರಟು ಮಗುವನ್ನು ಪರೀಕ್ಷಿಸಿ ಆಳಿನೊಂದಿಗೆ ವಿಕ್ಟೋರಿಯಾ ಆಸ್ಪತ್ರೆಗೆ ಕಳಿಸಿ ಮಕ್ಕಳ ವಿಭಾಗಕ್ಕೆ ಸೇರಿಸುವ ವ್ಯವಸ್ಥೆ ಮಾಡಿದರು. ತಮಗೆ ಎಷ್ಟೇ ಕಷ್ಟವಾದರೂ ಬೇರೆಯವರಿಗೆ ಕಷ್ಟ ಎಂದಾಗ ಮನಃಪೂರ್ವಕವಾಗಿ ಅವರ ನೆರವಿಗೆ ನಿಲ್ಲಬೇಕು ಎನ್ನುತ್ತಿದ್ದರು ಅವರು. ರಾ.ಶಿ.ಯವರ ಸ್ವಭಾವವೇ ಹಾಗೆ. ಮನೆಗೆ ಅತಿಥಿಗಳು ಬಂದಾಗ ಅವರ ಡ್ರೈವರಿಗಾಗಿ ಮೊದಲು ಊಟವಾಗಬೇಕು. ಮನೆಯಲ್ಲಿ ಆಳುಗಳನ್ನು 'ಅಪ್ಪಾ', 'ಅಣ್ಣಾ' ಎಂದೆ ಕರೆಯುತ್ತಿದ್ದರು ರಾ.ಶಿ.

ಇಂತಹ ಕೋಮಲ ಹೃದಯಲ್ಲಿಯೂ ನಗು, ಹಾಸ್ಯ ಪ್ರಧಾನ ಪುಷ್ಪವಾಗಿ ಅರಳಿತು. ನಿಜ ಜೀವನದಲ್ಲಿ ರಾ.ಶಿ.ಯವರ ನಡೆ ಆದರ್ಶನೀಯ. ನುಡಿ ಸರಸಪೂರ್ಣ. ತಿಳಿಹಾಸ್ಯ ಅವರ ಶೈಲಿ. ಬೇರೆಯವರನ್ನು ಚುಚ್ಚಿ ನೋಯಿಸುವುದಲ್ಲ. 'ಹಾಸ್ಯ' ಅಂದರೆ 'subtle' ನಲ್ಲಿಯ 'b'ನಂತೆ ಎಂದು ಒಮ್ಮೆ ದಾಶರಥಿ ದೀಕ್ಷಿತರ ಬಳಿ ಹೇಳುತ್ತಿದ್ದರು. ಅವರು ಮಜ್ಜಿಗೆಯ ಮೇಲೆ ತೇಲಿಬರುವ ಬೆಣ್ಣೆಯಂತೆ ಹೇಳುವ ಮಾತಿನಲ್ಲಿ ಹಾಸ್ಯ ಗೌಣವಾಗಿದ್ದು ಮೆಲುನಗೆ ತರಬೇಕು ಎನ್ನುತ್ತಿದ್ದರು. ಒಮ್ಮೆ ಸಭೆಯಲ್ಲಿ "ನನ್ನ ಹೆಸರು ಎಂ. ಶಿವರಾಂ ಅಲ್ಲ, ಯಮ ಶಿವರಾಂ. ಡಾಕ್ಟರಾಗಿ ಅವನ ಸೇವೆ ಮಾಡಿದೀನಿ" ಎಂದರಂತೆ. ಮನೆಯವರೊಡನೆಯೂ ಅಷ್ಟೆ. ಒಮ್ಮೆ ಅವರ ಶ್ರೀಮತಿಯವರು ಊರಿಗೆ ಹೊರಟಿದ್ದರು. ಆಗ ರಾ.ಶಿ.ಯವರು "ನೀನೇನೂ ಯೋಚನೆ ಮಾಡಬೇಡ. ನಾನು ಹೆಣ್ಣುಮಕ್ಕಳು ಅಡಿಗೆ ಮಾಡ್ಕೋತೀವಿ. ಕೂದಲನ್ನು ಯಾವಾಗ ಹಾಕ್ಬೇಕು ಅನ್ನೋದನ್ನು ಮಾತ್ರ ಹೇಳಿಬಿಟ್ಟು ಹೋಗು" ಎಂದುಬಿಡಬೇಕೆ?

ಬರಹಗಾರರಾಗಿ ರಾ.ಶಿ.ಯವರಿಗೆ ಅನೇಕ ಹಿರಿಯ ಸಾಹಿತಿಗಳ ಸ್ನೇಹ ನಿಕಟ ಬಾಂಧವ್ಯಗಳು ಲಭಿಸಿದವು. ಶ್ರೀರಂಗ, ಜಿ.ಪಿ. ರಾಜರತ್ನಂ, ಡಿ.ವಿ.ಜಿ., ಬಿ. ಪುಟ್ಟಸ್ವಾಮಯ್ಯ ಇವರೆಲ್ಲ ರಾ.ಶಿ.ಯವರ ಸ್ನೇಹಿತರು. ಶಿವರಾಮ ಕಾರಂತ, ದ.ರಾ. ಬೇಂದ್ರೆ ಇವರಿಗೆ ಆತ್ಮೀಯರು. "ಹುಟ್ಟಿದ ಮೇಲೆ ಋಣಮುಕ್ತರಾಗದೆ ಹೋಗಬಾರದು. ಇದಕ್ಕೊಂದು ಅಪವಾದ ಸ್ನೇಹ ಋಣ. ಸ್ನೇಹದ ಒಲವಿನ ಋಣ ತೀರಿಸಬಲ್ಲ ಋಣವಲ್ಲ" ಅನ್ನುತ್ತಿದ್ದರು ರಾ.ಶಿ. ನಿಷ್ಕಪಟ ಸ್ನೇಹ ಅವರನ್ನು ಆಕರ್ಷಿಸಿತ್ತು.

"ಕಲೆಗಳಲ್ಲಿ ಪರಮಕಲೆ ಜೀವನದ ಲಲಿತಕಲೆ. ಎಲ್ಲದರಲ್ಲೂ ಸ್ವಂತಿಕೆ ಇರಬೇಕು. ಯೋಚಿಸಿ ವಿಮರ್ಶಿಸಿ ವಿವೇಚನೆಯಿಂದ ಮಾಡಿ. ಒಬ್ಬರು ಮಾಡಿದರೆಂದು ಕಣ್ಣು ಮುಚ್ಚಿಕೊಂಡು ಏನೂ ಮಾಡಬೇಡಿ. ತೋಚಲೇ ಇಲ್ಲ, ಹೊಳೆಯಲೇ ಇಲ್ಲ ಎನ್ನುವುದಕ್ಕೆ ಅರ್ಥವಿಲ್ಲ" ಎನ್ನುತ್ತಿದ್ದರು ರಾ.ಶಿ. ಅವರ ಆತ್ಮೀಯ ವ್ಯಕ್ತಿತ್ವ, ಹೇಳಬೇಕಾದುದನ್ನು ನೇರವಾಗಿ ಮನಮುಟ್ಟುವಂತೆ ಹೇಳುವ ಕೌಶಲ, ಅನುಭವಪೂರ್ಣ, ಅನುಕಂಪಪೂರ್ಣ ನುಡಿ ಅಪರಿಚಿತರಿಗೂ ಅವರಲ್ಲಿ ಆತ್ಮೀಯತೆಯನ್ನು ಮೂಡಿಸುತ್ತಿತ್ತು.

ಕಾಲೇಜಿನಲ್ಲಿರುವಾಗ ಅವರು ಓದುತ್ತಿದ್ದ 'ಪಂಚ್' ಎಂಬ ಇಂಗ್ಲಿಷ್ ಹಾಸ್ಯ ಪತ್ರಿಕೆ ರಾ.ಶಿ.ಯವರಿಗೆ ಹಾಸ್ಯ ಸಾಹಿತ್ಯದಲ್ಲಿ ಅಭಿರುಚಿ ಬೆಳೆಸಿತು. ಮುಂದೆ ಕೈಲಾಸಂ ಅವರ ಸಂಪರ್ಕ, ನಾ. ಕಸ್ತೂರಿಯವರ ಸಹಯೋಗ 'ಕೊರವಂಜಿ' ಹಾಸ್ಯಪತ್ರಿಕೆಯ ಉದಯಕ್ಕೆ ಪ್ರೇರಕವಾಯಿತು. ಅದರಲ್ಲಿಯ ರಾ.ಶಿ.ಯವರ 'ಕುಹಕಿಡಿಗಳು' ಮತ್ತು 'ಉರಿಗಾಳು' ಅಂಕಣಗಳು ಈಗಲೂ ನೂತನವೆನ್ನಿಸುವ ಮಟ್ಟಿಗೆ ಚೇತೋಹಾರಿಯಾಗಿವೆ. ಮನಕ್ಕೆ ಹಾಸ್ಯದ ತಂಪು ಉಣ್ಣಿಸುತ್ತಿವೆ.

"ಕೊರವಂಜಿ" ಪತ್ರಿಕೆಯಿಂದಲೇ ಆರ್.ಕೆ. ಲಕ್ಷ್ಮಣರಂತಹ ವ್ಯಂಗ್ಯಚಿತ್ರಕಾರರು ಟಿ. ಸುನಂದಮ್ಮ ಅ.ರಾ.ಸೆ., ರಾಮಿ, ದಾಶರಥಿ ದೀಕ್ಷಿತ, ಕೇಫ, ಬಿ.ಆರ್. ನಾರಾಯಣ ಅಯ್ಯಂಗಾರ್ ಮುಂತಾದ ಹಾಸ್ಯ ಲೇಖಕರು ಬೆಳಕಿಗೆ ಬಂದರು. ಅವರಿಂದಾಗಿಯೇ ಹಾಸ್ಯ ಲೇಖಕರ ಬಳಗವೇ ಬೆಳೆಯಿತು. ಕೊರವಂಜಿಯ ಲೇಖಕರ ಬಳಗದಲ್ಲಿ ಶಿವರಾಮ ಕಾರಂತರು, ಶ್ರೀರಂಗ, ಜಿ.ಪಿ. ರಾಜರತ್ನಂ, ಟಿ.ಎಸ್.ಆರ್. ಮುಂತಾದ ಮಹನೀಯರು ಸೇರಿದ್ದರೆಂದರೆ ಆ ಪತ್ರಿಕೆಯ ಹಿರಿಮೆ ವೇದ್ಯವಾಗುತ್ತದೆ. 'ಕೊರವಂಜಿ'ಯಲ್ಲಿ ರಾ.ಶಿ. ಸೃಷ್ಟಿಸಿದ ಪಾತ್ರಗಳು ಅಪಾರ. ಸಮಾಜದ ಓರೆಕೋರೆಗಳಿಗೆ ರಾ.ಶಿ. ಅವರು ತಮ್ಮದೇ ಆದ ತಿಳಿಹಾಸ್ಯದ ಲೇಪನವಿತ್ತು 'ಕೊರವಾವಲೋಕನ'ದಲ್ಲಿ ಕೊರವನಾಗಿ ನೋಡಿಕೊಳ್ಳುತ್ತಿದ್ದರು. ಏರುಪೇರಾದ ಮೌಲ್ಯಗಳನ್ನು ನಗುವಿನಲುಗಿನಿಂದಲೇ ಕಣ್ಣ ಮುಂದಿಡುವ ಚಾಕಚಕ್ಯ ರಾ.ಶಿ.ಯವರದು.

ಅವರ ವಿಶೇಷ ಮುತುವರ್ಜಿಯ ಫಲವಾಗಿ ೧೯೫೫ರಲ್ಲಿ ಬೆಂಗಳೂರು ಮೆಡಿಕಲ್ ಕಾಲೇಜ್ ಜನ್ಮತಾಳಿತು.

ಹಾಸ್ಯ ಲೇಖನವಲ್ಲದೆ ರಾ.ಶಿ.ಯವರು ಬೆಳೆಸಿಕೊಂಡ ಆಸಕ್ತಿಯ ವಿಷಯಗಳು ವಿಜ್ಞಾನ ಮತ್ತು ಆಧ್ಯಾತ್ಮ ಎರಡೂ ವಿರುದ್ಧ ಮುಖದವುಗಳಾದರೂ ಆ ಕ್ಷೇತ್ರಗಳು ರಾ.ಶಿ.ಯವರ ಆಸಕ್ತಿಗೆ ತೊಡಕಾಗಲಿಲ್ಲ. ದೈಹಿಕ ಆರೋಗ್ಯ ಮತ್ತು ಮಾನಸಿಕ ಆರೋಗ್ಯಕ್ಕೆ ಸಂಬಂಧಿಸಿದಂತೆ ರಾ.ಶಿ.ಯವರು 'ಆದರ್ಶ ಆರೋಗ್ಯ' 'ನಮ್ಮ ಅಡಿಗೆ ಪಥ್ಯದ ಊಟ', 'ಅಲರ್ಜಿ', 'ಮನೋನಂದನ', 'ಭಯ-ಸರಳ ವಿಶ್ಲೇಷಣೆ', 'ಮನಮಂಥನ' ಮುಂತಾದ ಪುಸ್ತಕಗಳನ್ನು ಬರೆದರು.

ಮನುಕುಲದ ಉಗಮವಾದಂದಿನಿಂದ ಮನಸ್ಸಿನ ವಿಕಾಸ, ಆ ಹಂತದಲ್ಲಿ ಅದು ತನ್ನಲ್ಲಿ ಮೈಗೂಡಿಸಿಕೊಂಡಂತಹ ಸ್ಮೃತಿಗಳು ಇವುಗಳ ಬಗೆಗೆ ರಾ.ಶಿ.ಯವರಿಗಿದ್ದ ಕುತೂಹಲ ಆಸಕ್ತಿ, ಸನಾತನ ವೇದ, ಉಪನಿಷತ್ತು, ಪತಂಜಲಿ ಯೋಗಸೂತ್ರಗಳ ಬಗೆಗೂ ಇತ್ತು. ಹಾಗೆಂದೇ ಸನಾತನ ಧರ್ಮ ಗ್ರಂಥಗಳೊಂದಿಗೆ ಪಾಶ್ಚಾತ್ಯ

ಮೇಧಾವಿಗಳ ವಿಚಾರಗಳನ್ನು ಅರಗಿಸಿಕೊಂಡು ಅದನ್ನು ಜನಸಾಮಾನ್ಯರಿಗೆ ಸುಲಭ ಗ್ರಾಹ್ಯವಾಗುವಂತೆ 'ಮನನ' ಮತ್ತು 'ಮೃಗಶಿರ' ಎಂಬ ಹೊತ್ತಿಗೆಗಳನ್ನವರು ಬರೆದು ಪ್ರಕಟಿಸಿದರು.

ಮನೋದೈಹಿಕ ಬೇನೆಗಳ ಬಗೆಗೆ ಆಳವಾದ ಅಭ್ಯಾಸ 'ಮನಮಂಥನ'ದಲ್ಲಿದೆ. ಅದಕ್ಕೂ ಮುಂಚೆ 'ಮನೋನಂದನ' ಬಂತು. 'ವಿಚಾರಪರ ಮನಸ್ಸು' 'ಮಡಕೆಯಲ್ಲಿಯ ಮೊಸರು' 'ಇಗೋ ಶಕ್ತಿಯೇ ಕಲ್ಪನೆಯ ಕಡೆಗೋಲು', 'ಇಡ್ ಮತ್ತು ಸೂಪರ್ ಇಗೋಗಳು'. 'ಎರಡೂ ಕಡೆಯ ಹಗ್ಗಗಳು', 'ಪರಿಸರದ ವಾಸ್ತವಿಕತೆಯೇ ಮಡಕೆ'. ಇದು ರಾ.ಶಿ.ಯವರ ಮನಮಂಥನದ ಕಲ್ಪನೆ. 'ಮನಮಂಥನ'ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿತು (೧೯೮೩).

'ಮೃಗಶಿರ'ದಲ್ಲಿ ನಾಗರಿಕ ಮನುಷ್ಯನಲ್ಲಿ ಪ್ರಾಣಿ ಸಹಜ ನಡವಳಿಕೆಯ ಹೊಳಹಿರುವುದರ ಚಿತ್ರಣವಿದೆ. ಕುಂಟಹುಲಿ ನರಭಕ್ಷಕನಾಗುವಂತೆ ಮುದುಕಿ ಬೋರವ್ವ ತನ್ನ ಸೊಸೆ ನಿಂಗಿಯ 'ಮನಭಕ್ಷಣ' ಮಾಡುವುದು 'ಮೃಗಶಿರ'ದಲ್ಲಿಯ ಒಂದು ಸಣ್ಣ ಕಥೆ 'ಕುಂಟಕಾಲು ತುಂಟ ಮನಸು'ನ ಕಥಾವಸ್ತು. 'ಮನನ' ವಿಶಿಷ್ಟ ಪ್ರಬಂಧಗಳ ಸಂಕಲನ. ಮನಸ್ಸಿಗೆ ತಳಮಳವುಂಟಾದಾಗ ಆತ್ಮವು ತಾತ್ಕಾಲಿಕವಾಗಿ ನಗೆಯ ಮೂಲಕವಾಗಿ ಸಮಾಧಾನ ಪಡೆಯುತ್ತದೆ. ಇದನ್ನೇ ಥಾಮಸ್ ಮಾನ್ ಆತ್ಮದ ನಗೆಕಿರಣವೆಂದದ್ದು. ಇದು 'ಮನನ'ದಲ್ಲಿ ರಾ.ಶಿ.ಯವರ ವಿಶ್ಲೇಷಣೆ.

ಋಷಿಗಳು ಸಾವಿರಾರು ವರ್ಷಗಳ ಹಿಂದೆ ಬಳಸುತ್ತಿದ್ದ 'ತ್ರುತಿ' ಎಂಬ ಅಳತೆಗೆ ಹೋಲಿಸಿದರೆ ೩೩೭೫೦ ತ್ರುತಿಗಳಿಗೆ ಒಂದು ಸೆಕೆಂಡ್ ಎಂದು ತಿಳಿದುಬರುತ್ತದೆ. ರಾಸಾಯನಿಕ ಪ್ರಕ್ರಿಯೆಯೊಂದರಲ್ಲಿ 'ಫ್ರೀರ್‍ಯಾಡಿಕಲ್' ಎಂಬ ವಸ್ತು ವಿಶೇಷ ಸೆಕೆಂಡಿನ ಮೂರು ಸಾವಿರ ಭಾಗದಲ್ಲಿ ಒಂದು ಭಾಗದಷ್ಟು ಕಾಲ ಮಾತ್ರ ಹಳದಿಯ ಜ್ವಾಲೆಯಾಗಿ ಪ್ರಜ್ವಲಿಸಿ ನಾಶವಾಗುವುದನ್ನು ಅಮೆರಿಕದ ವಿಜ್ಞಾನಿಯೊಬ್ಬ ಕಂಡುಹಿಡಿದ. ಅತ್ಯಂತ ನಶ್ವರವಾದ ವಸ್ತುವಿನಲ್ಲಿಯೂ ಅವಿನಾಶಿಯಾದ ಅಂಶವಿದೆಯೆಂಬ ಋಷಿಗಳ ಪ್ರತಿಪಾದನೆ, ಕೆಲವರಿಗಾದರೂ ಚಿಂತನೆಗೆ ಹಚ್ಚೀತು ಎಂಬುದು ರಾ.ಶಿ.ಯವರ ಆಶಯ 'ಮನನ'ದಲ್ಲಿ.

ಕಾಲದಲ್ಲಿ ಕಾಲಭೈರವನು ದಿಕ್ ಅಂಬರನಂತೆ. ರಾ.ಶಿ.ಯವರು "ಕಾಲ ಅಂದರೆ Timeಅನ್ನು ದಿಕ್ ಅಂಬರ ಅಂದರೆ space ಅನ್ನು ಹೊದ್ದುಕೊಂಡವನು; ಆದ್ದರಿಂದ ಇವೆರಡೂ ಅವಿಚ್ಛಿನ್ನ. ಅದನ್ನೇ ಆಧುನಿಕ ವಿಜ್ಞಾನಶಾಸ್ತ್ರಜ್ಞರು Time Space Continuum ಎಂದದ್ದು" ಎಂದಿದ್ದಾರೆ.

Ananda An Experience: Ananda and the three Acharyas ಮತ್ತು ಸಾಕ್ಷಿ, ಸಂಕಲಿಕೆ, ರಾ.ಶಿ.ಯವರ 'ಆನಂದ'ದ ಬಗೆಗಿನ ಕುತೂಹಲವನ್ನು ತಣಿಸಿವೆ. "ಆನಂದದ ಕೇಂದ್ರಗಳನ್ನು ಸ್ವಪ್ರಚೋದನೆಯಿಂದ ಉದ್ರೇಕಿಸಲು ಧ್ಯಾನ-ಧಾರಣಗಳು ಸಹಾಯಕ" ಎನ್ನುತ್ತಾರೆ ರಾ.ಶಿ.

*ಮನ್ಮಥನು ನಿಮಗೆಲ್ಲ ಸುಂದರವ ತೋರಿ*
*ಮನಮಥಿಸಿ ಸತ್ಯವನು ದರ್ಶಿಸುತಿರಲಿ*

ಮನುಷ್ಯನ ಬಾಳಿನಗುರಿ ಆನಂದ. ಅದನ್ನು ಪಡೆವ ಸಾಧನ ಅವನಲ್ಲಿಯೇ ಇದೆ ಎನ್ನುತ್ತಾರೆ ರಾ.ಶಿ.

ಹೀಗೆ 'ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು,ಕಲ್ಲಾಗು ಕಷ್ಟಗಳ ಮಳೆಯ ವಿಧಿಸುರಿಯೆಬೆಲ್ಲ ಸಕ್ಕರೆಯಾಗು ದೀನದುರ್ಬಲರಿಂಗೆಎಲ್ಲರೊಳಗೊಂದಾಗು...' ಎಂಬ ಡಿವಿಜಿಯವರ ಹರಕೆಯನ್ನು ಮೈಗೂಡಿಸಿಕೊಂಡು ರಾ.ಶಿ.ಯವರನ್ನು ನೆನೆಯುವುದು ಒಂದು ರೋಮಾಂಚಕ ಸಂಭ್ರಮದ ಅನುಭವವೆನ್ನಿಸುತ್ತದೆ.



# ಚಕ್ರ ಹಿಡಿದ ಚಾಲಕರೇಕೆ ನಿದ್ದೆ ಹೋಗುತ್ತಾರೆ?

ಅದರ ಕಾರಣ ತಿಳಿದ ಮೇಲೆ ನೀವು ಎಚ್ಚರಗೊಂಡೇ ಪ್ರಯಾಣಿಸುವಿರಿ...

• ಮಹಾಬಲೇಶ್ವರ ಕಾಟ್ರಹಳ್ಳಿ

ಸಾಮಾನ್ಯವಾಗಿ ತುಮಕೂರಿನಿಂದ ಬೆಂಗಳೂರಿಗೆ ಹೋಗುವಾಗ ಬೆಳಗಾ ಮುಂಜಾನೆ ಒಂದಿಲ್ಲೊಂದು ವಾಹನ ಅಪಘಾತ ಜರುಗಿ ಅನೇಕ ಸಾವು-ನೋವು ಆಗುವ ದುರ್ಘಟನೆಗಳನ್ನು ದಿನವೂ ಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ. ಆ ಹೊತ್ತಿನಲ್ಲಿ ಸಂಭವಿಸುವ ಬಹುತೇಕ ಘಟನೆಗಳಿಗೆ ಚಾಲಕರ ನಿದ್ದೆಯ ಮಂಪರೇ ಕಾರಣೀಭೂತವೆನ್ನಲಾಗುತ್ತದೆ. ಈ ಸಾವು-ನೋವು ಅಪಘಾತಗಳಿಗೆ ಚಾಲಕರ ಮದ್ಯಸೇವನೆಯೇ ಕಾರಣವಿರಬೇಕೆಂದು ಸಾಮಾನ್ಯವಾಗಿ ಎಲ್ಲರೂ ಪೂರ್ವನಿರ್ಧಾರಿತ ಅಭಿಪ್ರಾಯವನ್ನು, ಅಪವಾದವನ್ನು ಅವರ



ಮೇಲೆ ಕಟ್ಟುವುದು ಇದೆ.

ಆದರೆ ಬೆಳಗಾ ಮುಂಜಾವಿನ ರಸ್ತೆ ಅಪಘಾತಗಳಿಗೆ ಮದ್ಯ ಸೇವನೆ ಕಾರಣವಲ್ಲ ಎನ್ನಬಹುದು. ಯಾಕೆಂದರೆ ಮದ್ಯವನ್ನು ರಾತ್ರಿ ಊಟದ ಮೊದಲು ಸೇವಿಸುವುದು ಸಹಜ. ಅನಂತರ ಚಾಲನೆ ಮಾಡುತ್ತ ೨-೩ ಗಂಟೆ ಕಳೆದು ಚಿತ್ರದುರ್ಗ ದಾಟಿ ತುಮಕೂರು ರಸ್ತೆಗೆ ಬರುವಾಗ ನಿದ್ದೆ ಆವರಿಸುವ ಹೊತ್ತು. ಒಮ್ಮೊಮ್ಮೆ ಪ್ರಯಾಣ ಮಾಡುವಾಗ ಎಚ್ಚರ ವಿದ್ದು ಸೂಕ್ಷ್ಮವಾಗಿ ಚಾಲಕನ ಚಕ್ರದ ಮೇಲಿನ ಹಿಡಿತವನ್ನು ಗಮನಿಸಿದರೆ ಆಗಿನ ಆತನ ಸ್ಥಿತಿ ನಮ್ಮ ಅರಿವಿಗೆ ಬಂದು ಆತಂಕವಾಗುವುದಕ್ಕೆ ಸಾಧ್ಯ. ಬೆಳಿಗ್ಗೆಯ ೨ರಿಂದ ೩-೪ ಗಂಟೆಯ ವರೆಗಿನ ಅವಧಿ ಇದೆಯಲ್ಲಾ, ಅದು ಸಕ್ಕರೆ ನಿದ್ದೆಯ ಕಾಲ. ಎಂಥವರಿಗೂ ಆಗಲೇ ನಿದ್ದೆ ಆವರಿಸುವುದು ಇದೆ. ಬಸ್ಸು, ಟ್ರಕ್ಕು, ಕಾರಲ್ಲಿ ರುವವರು ನಿದ್ದೆ ಹೋಗಿರುತ್ತಾರೆ. ಆಗ ಎಚ್ಚ ರವಾಗಿದ್ದುಕೊಂಡು ಇರುವವನು ಸಾರಥಿ ಮಾತ್ರ.

ತೂಕಡಿಸುತ್ತಾ ಗಡಕ್ಕನೆ ಚಕ್ರ ತಿರುಗಿಸುತ್ತ, ಎದುರು ಬರುವ ಬಸ್ಸು ಲಾರಿ ಟ್ರಕ್ಕುಗಳ ಪ್ರಖರ ಬೆಳಕಿಗೆ ಕಣ್ಣು ಪಿಳುಕಿಸುತ್ತಾ ಬಸ್ ಇತರೆ ವಾಹನದ ದಿಕ್ಕನ್ನು ತುಸು ಸುರಕ್ಷಿತ ಮಾರ್ಗದೆಡೆ ಒಯ್ಯುತ್ತ ಸಾಗುವ ಅನಿವಾರ್ಯ ಕೆಲಸದಲ್ಲಿರುತ್ತಾನೆ ಚಾಲಕ. ಒಮ್ಮೆ ಯಾಮಾ ರಿದರೆ ಆಯಿತು, ಮೃತ್ಯು ನಿದ್ರೆಯ ಮಂಪ ರಿನಲ್ಲಿ ಕಾದುಕೊಂಡು ಅಮಾಯಕ ಪ್ರಯಾ ಣಿಕರನ್ನು ಆಹುತಿ ತೆಗೆದುಕೊಂಡು ಬಿಡುತ್ತದೆ.

ಆದರೆ ಚಾಲಕರು ಚಕ್ರ ಹಿಡಿದುಕೊಂಡು ನಿದ್ದೆ ಹೋಗುವ ಕಾರಣದಿಂದಲೇ ಸಾವಿರಾರು ಜನರು ಅಪಘಾತದಲ್ಲಿ ಸಾವು-ನೋವು ಅನು ಭವಿಸುತ್ತಾರೆಂದು ಸಾಬೀತು ಮಾಡಲಿಕ್ಕೆ ಆಗು ವುದಿಲ್ಲ ಎನ್ನುತ್ತಾರೆ ಸಂಶೋಧಕರು. ಕಾರೊಂದು ಮರಕ್ಕೆ ಡಿಕ್ಕಿಹೊಡೆಯುತ್ತದೆ. ಅಥವಾ ಯಾವುದೋ ಸೇತುವೆಯ ಅಡ್ಡಗಟ್ಟೆ ಮೇಲೆ ಹಾಯುತ್ತದೆ. ಇಂಥ ಎಲ್ಲ ಘಟನೆಗ ಳಲ್ಲಿ ಕಾರು 'ಸ್ಕಿಡ್' ಆಗಿ ಹೋಗಿರುವುದಕ್ಕೆ ಪುರಾವೆಗಳು ಸಿಗುವುದಿಲ್ಲ. ಇಂಥ ಅನೇಕ ವಿವರಣೆಗೆ ಸಿಗಲಾರದ ಅಪಘಾತಗಳು ರಸ್ತೆ ಗಳ ಮೇಲೆಯೇ ಆಗಿರುತ್ತವೆ. ಆಗೆಲ್ಲ ವಾಹ ನಗಳು ಸುಸ್ಥಿತಿಯಲ್ಲೆ ಇರುತ್ತವೆ.

ಅಮೇರಿಕಾದಲ್ಲಿ ಪ್ರತಿವರ್ಷ ಸಂಭವಿಸುವ ೫೦,೦೦೦ ರಸ್ತೆ ಅಪಘಾತಗಳಲ್ಲಿ ಶೇ. ೧೩ರಷ್ಟು ಅಪಘಾತಗಳು ಚಾಲಕರು ನಿದ್ದೆ ಹೋಗಿದ್ದರಿಂದಲೇ ಆಗಿರುತ್ತವೆಂದು ೧೯೬೮ರ ವರದಿಯೊಂದು ತಿಳಿಸುತ್ತದೆ. ಬ್ರಿಟಿಶ್ ಅಧ್ಯಯನಗಳು ತೋರುವುದೇನೆಂ ದರೆ, ಬೆಳಿಗ್ಗೆಯ ೪ ಗಂಟೆಯಿಂದ ೬ ಗಂಟೆಯ ಒಳಗಿನ ಅವಧಿಯಲ್ಲಿ ನಿದ್ದೆಯಿಂದ ತೂಕಡಿಸುವ ಸಾಧ್ಯತೆ ಜಾಸ್ತಿ ಎಂದೂ ಹಾಗೂ ಮಧ್ಯಾಹ್ನದ ನಂತರದ ಅವಧಿ ಮಂಪರು ಬರಲಿಕ್ಕೆ ಒಳ್ಳೆ ಅವಕಾಶವೆಂದೂ ಹೇಳುತ್ತವೆ.

ನಮ್ಮ ಜೈವಿಕ ಗಡಿಯಾರವು ಸಾಮಾನ್ಯ ವಾಗಿ ಸ್ವಯಂಚಲಿಯಾಗಿ ನಮ್ಮ ದೈಹಿಕ ಚಟುವಟಿಕೆಗಳನ್ನು ನಿಯಂತ್ರಿಸುತ್ತಿರುತ್ತದೆ. ದಿನ ಕ್ಕೆರಡು ಬಾರಿ- ಒಮ್ಮೆ ರಾತ್ರಿ ಮತ್ತೊಮ್ಮೆ ಅಪರಾಹ್ನ ವೇಳೆ-ಮಲಗುವಂತೆ ನಮ್ಮ ನಿದ್ರಾ ಅಗತ್ಯಗಳಿಗೆ ದೇಹವನ್ನು ಸಜ್ಜುಗೊಳಿಸುತ್ತದೆ. ಮಧ್ಯಾಹ್ನದ ಊಟದ ಬಳಿಕ ನಿದ್ರೆ ಹೋಗುವ ಅಗತ್ಯ ಹೆಚ್ಚಾಗುವುದಿಲ್ಲ. ಬದಲಾಗಿ ಸ್ವಲ್ಪವೇ ಮದ್ಯ ಸೇವನೆ ನಿದ್ದೆ ಮಾಡುವ ಅಗತ್ಯವನ್ನು ಹೆಚ್ಚಿಸುವುದಂತೂ ನಿಜವೆನ್ನುತ್ತಾರೆ ಶೋಧ ಕರು.

ನಿದ್ದೆ ಮಂಪರಿನಲ್ಲಿನ ರಸ್ತೆ ಅಪಘಾತಗಳು ಹೆಚ್ಚಾಗಿ ಟ್ರಕ್ ಚಾಲಕರಿಗೇ ಸಂಬಂಧಿಸಿರು ತ್ತವೆ. ಅನೇಕ ದೇಶಗಳಲ್ಲಿ ವಾಹನ ಚಾಲನೆಯ ಸಮಯವನ್ನು ನಿಗದಿಪಡಿಸಿರುತ್ತಾರೆ. ಆದರೆ ಅವರು ಯಾವ ಅವಧಿಗಳಲ್ಲಿ ಚಾಲನೆ ಮಾಡ ಬೇಕೆಂಬ ಬಗ್ಗೆ ನಿಯಂತ್ರಣ ಹೊಂದಿರುವು ದಿಲ್ಲ. ನಿರ್ಬಂಧ ಹಾಕಿದರೂ ಸುಖನಿದ್ದೆ ಮಾಡಿದ ಬಳಿಕವೇ ಮತ್ತೆ ಚಕ್ರ ಹಿಡಿದುಕೊಳ್ಳಿ ಎನ್ನುವುದಿಲ್ಲ. ಸಂಶೋಧಕರು ಈ ಕೆಳಗಿನ ವಿಶಿಷ್ಟ ಉದಾಹರಣೆ ಕೊಡುತ್ತಾರೆ.

ಟ್ರಕ್ ಚಾಲಕನೊಬ್ಬ ಬೆಳಿಗ್ಗೆ ನಸುಕಿನಲ್ಲಿ ಏಳುತ್ತಾನೆ. ವಾಹನಕ್ಕೆ ಸರಕು ಹೇರುವುದಕ್ಕೆ ಬಿಡುತ್ತಾನೆ. ಆ ಬಳಿಕ ಮೂರು ನಾಲ್ಕು ಗಂಟೆ ನಂತರ ಚಾಲನೆಗೆ ತೊಡಗುತ್ತಾನೆ. ಸರಕುಗಳನ್ನು ನಿಗದಿತ ಗುರಿಗೆ ತಲುಪಿಸಿ ಅದನ್ನು ಇಳಿಸುವವರೆಗೆ ಅಲ್ಲಿಯೇ ಕಾದಿರುತ್ತಾನೆ. ಚಾಲಕನು ಎರಡು ಗಂಟೆ ವಾಹನ ನಡೆಸಿ ಎರಡು ಗಂಟೆ ನಿದ್ರೆ ಮಾಡುತ್ತಾನೆ. ವಾಹನ ನಡೆಸುವ ಅವಧಿ ಮುಗಿಸಿ ಆದಿನ ರಾತ್ರಿ ೧೦ ಗಂಟೆ ತನ್ನ ಡಿಪೊಕ್ಕೆ ಹೋಗುತ್ತಾನೆ. ಆ ದಿನದ ಕೆಲಸ ಮುಗಿಸಿ ತನಗೆ ಬೇಕಾದ ಸಮಯದಲ್ಲಿ ವಿಶ್ರಾಂತಿ ಮಾಡದೆ ಎದ್ದು ಇತರ ಚಾಲಕರು ಚಾಲನೆಯಲ್ಲಿರುವಾಗ ರಸ್ತೆಗೆ ಬರುತ್ತಾನೆ. ಬಹಳ ಹೊತ್ತು ನಿದ್ರೆ ಮಾಡಲಾಗದೆ ಬೇಗ ತನ್ನ ಅವಧಿ ಮುಗಿಸಿಕೊಂಡು ಮನೆಗೆ ತೆರಳಲು ಯೋಚಿಸಿರುತ್ತಾನೆ. ಆ ಅಪಾಯಕಾರೀ ನಸುಕಿನಲ್ಲಿ ಚಾಲನೆ ಮಾಡುತ್ತಿರುವಾಗ ಚಕ್ರ ಹಿಡಿದುಕೊಂಡೇ ನಿದ್ರೆ ಮಾಡಲು ಆಗಾಗ್ಗೆ ಪ್ರಯತ್ನಿಸಿ, ಎಚ್ಚರಗೊಳ್ಳುತ್ತ ಸಾಗುತ್ತಿರುತ್ತಾನೆ. ನಿದ್ದೆ ಮಂಪರಿನಲ್ಲಿ ತೂಕಡಿಸುತ್ತಲೇ ಎಚ್ಚರಗೊಳ್ಳುತ್ತಲೇ ಗಾಡಿ ಚಲಿಸುತ್ತಿರುತ್ತಾನೆ.

ಟ್ರಕ್ ಚಾಲಕರಷ್ಟೇ ನಿದ್ದೆ ಹೋಗುವವರಲ್ಲ, ಇತರ ವಾಹನಗಳ ಚಾಲಕರದೂ ಅದೇ ಪರಿಸ್ಥಿತಿ. ಚಾಲಕನೊಬ್ಬ ಬಹಳ ಹೊತ್ತಿನ ತನಕ ವಾಹನ ಚಲಿಸುತ್ತ ನಿದ್ದೆಗೆ ಅವಕಾಶವಿಲ್ಲದೆ ಇರುತ್ತಾನೆ. ವಾಹನಗಳ ರಚನೆಯೇ ಎರಡು ಬಗೆಯ ಅಧ್ವಾನಗಳನ್ನು ಒಳಗೊಂಡಿರುತ್ತವೆ. ಒಂದನೆಯದಾಗಿ ಅವುಗಳನ್ನು ವೇಗವಾಗಿ ಓಡುವಂತೆ ಮಾಡಿರುತ್ತಾರೆ ಹಾಗೂ ಚಾಲನೆಯ ಕೆಲಸದಲ್ಲಿರುವ ಏಕತಾನತೆ ಮಂಪರು ಹಿಡಿಯಲು ಅವಕಾಶ ನೀಡುವಂತಿರುತ್ತದೆ.

ಒಮ್ಮೆ ನಿದ್ದೆ ಮಂಪರು ಕವಿದಾಗ ಚಾಲಕನು ಸ್ವಯಂಚಲಿಯಾಗಿ ಕಣ್ಣುಮುಚ್ಚುತ್ತಾನೆ. ಕಿಟಕಿ ಗ್ಲಾಸುಗಳು ಎಷ್ಟೇ ತೆಗೆದುಕೊಂಡಿರಲಿ, ನಿದ್ದೆ ಕವಿದುಬಿಡುವಂತೆ ಆಗುತ್ತದೆ. ಆಗ ಎಂಥ ಟೇಪ್ ಆಗಲಿ, ರೇಡಿಯೋ ಆಗಲಿ, ಗದ್ದಲ ಮಾಡುತ್ತ ಇದ್ದರೂ ಮಂಪರು ಕವಿಯುವಿಕೆಯಿಂದ ಬಿಡುಗಡೆ ಆಗುವುದೇ ಇಲ್ಲ. ಮೊದ ಮೊದಲು ಟೇಪ್ ಹಾಕಿಕೊಂಡು ನಡೆಸಿದರೂ ಅದು ಕೇಳುವ ಕಿವಿಗಳಿಲ್ಲದೆ ಏಕತಾನವಾಗಿ ಮತ್ತೊಂದು ಟೇಪ್ ಹಾಕಲು ಬೇಸರವಾಗುತ್ತದೆ- ಸಹಾಯ ಮಾಡುವ ಕ್ಲೀನರ್ ಆಗಲೀ, ಮಗ್ಗಲು ಕುಳಿತವರಾಗಲೀ ಎಚ್ಚರವಿದ್ದು ಸಹಚಾಲಕರಾಗಿರಲು ಸಾಧ್ಯವಾಗುವುದಿಲ್ಲ. ಅವರೂ ನಿದ್ದೆ ಹೋಗಿರುವುದರಿಂದ ಅವನಿಗೆ ನಿದ್ದೆ ಬರುತ್ತದೆ, ಸಾಂಕ್ರಾಮಿಕವೆಂಬಂತೆ. ಇದರಿಂದ ಎಲ್ಲರೂ ಕಲಿಯಬೇಕಾದ ಪಾಠ ಒಂದಿದೆ. ದೀರ್ಘ ಕಾಲದವರೆಗೆ ವಾಹನ ಚಲಿಸಬಾರದು, ಅಗತ್ಯವಾದ ವಿಶ್ರಾಂತಿಯಿಲ್ಲದೆ. ಅಂಥ ವೇಳೆಯಲ್ಲಿ ವಾಹನ ಚಾಲನೆಯನ್ನು ಮತ್ತೊಬ್ಬ ಕೈಗೆತ್ತಿಕೊಂಡರೆ ಚಲೋ. ಯಾಕೆಂದರೆ ಆ ಅಪಾಯಕಾರೀ ನಿದ್ದೆಯ ಅವಧಿಯನ್ನು ನಾವು ಆತಂಕಗಳಿಗೆ ಎಡೆಮಾಡಿಕೊಡದೆ ಕಳೆಯಬೇಕಾಗುತ್ತದೆ. ಹಾಗೂ ಕಳೆದ ರಾತ್ರಿ ಸಾಕಷ್ಟು ವಿಶ್ರಾಂತಿಯಿಲ್ಲದೆ ಚಾಲನೆ ಮಾಡಬೇಕಾದ ಅನಿವಾರ್ಯತೆಯನ್ನು ಸಹ ನಾವು ಬೇರೊಬ್ಬರಿಗೆ ವಹಿಸಿದರೆ ಮಾತ್ರ ಅಪಘಾತಗಳ ಸಂಭಾವ್ಯತೆಯಲ್ಲಿ ಕೊಂಚ ಕಡಿತ ಸಾಧಿಸಬಹುದಾಗಿದೆ. ಅಲ್ಲದೆ ಪ್ರಯಾಣಿಕರೂ ಆ ಸಮಯದಲ್ಲಿ, ಒಂದು ಪಕ್ಷ ಚಾಲಕ ನಿದ್ದೆ ಹೋಗುವ ಸಂದರ್ಭಗಳಲ್ಲಿ ಎಚ್ಚರವಾಗಿದ್ದುಕೊಂಡಿದ್ದರೆ ಅಪಘಾತವಾಗುವಾಗ ಪಾರಾಗುವ ಉಪಾಯಗಳನ್ನು ತತ್‌ಕ್ಷಣ ಅನುಸರಿಸಲು ಸಾಧ್ಯವಾಗುತ್ತದೆ. ಇನ್ನೇನು ಅಪಘಾತಕ್ಕೆ ಈಡಾದೆ ಎಂಬ ಭಯವೇ ಸಾವನ್ನು ಬೇಗ ತರಲಿಕ್ಕೆ ಸಾಧ್ಯ. ಅಪಘಾತ ಎದುರಿಸುವ ಮಾನಸಿಕ ಧೈರ್ಯವನ್ನು ಆ ಸಂದರ್ಭಗಳಲ್ಲಿ ಎಚ್ಚರವಿರುವ ಪ್ರಯಾಣಿಕರು ರೂಢಿಸಿಕೊಳ್ಳಬಹುದು.

****************

(ಆಧಾರ: ರೀಡರ್ಸ್ ಡೈಜೆಸ್ಟ್‌ನವರ 'Why in the World')

## ಐತಿಹ್ಯ

• ತೊವಿನಕೆರೆ ಸೀತಾರಾಮ ಜೋಯಿಸ

"ವಿಶ್ವೇಶ್ವರ ಮಹಾದೇವ, ನೀನಿರುವುದೇ ಸತ್ಯವಾದರೆ ಇಲ್ಲಿ ಬರಿ ಗೂಬೆಗಳು ಕೂಗು ಕೇಳಲಿ; ಇವರ ದರ್ಪ ಅಧಿಕಾರ ಐಶ್ವರ್ಯ ಖ್ಯಾತಿಗಳೆಲ್ಲ ಮಣ್ಣುಪಾಲಾಗಲಿ; ಮುಂದೆ ಅಗ್ರಹಾರದಲ್ಲಿ ನಿಂತವರು ನನ್ನ ಶಾಪ ಅನುಭವಿಸಲಿ'' ಎಂದು ಹೇಳಿ ಅವರು ಕಣ್ಣುಮುಚ್ಚಿದರು.

# ರಕ್ತಕೊಡಿಗೆ

ಮಹಾದೇವಪುರದ ಮರಿಗೌಡರ ಸೌಜನ್ಯಯುತ ನಡವಳಿಕೆ, ನ್ಯಾಯಪರತೆ, ಋಜುಮಾರ್ಗಗಳು ನನ್ನನ್ನು ಅತಿಯಾಗಿ ಆಕರ್ಷಿಸಿದವು. ದಿನಗಳೆದಂತೆಲ್ಲ ನಮ್ಮ ಸ್ನೇಹ ಭದ್ರವಾಗಿ ಬೆಳೆದಿತ್ತು. ಆ ಊರಿಗೆ ನಾನು ಅನೇಕ ಸಲ ಹೋಗಿದ್ದೇನೆ. ರಾತ್ರಿ ಹೊತ್ತಾದ ಮೇಲೆ ಅಲ್ಲಿಗೆ ಹೋದಾಗ ಅವರ ಮನೆಯ ಮುಂದಿನ ಜಗಲಿ ಮೇಲಿದ್ದ ಕೊಠಡಿಯಲ್ಲೇ ಇರುತ್ತಿದ್ದೆ. ನಾನು ಅಲ್ಲಿಗೆ ಬಂದಿರುವ ಸುದ್ದಿ ಕೇಳಿದಾಗ ನೆರೆಹೊರೆಯ ಮನೆಗಳಲ್ಲಿದ್ದ ಮಿತ್ರರೂ ನೋಡಲು ಬರುವುದು ವಾಡಿಕೆ. ಆಗ ಅಲ್ಲಿ ಪ್ರಚಲಿತ ಸುದ್ದಿ ಸಮಾಚಾರ ಮತ್ತು ವದಂತಿಗಳ ಬಗ್ಗೆ ಬಹುಹೊತ್ತಿನವರೆಗೂ ಚರ್ಚೆ ನಡೆಯುತ್ತಿದ್ದುದೂ ಉಂಟು. ಒಂದು ದಿನ ಕೆಲವು ಸಲಹೆಗಳನ್ನು ಮಂಡಿಸುವ ಮುನ್ನ ಅಲ್ಲಿ ಸೇರಿದ್ದ ಹಿರಿಯರಿಗೆ,

"ಈ ಊರು ಜನನಿಬಿಡವಾಗಿದೆ, ಮನೆಗಳು ಒಂದಕ್ಕೊಂದು ಹೊಂದಿಕೊಂಡಿವೆ. ಓಣಿಗಳು ಅತಿ ಕಿರಿದಾಗಿವೆ. ಜನ-ಜಾನುವಾರುಗಳು ಸಲೀಸಾಗಿ ಹೋಗಿ ಬರುವಂತಿಲ್ಲ. ಅಗ್ರಹಾರ ಬೀಳು ಬೀಳಾಗಿಯೇ ಉಳಿದಿದೆ. ಅಲ್ಲಿ ಹೊಸದಾಗಿ ಮನೆಗಳನ್ನು ಕಟ್ಟಿಕೊಳ್ಳುವುದಕ್ಕೆ ಸ್ಥಳವಿದೆ, ಗಾಳಿ ಬೆಳಕಿನ ಕೊರತೆ ಇಲ್ಲ, ನದಿಯೂ ಸಮೀಪದಲ್ಲಿದೆ. ದೇವಾಲಯವೂ ಹತ್ತಿರದಲ್ಲಿದೆ. ಸ್ಥಳ ಸಂಕೋಚವಾಗಿರುವವರು ಅಲ್ಲಿ ಮನೆಗಳನ್ನು ಕಟ್ಟಿಕೊಳ್ಳಬಹುದು. ಏಕೆ ಯಾರೂ ಇನ್ನೂ ಮನಸ್ಸು ಮಾಡಿಲ್ಲ?'' ಎಂದು ಪ್ರಶ್ನೆ ಹಾಕಿದೆ.

ಹಿರಿಯರಾದ ಮರಿಗೌಡರು, "ಅದು ಒಂದು ಕತೆ! ನಮ್ಮ ಕಾಲದಲ್ಲಿ ನಡೆದಿದ್ದಲ್ಲ. ನಮ್ಮ ಹಿರಿಯರಿಂದ ಕೇಳಿದ್ದೇವೆ. ಅಲ್ಲಿ ಮನೆ ಕಟ್ಟಿಕೊಳ್ಳಲು ಯಾರೂ ಇಷ್ಟಪಡುವುದಿಲ್ಲ. ಅಲ್ಲಿದ್ದ ಭವ್ಯವಾದ ಮನೆಗಳೂ ವಂಶಗಳೂ ಶಾಪಗ್ರಸ್ಥವಾಗಿ ಹೋದವು. ಅಲ್ಲಿದ್ದ ಐಶ್ವರ್ಯ ದರ್ಪ, ಅಧಿಕಾರಗಳು ಹೇಗೆ ನಿರ್ನಾಮವಾದವೆಂಬುದನ್ನು ಸ್ವತಃ ಕಂಡ ಹಿರಿಯರಿಂದ ಕೇಳಿದ್ದೇವೆ. ಅಲ್ಲಿ ನೆಲೆಸಿದವರು ಯಾರೂ ಊರ್ಜಿತವಾಗಲಾರರು. ಅಲ್ಲೆಲ್ಲ ಬ್ರಾಹ್ಮಣರ ಸಂಸಾರಗಳಿದ್ದವಂತೆ. ಈ ಗ್ರಾಮವೇ ಬೆಂಕಿ ಭೀಮರಾಯರು ಎಂಬವರಿಗೆ ರಾಜರಿಂದ 'ರಕ್ತಕೊಡಿಗೆ' ಇನಾಂ ಆಗಿ ಬಂದಿತ್ತು. ರಾಯರು ಒಬ್ಬ ಪಳಗಿದ ಯೋಧ; ಯುದ್ಧ

ಗಳಲ್ಲಿ ಅಪಜಯವನ್ನೇ ಕಂಡವರಲ್ಲ. ಅವರ ಹೆಸರನ್ನು ಕೇಳಿದರೇ ಶತ್ರುಗಳು ತಲ್ಲಣಿಸುತ್ತಿದ್ದರಂತೆ. ಅವರಿಗೆ ಈ ಊರು ಬಳುವಳಿಯಾಗಿ ಬಂದಾಗ ಕಾವೇರಿ ನದಿಗೆ ಸ್ನಾನಘಟ್ಟ, ಸತ್ರ, ಮಾರುತಿ-ಮಾಧವ ಮತ್ತು ವಿಶ್ವೇಶ್ವರ ಮಹಾದೇವರ ಗುಡಿ-ಗೋಪುರಗಳನ್ನು ಕಟ್ಟಿಸಿದರು. ಅದರಿಂದಲೇ ಈ ಊರಿಗೆ ಮಹಾದೇವಪುರವೆಂಬ ಹೆಸರು ಶಾಶ್ವತವಾಯಿತು. ಅವರು ರೈತರು ಸಾಗುವಳಿ ಮಾಡುತ್ತಿದ್ದ ಜಮೀನುಗಳ ಹೊರತಾಗಿ ಭೂಮಿಯನ್ನೆಲ್ಲ ಮೂರುಭಾಗ ಮಾಡಿ ಒಂದು ಭಾಗವನ್ನು ತಮಗೂ, ಒಂದು ಭಾಗವನ್ನು ದೇವಸ್ಥಾನಗಳಿಗೂ ಮೂರನೇ ಭಾಗವನ್ನು ಶ್ರೋತ್ರಿಯರಾದ ಬ್ರಾಹ್ಮಣರಿಗೂ ಹಂಚಿದರು. ಈ ಬ್ರಾಹ್ಮಣರು ವಿದ್ಯಾದಾನ ಮಾಡಲು ಅನುಕೂಲವಾಗುವಂತೆ ಅವರಿಗೆ ವಾಸದ ಮನೆ ವಾರ್ಷಿಕ ಸುವರ್ಣಾದಾಯವನ್ನು ಗೊತ್ತು ಮಾಡಿದ್ದರು. ಈಗಲೂ ಅವರು ಎಲ್ಲ ದೇವಾಲಯಗಳಿಗೂ, ಬಸವ, ಮಾರಿ-ಮಸಣಿ ಗುಡಿಗಳಿಗೂ ಹಾಕಿಕೊಟ್ಟ ಮಾನ್ಯವು ನಡೆಯುತ್ತಿದೆ. ಹಾಗೆಯೇ ಎಲ್ಲ ದೇವಾಲಯಗಳಲ್ಲೂ ಪೂಜಾ ಕೈಂಕರ್ಯಗಳು ನಡೆಯುತ್ತಿವೆ. ರಾಯರ ದರ್ಬಾರು ಶಾಂತವಾಯಿತು. ಬ್ರಾಹ್ಮಣರ ಸಂಸಾರಗಳು ಒಡೆದು ಸರ್ವನಾಶವಾಯಿತು. ದೇವಾಲಯದ ಅರ್ಚಕರದ್ದು ಒಂದು ಮನೆ ಮಾತ್ರ ಉಳಿದಿದೆ. ಅವರೂ ಹೊಸದಾಗಿ ಬಂದವರು. ರಾಯರ ಮನೆ ಒಡೆದುಹೋಯಿತು. ವಂಶವೇ ನಷ್ಟವಾಯಿತು, ಅಳಿದುಳಿದ ಒಬ್ಬಿಬ್ಬರು ಪಟ್ಟಣ ಸೇರಿದರೆಂದು ವದಂತಿ. ಗ್ರಾಮವೇ ವಿಕ್ರಯವಾಗಿ ಪರರ ವಶವಾಯಿತು. ಅಚಾತುರ್ಯದಿಂದ ರಾಯರು ಮಾಡಿದ ಬ್ರಹ್ಮಚಾರಿಯ ಹತ್ಯೆ, ಮರಣ ಕಾಲಕ್ಕೆ ಆತ ಹಾಕಿದ ಶಾಪ ಇಷ್ಟಕ್ಕೂ ಕಾರಣವಾಗಿದೆ.

ಆದುದರಿಂದ ಜನರು ಭೀತರಾಗಿ ಅಲ್ಲಿ ನೆಲೆಸಲು ಇಷ್ಟಪಡುವುದಿಲ್ಲ ಎಂದು ಹೇಳಿದರು.

ನೆರೆದಿದ್ದವರಲ್ಲಿ ಮತ್ತೊಬ್ಬ ಹಿರಿಯರು ಕತೆಯನ್ನು ಮುಂದುವರಿಸಿದರು, "ರಾಯರ ದರ್ಬಾರು ಸಾಮಾನ್ಯವಾದುದೇನೂ ಅಲ್ಲ, ಪ್ರತಿದಿನವೂ ಅವರು ಪ್ರಾತರ್ವಿಧಿಯನ್ನು ತೀರಿಸಿಕೊಂಡು ಹಜಾರ-ಚಾವಡಿಯಲ್ಲಿ ಉಪಸ್ಥಿತರಾಗಿ ಜನರು ತರುವ ದೂರುಗಳನ್ನು ಕೇಳುತ್ತಿದ್ದರು. ಒಂದು ದಿನ ಒಬ್ಬಳು ವೃದ್ಧ ಮಾತೆ ತನ್ನ ಏಕಮಾತ್ರ ಪುತ್ರನ ಮೇಲೆ ದೂರು ತಂದಿದ್ದಳು. ತನ್ನ ಮಗನು ಹೆಂಡತಿಯ ಮಾತನ್ನು ಕೇಳಿಕೊಂಡು ತನ್ನನ್ನು ಮನೆಯಿಂದ ಓಡಿಸಿರುತ್ತಾನೆ. ತನಗೆ ನಿಲ್ಲಲು ನೆಲೆಯಿಲ್ಲ, ಹೊಟ್ಟೆಗೆ ಕೂಳಿಲ್ಲ ಎಂದು ದೂರಿಕೊಂಡಳು. ಕೂಲಿ ಮಾಡಿ ಕೂಳನ್ನು ಸಂಪಾದಿಸಲು ತೋಳುಗಳಲ್ಲಿ ಶಕ್ತಿ ಇಲ್ಲ. ಗಂಡ ತೀರಿಕೊಂಡ ನಂತರ ಕೂಲಿ-ಕಂಬಳ ಮಾಡಿ ಇನ್ನು ಹಸುಗೂಸಾಗಿದ್ದ ಮಗನನ್ನು ಸಾಕಿ-ಸಲಹಿ, ನಿಲ್ಲಲು ಮನೆ, ಉಳಲು ಹೊಲ ಮಾಡಿಕೊಟ್ಟು ಮದುವೆ ಮಾಡಿದ ಮೇಲೆ ಹೀಗೆ ಮಾಡಿರುತ್ತಾನೆಂದು ಅಳುತ್ತ ಹೇಳಿಕೊಂಡಳು.

ರಾಯರು ಸಾವಧಾನವಾಗಿ ಕೇಳಿ-"ನೀನು ತಿನ್ನುವ ಅನ್ನವನ್ನು ಕೊಡಲಾರದಷ್ಟು ಬಡತನವೇನೂ ನಮಗಿಲ್ಲ. ಅದು ಹೇಗೋ ಆದೀತು. ಮಕ್ಕಳು ತಂದೆತಾಯಿಯರನ್ನು ವೃದ್ಧಾಪ್ಯದಲ್ಲಿ ಪೋಷಿಸದೆ ಕೃತಘ್ನರಾಗುವುದನ್ನು ನಾವು ಸಹಿಸೆವು. ನೀನು ತಾಯಾಗಿ ಹೇಳಿಕೊಂಡ ಮಾತುಗಳೇ ಸಾಕು, ಬೇರೆ ಸಾಕ್ಷಿ ಬೇಕಿಲ್ಲ" ಎಂದು ಅವಳ ಮಗನನ್ನು ಚಾವಡಿಗೆ ಕರೆಸಿದರು.

ಆತನ ತಲೆಗೂದಲನ್ನೆಲ್ಲ ತೆಗೆಸಿ, ಬೋಳು ಮಾಡಿಸಿ ಹಜಾರದ ಕಂಭಕ್ಕೆ ಹಗ್ಗದಿಂದ ಬಿಗಿಸಿ ಒಂದು ಗುಂಡನ್ನು ಅವನ ತಲೆಯ ಮೇಲೆ ಹೊರಿಸಿದರಂತೆ. ಅವನು ಅಳುತ್ತ ಕ್ಷಮಾಪಣೆ ಕೇಳಿಕೊಂಡಾಗ ರಾಯರು "ನಿನ್ನನ್ನು ಒಂಭತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತುಕೊಂಡು, ಹುಟ್ಟಿದ ಮೇಲೆ ಅವರಿವರ ಮನೆ ಬಚ್ಚಲು ಬಾಚಿ, ಹೊಲ, ಮನೆ ಮಾಡಿಕೊಟ್ಟು ಅಕ್ಕರೆ

ಯಿಂದ ಸಾಕಿದಾಕೆಗೆ ನಿನ್ನ ಕಾಣಿಕೆ ಇದೇ ಏನು? ತಲೆಯ ಮೇಲೆ ಹೇರಿದ ಗುಂಡಿನ ಭಾರಕ್ಕೆ ಕಣ್ಣೀರಿಡುತ್ತಿದ್ದಿಯಲ್ಲ. ಒಂಭತ್ತು ತಿಂಗಳು ಅದನ್ನು ಹೀಗೆಯೇ ಹೊತ್ತು ನಿಂತಿರಬೇಕು, ಆಕೆಯ ಪಾದಕ್ಕೆರಗಿ ಕ್ಷಮೆ ಕೇಳಿಕೊಂಡು ಆಕೆಯ ಮನಸ್ಸು ನೋಯದಂತೆ ನೋಡಿಕೊಳ್ಳಬೇಕು ತಿಳಿಯಿತೆ? ಪ್ರತಿಭಟಿಸಿದರೆ ಥಡಿ ಹೊಡೆತ ಬಿದ್ದಾವು'' ಎಂದರಂತೆ.

ಅಪರಾಧಿ ಮರು ಮಾತನಾಡದೆ ಒಪ್ಪಿಕೊಂಡು ತಾಯಿಯ ಕಡೆಗೆ ತಿರುಗಿ ಕೈಜೋಡಿಸಿ ನಮಸ್ಕರಿಸಿದನಂತೆ. ಇಂಥ ಅನೇಕ ಪ್ರಸಂಗಗಳನ್ನು ಹಿರಿಯರ ಬಾಯಿಂದ ಕೇಳಿದ್ದೇವೆ.

''ಇಂಥ ರಾಯರಿಗೆ ಬ್ರಹ್ಮಚಾರಿಯು ಉಗ್ರವಾದ ಶಾಪವನ್ನು ಕೊಡಲು ಏನು ಕಾರಣವಿತ್ತು? ಆ ಬ್ರಹ್ಮಚಾರಿ ಯಾರು, ಅವನ ಹೆಸರೇನು? ಅವನು ಎಲ್ಲಿಂದ ಬಂದವನು?'' ಎಂದು ನಾನು ಕೇಳಿದೆ. ಮರೀಗೌಡರೇ ಹೇಳತೊಡಗಿದರು

''ನಾವು ಕೇಳಿರುವ ಸಮಾಚಾರವಿದು. ರಾಯರ ಸತ್ರದಲ್ಲಿ ಅನ್ನದಾನವಂತೂ ಯಥೇಚ್ಛವಾಗಿ ನಡೆಯುತ್ತಿದ್ದಿತಂತೆ. ನಿತ್ಯವೂ ಚಿತ್ರಾನ್ನವನ್ನು ಕಲೆಸುವುದಕ್ಕೆಂದೇ ಅಲ್ಲಿ ಗಾರೆಯ ತೊಟ್ಟಿಗಳನ್ನೇ ಮಾಡಿಸಿದ್ದರು. ಅವುಗಳು ಈಗಲೂ ಹಾಗೇ ಉಳಿದಿವೆ. ಆದರೆ ಇಂಥ ದಯಾಳುವಿನ ಜೀವಿತ ಕಾಲದಲ್ಲೇ ಒಂದು ದುರಂತ ಕೃತ್ಯ ನಡೆದುಹೋಯಿತು. ಅದೇ ಅವರ ಮತ್ತು ಅಗ್ರಹಾರದ ಬ್ರಾಹ್ಮಣರ ಅವನತಿಗೆ ಕಾರಣವಾಯಿತು.

''ಅವರ ಸತ್ರದಲ್ಲಿ ಅನೇಕ ಜನ ಅಡುಗೆಯವರಿದ್ದರು. ನಾರಾಯಣ ಭಟ್ಟರೆಂಬುವವರು ರಾಯರ ಖಾಸಾ ಅಡುಗೆಯವರು. ಆತ ಏಕಾಂಗಿ. ವೃದ್ಧ ಆಜನ್ಮ ಬ್ರಹ್ಮಚಾರಿ. ತನ್ನ ವಿರಾಮದ ಕಾಲವನ್ನೆಲ್ಲ ದೇವಸ್ಥಾನದಲ್ಲಿಯೇ ಕಳೆಯುತ್ತಿದ್ದನು. ಆತ ಎಲ್ಲಿಂದಲೋ ಬಂದು, ತನ್ನ ಬಾಲ್ಯದಲ್ಲೇ ರಾಯರ ಕುಟುಂಬದಲ್ಲಿ ಸೇರಿಹೋಗಿದ್ದವನು. ನಾವು ಅವರ ವಿಚಾರವನ್ನು ಹಿರಿಯರ ಬಾಯಿಂದ ಕೇಳಿ ಅರಿತಿದ್ದೇವೆ. ಗ್ರಾಮಸ್ಥರು ರಾಯರಷ್ಟೇ ನಾರಾಯಣ ಭಟ್ಟರನ್ನೂ ಗೌರವದಿಂದ ನೋಡುತ್ತಿದ್ದರು.

ಅವರ ಬಗ್ಗೆ ಜನರಾಡಿಕೊಳ್ಳುತ್ತಿದ್ದ ದಂತಕತೆಗಳು ಮೊನ್ನೆ ಮೊನ್ನೆಯವರೆಗೂ ಪ್ರಚಲಿತದಲ್ಲಿದ್ದವು.

''ದುರಾದೃಷ್ಟದ ಪ್ರಭಾವದಿಂದ ರಾಯರ ಮೇಲೆ ಶನಿದೃಷ್ಟಿ ಬಿದ್ದಿತೆಂದು ಕಾಣುತ್ತದೆ. ಭಟ್ಟರು ರಾಯರ ದುರಾಗ್ರಹಕ್ಕೆ ಗುರಿಯಾದರು. ಮನೆಯ ಯಜಮಾನಿಯ ನೇತೃತ್ವದಲ್ಲೇ ಅತಿಥಿ ಆಗಂತುಕರ ಹಾಗೂ ವಿದ್ಯಾರ್ಥಿಗಳ ಭೋಜನ ನಡೆಯುತ್ತಿತ್ತು. ಊಟಕ್ಕೆ ನೆರೆದವರಿಗೆ ಆಕೆಯೇ ಸ್ವತಃ ಉಪ್ಪಿನಕಾಯಿ ಮತ್ತು ತುಪ್ಪವನ್ನು ಬಡಿಸುತ್ತಿದ್ದರು. ಸುಮಾರು ಹತ್ತುಹದಿನೈದು ಬಳಪದ ಕಲ್ಲುಗಳಿಂದ ಮಾಡಿದ್ದ ಗುಡಾಣಗಳಲ್ಲಿ ವಿಧವಿಧವಾದ ಉಪ್ಪಿನಕಾಯಿಗಳನ್ನು ಯಾವಾಗಲೂ ಶೇಖರಿಸಿಡುತ್ತಿದ್ದರು. ಯಜಮಾನಿಯೇ ಅವು ಕೆಟ್ಟುಹೋಗದಂತೆ ನಿತ್ಯವೂ ನೋಡಿಕೊಳ್ಳುತ್ತಿದ್ದರಲ್ಲದೆ ಊಟದ ಸಮಯಕ್ಕೆ ಸರಿಯಾಗಿ ಅವುಗಳನ್ನು ಒದಗಿಸುತ್ತಿದ್ದರು. ಒಂದು ದಿನ ಉಪ್ಪಿನಕಾಯಿಗಳನ್ನು ತೆಗೆದುಕೊಳ್ಳುವಾಗ, ಆಕೆಯ ಕೈಯಿಂದ ನವರತ್ನ ಖಚಿತವಾದ ಬಳೆಯೊಂದು-ಸಡಿಲವಾಗಿದ್ದುದರಿಂದಲೋ ಅಜಾಗರೂಕತೆಯಿಂದಲೋ- ಜಾರಿ ಉಪ್ಪಿನಕಾಯಿಯ ಗುಡಾಣದಲ್ಲಿ ಬಿದ್ದು ಹೋದುದು ಆಕೆಯ ಗಮನಕ್ಕೇ ಬರಲಿಲ್ಲ. ಆ ಬಳೆಗಳು ರಾಜರಿಂದ ಬಹುಮಾನವಾಗಿ ಬಂದಂಥವು. ಎಲ್ಲರ ಊಟವಾದ ಮೇಲೆಯೇ ಈ ವಿಷಯ ಗಮನಕ್ಕೆ ಬಂತು. ರಾಯರಿಗೂ ಗೊತ್ತಾಯಿತು. ಎಲ್ಲೆಡೆಯೂ ವಿಚಾರಿಸಿ ಕೊನೆಗೆ ಅದು ಕಳವಾಗಿದೆ ಎಂದೇ ತೀರ್ಮಾನಿಸಿದರು. ಆದರೆ ಮೈಮೇಲಿದ್ದ ಒಡವೆಯನ್ನು ಯಾರು, ಎಂತು ಅಪಹರಿಸಲು ಸಾಧ್ಯ!

''ಯಜಮಾನಿ ಸ್ನಾನ ಮಾಡುವಾಗಲೆಲ್ಲ ಆಭರಣಗಳನ್ನೆಲ್ಲ ಕಳಚಿಟ್ಟು ಆಮೇಲೆ ಮತ್ತೆ ಧರಿಸುವ ವಾಡಿಕೆ ಇತ್ತಂತೆ. ಅಲ್ಲದೆ ಹೆಂಗಸರ

ಸ್ನಾನದ ಮನೆಗೆ ಮನೆವಾರ್ತೆಯ ಹೆಂಗಸರಿಗಾಗಲಿ ಗಂಡಸರಿಗಾಗಲೀ ಪ್ರವೇಶಿಸುವ ಅವಕಾಶವೇ ಇರಲಿಲ್ಲ. ವೃದ್ಧನಾಗಿದ್ದ ನಾರಾಯಣ ಭಟ್ಟನೊಬ್ಬನಿಗೆ ಮಾತ್ರ ಅನಿವಾರ್ಯ ಸಮಯದಲ್ಲಿ ವಿನಾಯಿತಿ ಇತ್ತಂತೆ. ಈ ಒಂದು ನೆಪದಿಂದ ಸಂಶಯದ ಮೇಲೆ ಸಂಶಯ ಬೆಳೆದು ನಾರಾಯಣ ಭಟ್ಟನ ಮೇಲೆ ಕಳ್ಳತನದ ಆಪಾದನೆಯನ್ನು ಹೊರಿಸಲಾಯಿತು.

"ಮನೆವಾರ್ತೆಯವರೆಲ್ಲರೂ ಭಯಗ್ರಸ್ತರಾದರು, ಮರುಗಿದರು. ಭಟ್ಟರಿಗೆ ಏನು ಗತಿ ಕಾದಿದೆಯೋ ಎಂದು ಎಲ್ಲರೂ ತಳಮಳಿಸಿಬಿಟ್ಟರು. ವಿಚಾರಣೆ ನಡೆಯಿತು. ಆದರೆ ಸಾಕ್ಷಿಗಳೇ ಇರಲಿಲ್ಲ. "ನಿನ್ನ ಮೇಲೆ ಚೌರ್ಯದ ಆಪಾದನೆ ಇದೆ. ಇದಕ್ಕೆ ನಿನ್ನ ಹೇಳಿಕೆಯೇನು?" ಎಂದು ರಾಯರು ಪ್ರಶ್ನಿಸಿದರಂತೆ. ಭಟ್ಟರು ಶಾಂತರಾಗಿದ್ದರು. ಕದಲಲಿಲ್ಲ, ಅಳುಕಲಿಲ್ಲ. 'ಹೊನ್ನು-ಹೆಣ್ಣುಗಳ ಚಿಂತೆ ಈ ಜೀವಿತ ಕಾಲದಲ್ಲಿ ಈ ನಾರಾಯಣನಿಗೆ ಸ್ವಪ್ನದಲ್ಲೂ ಬಂದಿಲ್ಲವೆಂಬ ಸತ್ಯ ನಿಮಗೆ ನನಗಿಂತಲೂ ಚೆನ್ನಾಗಿ ತಿಳಿದಿದೆ. ಈ ಉತ್ತರೀಯವೊಂದೇ ಇವನಿಗಿರುವ ಆಸ್ತಿ. ಹೆಂಡತಿ ಮಕ್ಕಳಿರುವ ನಿಮ್ಮಂಥ ಶ್ರೀಮಂತರಿಗೇ ಆಭರಣಗಳ ಬೆಲೆ ತಿಳಿದಿರುತ್ತದೆ. ನನಗೋ ಅದರ ಪ್ರಯೋಜನವೇ ತಿಳಿಯದು. ಎಷ್ಟೋ ಸಮಾರಂಭಗಳಲ್ಲಿ ನೀವು ಕೊಡಲು ಸಂಕಲ್ಪಿಸಿದ ಬೆಲೆಬಾಳುವ ದಾನಗಳನ್ನು ಈ ನಾರಾಯಣ ತಿರಸ್ಕರಿಸಿದ್ದು ನಿಮಗೆ ವೇದ್ಯವೇ ಇದೆ. ಇನ್ನು ನಾನು ತಿಂದ ನಿಮ್ಮ ಅನ್ನಕ್ಕೆ ಸೇವಾರೂಪದ ಬೆಲೆಯನ್ನು ಕೊಟ್ಟಿರುತ್ತೇನೆ. ಇದುವರೆಗೆ ನಿಮ್ಮಿಂದ ಏನನ್ನೂ ಪಡೆದಿಲ್ಲ. ಇದು ಸತ್ಯ ನಿತ್ಯ ಸತ್ಯ, ನ್ಯಾಯದೇವತೆ ಹೇಗೆ ಪ್ರೇರೇಪಿಸುವಳೂ ಹಾಗೆ ಮಾಡಲು ನಿಮಗೆ ಸ್ವಾತಂತ್ರ್ಯವಿದೆ' ಎಂದು ಹೇಳಿ ಕುಳಿತರು ಭಟ್ಟರು.

"ರಾಯರಿಗೆ ಭಟ್ಟರ ಮಾತಿನ ಮೇಲೆ ನಂಬಿಕೆ ಬರಲಿಲ್ಲ. ಅನಂತರ ಚಾರರು ಭಟ್ಟರನ್ನು ವಿವಸ್ತ್ರಗೊಳಿಸಿ ಅಗ್ರಹಾರದ ವಾಯವ್ಯ ಮೂಲೆಯಲ್ಲಿದ್ದ ಮರಕ್ಕೆ ಹಗ್ಗಗಳಿಂದ ಬಿಗಿದು ಕಟ್ಟಿ ಹುಣಸೆಯ ಕೊರಡುಗಳಿಂದ ಹೊಡೆದರು. ಅಂಗಗಳು ಭಿನ್ನವಾದವು, ರಕ್ತವು ಕೋಡಿಯಾಗಿ ಹರಿಯಿತು. ಕಣ್ಣಿನ ಗುಡ್ಡೆಗಳು ಉದುರಿದವು. ಅವಸಾನ ಪ್ರಾಪ್ತವಾಗುವ ಮುನ್ನ ಭಟ್ಟರು ನುಡಿದರು:

'ವಿಶ್ವೇಶ್ವರ ಮಹಾದೇವ, ನೀನಿರುವುದೇ ಸತ್ಯವಾದರೆ, ನೀನು ಸತ್ಯಪ್ರಭುವಾದರೆ ಈ ನನ್ನ ನುಡಿಗಳನ್ನು ನಿಜ ಮಾಡಿಸು, ನಾನು ನಿರಪರಾಧಿಯೇ ಆಗಿದ್ದರೆ ನನ್ನ ನುಡಿಗಳು ನಿಜವಾಗಲಿ. ಇವರ ವಂಶದಲ್ಲಿ ತಲೆಮಾರಿಗೆ ಒಬ್ಬನನ್ನು ಬಿಟ್ಟು ಉಳಿದವರೆಲ್ಲ ನಿರ್ನಾಮವಾಗಿ ಹೋಗಲಿ. ಅಗ್ರಹಾರವು ಬೀಳಾಗಲಿ, ಬ್ರಾಹ್ಮಣರು ಚಾಂಡಾಲರಾಗಲಿ, ವೇದಘೋಷಕ್ಕೆ ಬದಲಾಗಿ ಇಲ್ಲಿ ಬರಿ ಗೂಬೆಗಳ ಕೂಗು ಕೇಳಲಿ, ಇವರ ದರ್ಪ, ಅಧಿಕಾರ ಐಶ್ವರ್ಯ ಖ್ಯಾತಿಗಳೆಲ್ಲ ಮಣ್ಣುಪಾಲಾಗಲಿ. ಮುಂದೆ ಅಗ್ರಹಾರದಲ್ಲಿ ನಿಂತವರು ನನ್ನ ಶಾಪವನ್ನು ಅನುಭವಿಸಲಿ. ಈ ರಾಯನು ನಪುಂಸಕನಾಗಿ ಜನ್ಮತಾಳಲಿ. ಹರಹರ-ಮಹಾದೇವ' ಎಂದು ಹೇಳಿ ಅಸುನೀಗಿದರು.

"ನಾರಾಯಣಭಟ್ಟರು ಸತ್ತ ಕೆಲವೇ ದಿವಸಗಳಲ್ಲಿ ಕಳೆದುಹೋಗಿದ್ದ ಬಳೆಯು ಉಪ್ಪಿನಕಾಯಿ ಭಾಂಡದಲ್ಲಿ ಕಾಣಿಸಿಕೊಂಡಿತು. ರಾಯರು ಶಾಂತಿ ಕರ್ಮಗಳನ್ನು ನೆರವೇರಿಸಲು ಸಂಕಲ್ಪಿಸಿದರು. ಆದರೆ ಅಗ್ರಹಾರದಲ್ಲಿದ್ದ ಬ್ರಾಹ್ಮಣರು ಸಹಕರಿಸದೆ ಎಲ್ಲಿಗೋ ಹೊರಟುಹೋದರು. ರಾಯರ ಪತ್ನಿ ಕೊರಗಿ, ಸೊರಗಿ ಅಸುನೀಗಿದರು. ಅಗ್ರಹಾರ ಹಾಳು ಬೀಡಾಯಿತು. ರಥೋತ್ಸವದ ಕಾಲದಲ್ಲಿ ಈಗಲೂ ಭಟ್ಟರ ಹತ್ಯೆ ನಡೆದ ಅಗ್ರಹಾರದ ವಾಯವ್ಯ ಮೂಲೆಯಲ್ಲಿ ಅವರ ಹೆಸರಿನಲ್ಲಿ ಅನ್ನದ ಬಲಿಯನ್ನು ಅರ್ಪಿಸುವ ವಾಡಿಕೆ ಇದೆ. ನಮ್ಮಗಳ ಕಾಲ ಕಳೆದ ಮೇಲೆ ಇದೆಲ್ಲ ಕಟ್ಟುಕತೆಯಾಗಬಹುದು. ಭಟ್ಟರ ಶಾಪದ ಫಲವನ್ನು ನೋಡಿದವರು ಅಗ್ರಹಾರದ ಬೀಳಿನಲ್ಲಿ ಮನೆಗಳನ್ನು ಕಟ್ಟಲು, ಭೀತಿಯಿಂದ ಹಿಂಜರಿಯುತ್ತಾರೆ" ಎಂದು ಹೇಳಿ ಮುಗಿಸಿ

ದರು.

ಇದಾದ ಕೆಲವು ಕಾಲದ ನಂತರ ಸುಬ್ಬಯ್ಯನವರು ನನ್ನ ಮನೆಗೆ ಬಂದಿದ್ದರು. ಅವರೊಡನೆ ಮಾತನಾಡುತ್ತಿದ್ದಾಗ ಮಹಾದೇವಪುರದ ಮಾತು ಬಂತು. ಮರೀಗೌಡರು ನನಗೆ ಹೇಳಿದ್ದ ಕತೆಯನ್ನು ವಿವರಿಸಿದೆ. ಅದಕ್ಕೆ ಅವರು ಅದೆಲ್ಲ ನಿಜವಾಗಿ ನಡೆದುಹೋದ ಕತೆಯೆಂದು ಒಪ್ಪಿಕೊಂಡರಲ್ಲದೆ ರಾಯರ ಪೂರ್ವವೃತ್ತಾಂತವನ್ನು ಹೀಗೆ ವಿವರಿಸಿದರು.

"ಬೆಂಕಿ ಭೀಮರಾಯರು ಸೈನ್ಯದಲ್ಲಿ ಒಬ್ಬ ಅಧಿಕಾರಿಯಾಗಿದ್ದು ಸ್ವಸಾಮರ್ಥ್ಯದಿಂದ ಕ್ರಮೇಣ ದಳವಾಯಿ ಪದವಿಗೇರಿದವರು. ರಾಯರ ಶತ್ರುಗಳೆಲ್ಲ ಭೀಮರಾಯನ ಪೌರುಷಕ್ಕೂ ಯುದ್ಧ ಕುಶಲತೆಗೂ ಅಂಜುತ್ತಿದ್ದರಂತೆ. ಆತ ಯುದ್ಧಗಳಲ್ಲಿ ಸೋತವನೇ ಅಲ್ಲ. ರಣವಿದ್ಯೆಯ ಚಾಕಚಕ್ಯದ ನೈಪುಣ್ಯ ಅವನಿಗೆ



ಒಲಿದುಬಂದಿತ್ತು. ದೇಶದಲ್ಲಿ ದಂಗೆ ದರೋಡೆಗಳಾದಾಗಲೆಲ್ಲ ರಾಜರು ಅವನ ಸಹಾಯವನ್ನು ಕೋರುತ್ತಿದ್ದರಂತೆ. ಆಕ್ರಮಣಕಾರಿ ಶತ್ರುಗಳ ಹಾದಿಯಲ್ಲಿ ಮುಳ್ಳಿನಂತಿದ್ದರು ಈ ರಾಯರು. ಆದುದರಿಂದ ಭೀಮರಾಯರನ್ನು ಹೇಗಾದರೂ ಉಪಾಯದಿಂದ ರಾಜರಿಂದ ಪ್ರತ್ಯೇಕಿಸಬೇಕು ಅಥವಾ ಅವರನ್ನು ಮೋಸದಿಂದಾಗಲಿ ಕೊಲ್ಲಬೇಕೆಂದು ಹಂಚಿಕೆ ಹಾಕುವವರೂ ಇದ್ದರು. ಆ ವೇಳೆಗೆ ರಾಜರು ಕೋಟೆಯ ರಕ್ಷಣೆಯನ್ನು ಅವರಿಗೇ ವಹಿಸಿದ್ದರು. (ಯಾವ ಕೋಟೆ ಎಂಬುದನ್ನು ಅವರು ತಿಳಿಸಲಿಲ್ಲ).ರಾಯರನ್ನು ರಾಜರಿಂದ ಭೇದೋಪಾಯದಿಂದ ಬೇರ್ಪಡಿಸುವುದು, ಮೋಸದಿಂದ ಕೊಲ್ಲುವುದೂ ಅಸಾಧ್ಯವೆಂದು ಅವರಿಗೆ ಮನವರಿಕೆಯಾದಾಗ, ಕೋಟೆಯನ್ನು ಏಕಾಏಕಿ ಮುತ್ತಿದರು. ರಾಯರು ಅದರಲ್ಲಿ ಭಾಗವಹಿಸದಂತೆ ಮಾಡಲು ಅನೇಕ ತಂತ್ರಗಳನ್ನು ಹೂಡಿದರು. ರಾಯರು ಕರ್ಮಶ್ರದ್ಧೆಯುಳ್ಳ ಬ್ರಾಹ್ಮಣರಾಗಿದ್ದುದರಿಂದ ಅವರ ಪಿತೃಶ್ರಾದ್ಧದ ದಿನವನ್ನು ಪತ್ತೆ ಮಾಡಿ ಆ ದಿನ ಯಾರಿಗೂ ತಿಳಿಯದಂತೆ ಯೋಧರನ್ನು ಬೇರೆ ಬೇರೆ ವೇಷಗಳಿಂದ ಜಮಾಯಿಸಿ ಶ್ರಾದ್ಧಕಾಲವನ್ನು ನಿರೀಕ್ಷಿಸಿ ಕೋಟೆಗೆ ಲಗ್ಗೆ ಹತ್ತುವ ಯೋಚನೆ ಮಾಡಿದರು. ಶತ್ರುಗಳ ಕಡೆಯ ಬೇಹುಗಾರರು ರಾಯರ ಪಿತೃಶ್ರಾದ್ಧ ದಿನವನ್ನು ಅರಿಯಲು ಪುರೋಹಿತರನ್ನು ಆಶ್ರಯಿಸಿ, ಅವರ ಸಹಕಾರಕ್ಕಾಗಿ ಬಹುಮಾನದ ಆಮಿಷ ಒಡ್ಡಿದರು. ಪುರೋಹಿತರು ಅವರಿಗೆ ಒಳ್ಳೆಯ ಆತಿಥ್ಯವನ್ನು ಏರ್ಪಡಿಸಿ, ಅವರ ಸಂಚಿಗೆ ಒಳಗಾದಂತೆ ನಟಿಸಿ ಗುಟ್ಟಾಗಿ ಸಕಾಲದಲ್ಲಿ ರಾಯರನ್ನು ಎಚ್ಚರಿಸಿದರು. ಬೇಹುಗಾರರು ಕೋಟೆಯಿಂದ ನುಣುಚಿಕೊಂಡು ಹೋಗುವ ಮೊದಲೇ ಕೊತವಾಲರು ಅವರನ್ನು ಬಂಧಿಸಿ, ಗುಟ್ಟಾಗಿ ದೂರದಲ್ಲಿದ್ದ ಸೆರೆಮನೆಗೆ ತಳ್ಳಿದರು. ಶತ್ರುಗಳು ಬೇಹುಗಾರರಿಂದ ಯಾವ ಸಮಾಚಾರವೂ ಬಾರದೆ. ಅವರು ಹಿಂದಿರುಗದಿರುವುದರ ಸತ್ಯಾಂಶವನ್ನು ಗ್ರಹಿಸಿ ಬೇರೆಯ ಯೋಚನೆ ಮಾಡಿ ಮಹಾಲಯ ಅಮಾವಾಸ್ಯೆಯ ದಿನವನ್ನು ಗೊತ್ತು ಮಾಡಿಕೊಂಡರು.

"ಪುರೋಹಿತರು ಎಚ್ಚರಿಸಿದ ಮೇಲೆ ಭೀಮರಾಯರು ಮೈ ಎಲ್ಲ ಕಣ್ಣಾಗಿದ್ದರು. ಶತ್ರುಗಳು ಯುದ್ಧವನ್ನೇ ನಿಶ್ಚಯಿಸಿರುವುದು ಖಚಿತವಾದಾಗ ಎಲ್ಲ ಸಿದ್ಧತೆಗಳನ್ನೂ ಮಾಡಿದ್ದರು. ಅಮಾವಾಸ್ಯೆಗೆ ಮೊದಲೇ ಸೈನ್ಯವನ್ನು ಆರು ತುಕಡಿಗಳಾಗಿ ಮಾಡಿ ನಾಲ್ಕು ತುಕಡಿಯವರು ರೈತರಂತೆ ವೇಷವನ್ನು ಮರೆಸಿಕೊಂಡು ಕೋಟೆಯ ಹೊರಗಿನ ಹೊಲಗದ್ದೆಗಳಲ್ಲಿ ಆಯುಧ ಸಹಿತವಿದ್ದು ಆಜ್ಞೆ ಬರುವುದನ್ನೇ ಎದುರು ನೋಡುತ್ತಿರಬೇಕೆಂದು ತಿಳಿಸಲಾಗಿತ್ತು. ಎರಡು ತುಕಡಿಗಳು ಕೋಟೆಯ ಮೇಲಿಂದಲೆ ಅದನ್ನು ರಕ್ಷಿಸಬೇಕೆಂದು ನಾಯಕರಿಗೆ ಸೂಚನೆ ಕೊಡಲಾಗಿತ್ತು. ಮಧ್ಯಾಹ್ನದ ವೇಳೆಗೆ ಶತ್ರು ಸೈನ್ಯ ಹಠಾತ್ತಾಗಿ ಕೋಟೆಯ ಹೊರಗೆ ಸುತ್ತುಗಟ್ಟಿ ಕಾಣಿಸಿಕೊಂಡಿತು. ಕೋಟೆಯ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿದುದರಿಂದ ಶತ್ರುಗಳು ಬಾಗಿಲುಗಳನ್ನು ತೆರೆಯಲು ಆನೆಗಳನ್ನು ತಂದಿದ್ದರು. ಭೀಮರಾಯನು ಊಟಕ್ಕೆ ಕುಳಿತಿದ್ದ ಬ್ರಾಹ್ಮಣರಿಗೆ ಆಪೋಶನ ಕೊಟ್ಟು ಸಾವಧಾನವಾಗಿ ಭೋಜನ ಮಾಡಬೇಕೆಂದು ವಿಜ್ಞಾಪಿಸಿ ಹೊರಗೆ ಬಂದಿದ್ದರು. ಕೋಟೆಗೆ ಒದಗಿದ್ದ ಗಂಡಾಂತರದ ವಾರ್ತೆ ಅವರಿಗೆ ಗೂಢಚಾರರಿಂದ ಬಂದಿತ್ತು. ರಾಯರ ಸೈನ್ಯ ಬೇಹುಷಾರಾಗಿರುವಂತೆ ಶತ್ರುಗಳಿಗೆ ತೋರಿತು. ಕ್ಷಣಾರ್ಧದಲ್ಲಿ ಬುರುಜಿನವನು ರಣಕಹಳೆಯನ್ನು ಊದುತ್ತಿದ್ದನು. ಕೋಟೆಯ ಗೋಡೆಯ ಮೇಲೆ ಅಶ್ವಾರೋಹಿಯಾಗಿದ್ದ ಯಮನಂತೆ ಕಾಣಸುತ್ತಿದ್ದ ಭೀಮರಾಯನನ್ನು ಶತ್ರುಗಳು ಕಂಡರು. ಕಹಳೆಯ ಕೂಗನ್ನು ಕೇಳಿದೊಡನೆಯೇ ಅನೇಕ ಭೀಕರ ರಣವಾದ್ಯಗಳು ಮೊಳಗಿದವು. ಕೋಟೆಯ ಹೊರಗೆ ವೇಷವನ್ನು ಮರೆಸಿಕೊಂಡು ಹೊಲಗದ್ದೆಗಳಲ್ಲಿ ಅಡಗಿದ್ದ ಭೀಮರಾಯನ ಯೋಧರು ನಾಲ್ಕೂ ದಿಕ್ಕುಗಳಿಂದ ಶತ್ರುಸೈನ್ಯವನ್ನು ಮುತ್ತಿದರು. ಕೋಲಾ

ಹಲವು ಗಗನವನ್ನೇ ಭೇದಿಸುವಂತಿತ್ತು. ಅಶ್ವಾರೋಹಿಯಾಗಿದ್ದ ಭೀಮರಾಯರು ಕೋಟೆಯ ಗೋಡೆಯ ಮೇಲೆಯೇ ಒಂದು ಪ್ರದಕ್ಷಿಣೆ ಮಾಡಿ ಕದನದ ತೀಕ್ಷ್ಣತೆಯನ್ನು ಗಮನಿಸಿದರು. ಶತ್ರುಗಳು ಆನೆಗಳಿಂದ ಬಾಗಿಲನ್ನು ತಳ್ಳಿಸುತ್ತಿದ್ದರು. ಕೋಟೆಯ ಮೇಲಿದ್ದವರು ಆನೆಗಳ ಗಂಡಸ್ಥಳಕ್ಕೆ ಗುರಿಇಟ್ಟು ಈಟಿಗಳನ್ನೂ ಕಠಾರಿಗಳನ್ನೂ ಎಸೆಯುತ್ತಿದ್ದರು. ಆನೆಗಳು ಅರಚುತ್ತ ಕಾಲಿಗೆ ಸಿಕ್ಕಿದವರನ್ನು ತುಳಿದುಕೊಂದವು.

"ಭೀಮರಾಯರು ಸಮಾಧಾನದಿಂದ ರಣಕುತೂಹಲವನ್ನು ನಿರೀಕ್ಷಿಸಿದರು. ಶತ್ರುಸೈನ್ಯದ ದಳಪತಿಗಳು ಭೀಮರಾಯರನ್ನು ಅಲ್ಲಿ ಅಂದು ನಿರೀಕ್ಷಿಸಿರಲಿಲ್ಲ. ಅವರ ದರ್ಶನವಾದೊಡನೆಯೇ ಜಯಕಾರ ಮಾಡುತ್ತಿದ್ದ ಶತ್ರುಯೋಧರು ಸ್ತಬ್ಧರಾದರು. ಭೀಮರಾಯರು ಕೋಟೆಯ ಹೆಬ್ಬಾಗಿಲ ಕಡೆಗೆ ಗಮನಹರಿಸದೆ ತಮ್ಮ ಮೆಚ್ಚಿನ ಕುದುರೆಯ ಮೈತಟ್ಟಿ ರಮಿಸಿದರು. ಅದರ ಕಿವಿಯಲ್ಲಿ ಕಿವಿಮಾತು ಹೇಳಿದರು. ಕೂಡಲೇ ಕುದುರೆ ಕೆನೆಯಿತು. ಜನರು ದಟ್ಟವಾಗಿ ನಿಂತಿದ್ದ ಕಡೆಗೆ ತಿರುಗಿ ಕೋಟೆಯ ಮೇಲಿಂದ ಜನರ ಮೇಲೆ ನೆಗೆದು, ದೂರದಲ್ಲಿದ್ದ ಶತ್ರುಸೈನ್ಯದ ದಳಪತಿ ಇದ್ದ ಬಿಡಾರದ ಕಡೆಗೆ ಓಡಿತು. ಅಲ್ಲಿದ್ದ ದಳಪತಿಯು ತನ್ನ ಶಿಬಿರದಲ್ಲಿ ಭೀಮರಾಯ ಪ್ರತ್ಯಕ್ಷನಾದುದನ್ನು ಕಂಡು ಹೋರಾಟಕ್ಕೆ ಸಿದ್ಧನಾಗುವ ಮೊದಲೇ ಭೀಮರಾಯ ಅವನ ಹೊಟ್ಟೆಯನ್ನು ಕರುಳನ್ನು ಹಿರಿದು ಶತ್ರುಸೈನ್ಯದ ಮೇಲೆ ಎಸೆದನು. ಇದೆಲ್ಲ ಕ್ಷಣಾರ್ಧದಲ್ಲಿ ನಡೆದುಹೋಯಿತು. ಶತ್ರುಸೈನ್ಯವು ಚೆಲ್ಲಾಪಿಲ್ಲಿಯಾಯಿತು. ಹೊರಕೋಟೆಯಲ್ಲಿದ್ದ ನಾಲ್ಕು ತುಕಡಿ ಯೋಧರು ಶತ್ರುಸೈನ್ಯವನ್ನು ಬಹುದೂರದವರೆಗೂ ಅಟ್ಟಿಸಿಕೊಂಡು ಹೋದರು. ಅನೇಕರು ಹತರಾದರು. ರಾಯರ ಆಜ್ಞೆಯಂತೆ ಶತ್ರುಪಕ್ಷದವರಲ್ಲಿ ಪ್ರತಿಭಟಿಸಿದವರ ಶಿರಚ್ಛೇದನ ಮಾಡಿ ಶರಣಾಗತರನ್ನೂ ಆನೆ-ಕುದುರೆಗಳನ್ನೂ ವಶಕ್ಕೆ ತೆಗೆದುಕೊಂಡರು. ಮಧ್ಯಾಹ್ನದಲ್ಲಿ ಪ್ರಾರಂಭವಾದ ಯುದ್ಧ ರಾತ್ರಿಯ ವೇಳೆಗೆ ಶಾಂತವಾಯಿತು. ಭೀಮರಾಯರು ಸ್ನಾನ ಮಾಡಿ ಮನೆಗೆ ಹೋದಾಗ ಊಟಕ್ಕೆ ಕುಳಿತಿದ್ದ ಬ್ರಾಹ್ಮಣರು ಶ್ರಾದ್ಧಪೂರ್ತಿಯಾಗದಿದ್ದುದರಿಂದ ಅಲ್ಲೇ ಕುಳಿತಿದ್ದರು. ರಾಯರು ಆ ಬ್ರಾಹ್ಮಣರಿಗೆ ನಮಸ್ಕರಿಸಿ, ಕ್ಷಮಾಪಣೆ ಕೇಳಿಕೊಂಡರು, 'ದೇಶದ ಪ್ರಜೆಗಳ ಸುರಕ್ಷತೆಗಾಗಿ ಯುದ್ಧದಲ್ಲಿ ಕೆಲವರನ್ನು ಕೊಲೆ ಮಾಡಿ ಬಂದಿರುತ್ತೇನೆ. ನನಗೆ ಪ್ರಾಯಶ್ಚಿತ್ತ ಮಾಡಿಸಿ ಶ್ರಾದ್ಧಕರ್ಮವನ್ನು ಪೂರ್ತಿ ಮಾಡಿಸಬೇಕು' ಎಂದು ಕೇಳಿಕೊಂಡರು.

"ರಾಜರು ಇವರು ತೋರಿಸಿದ ಪರಾಕ್ರಮಕ್ಕೂ ದೇಶಭಕ್ತಿಗೂ ಮೆಚ್ಚಿ ಒಂದು ಗ್ರಾಮವನ್ನೇ ರಕ್ತಕೊಡಿಗೆಯಾಗಿ ಕೊಟ್ಟು ಅವರನ್ನು ಸನ್ಮಾನಿಸಿದರು. ಅದೇ ಗ್ರಾಮ ಈಗಿನ ಮಹಾದೇವಪುರ. ಇದಿಷ್ಟೂ ನಾನು ಕೇಳಿದ್ದ ಕತೆ" ಎಂದರು. ★

---

ಸಮಯಕ್ಕೆ ಸರಿಯಾಗಿ ಅಡಿಗೆ ಮಾಡದಿದ್ದರೆ ಅಡುಗೆಯವನಿದ್ದು ಏನು ಪ್ರಯೋಜನ? ಆದ್ದರಿಂದ ಅಡುಗೆಯವನಿಗೆ ಮುಖ್ಯವಾಗಿ ಇರಬೇಕಾದ ಗುಣ ಸಮಯಪಾಲನೆ. ಇದೇ ಮಾತು ಮನೆಗೆ ಬರುವ ಅತಿಥಿಗಳಿಗೂ ಅಷ್ಟೇ ಸರಿಯಾಗಿ ಅನ್ವಯಿಸುತ್ತದೆ.

• ಆ್ಯಂತೀಲ್ಮ್ ಬ್ರೀಟ್ ಸಾವರಿನ್

---

ಕೊಲಂಬಸ್ ಅಂದು ಅಮೆರಿಕವನ್ನು ಕಂಡುಹಿಡಿಯುವುದಕ್ಕೆ ವೆಚ್ಚ ಮಾಡಿದ ಹಣ ಇಂದು ಅಲ್ಲಿ ಉಳಿಯಲು ಒಂದು ವಾರವೂ ಸಾಕಾಗುವುದಿಲ್ಲ.

• ರಾಬರ್ಟ್ ವೆಂಕ್

## ಮಾತು – ಮಾಣಿಕ್ಯ

೨೯

# ಬೆಂಕಿ ಬದುಕಿಗಾಗಿ

ಬಣ ಕಟ್ಟಿಕೊಂಡು ಕಣಕ್ಕಿಳಿಯುವುದು ನಮ್ಮಲ್ಲಿಯ ಹಲವಾರು ಹಳ್ಳಿಗಳಿಗೆ ಹಳೆಯ ಕಾಲದಿಂದಲೂ ಅಂಟಿಕೊಂಡು ಬಂದ ಜಾಡ್ಯ. ಒಂದಿಲ್ಲೊಂದು ನೆಪ ಸಾಕು, ಹಗೆತನದ ಹೊಗೆಯಾಡತೊಡಗುತ್ತದೆ. ಹೊಗೆ ಇದ್ದಲ್ಲಿ ಬೆಂಕಿ ಇರಲೇಬೇಕು. "ಯತ್ರ ಯತ್ರ ಧೂಮಃ ತತ್ರ ತತ್ರ ವಹ್ನಿಃ" ಎಂಬ ತರ್ಕಶಾಸ್ತ್ರದ ವಿಚಾರ ಸರಣಿ ಅನುಭವ ಸಿದ್ಧ. ಒಂದು ವಿಷ ಗಳಿಗೆಯಲ್ಲಿ ಬಣವೆಗೆ ಬೆಂಕಿ, ಗಾಳಿಯ ಹೊಡೆತದಿಂದ ಪಕ್ಕದ ಮನೆಗಳಿಗೂ ಹರಡಿದರೆ ಅಚ್ಚರಿಪಡಬೇಕಿಲ್ಲ. ಆಗ ಉರಿವ ಮನೆಯ ಗಳ ಹಿರಿಯುವವರಿಗೂ ಕೊರತೆ ಇಲ್ಲ.

ಕಾರಣಾಂತರಗಳಿಂದ ಈಗ ನಗರೀಕರಣದತ್ತ ನಾಗಾಲೋಟ. ಹಳ್ಳಿಗರಿಂದ, ನಗರಗಳತ್ತ ವಲಸೆ. ಇಲ್ಲಿ ಬದುಕಿನ ಹೊಸ ಅಧ್ಯಾಯ. ಆದರೇನು? ಮನುಷ್ಯನ ಹುಟ್ಟುಗುಣ ಬಲು ಗಟ್ಟಿ. ಸುಟ್ಟರೂ ತೊಲಗದು. ಹುಗಿದರೂ ಹೋಗದು. ಅಲ್ಲಿ ಹೊತ್ತಿಕೊಂಡ ಬೆಂಕಿ ಇಲ್ಲಿ ನಿರಾತಂಕವಾಗಿ ತಲಪುತ್ತದೆ. ಬಣ ಕಟ್ಟಿಕೊಂಡು ಬಣವೆ ಸುಡುವ ಅಲ್ಲಿನ ಅಂಟುರೋಗ ಇಲ್ಲಿಯೂ ಗಂಟುಬೀಳುತ್ತದೆ. ಆಧುನಿಕ ರಾಜಕಾರಣದ ಅವತರಣದ ಹಿನ್ನೆಲೆಯಲ್ಲಿ ಆಗಾಗ ಮುಷ್ಕರಕ್ಕೆ ಕರೆ, ರಾಸ್ತಾರೋಕೊ, ರೈಲುರೋಕೊ ಎಂಬ ಅಬ್ಬರದ ಕೂಗು.

ನಮ್ಮ ಪ್ರಪಂಚ ಪಂಚ ಮಹಾ ಭೂತಗಳಿಂದ ನಿರ್ಮಿತ. ಇದರ ಹಿಂದಣ ಸೃಷ್ಟಿಕರ್ತ ಸ್ವರ್ಗಕ್ಕೆ ಮಾತ್ರ ಸೀಮಿತ ಎಂಬುದು ಸಾಮಾನ್ಯರ ಕಲ್ಪನೆ. ಆ ವಿಶ್ವಾತ್ಮ ವಿಶ್ವವ್ಯಾಪಿ. ಅಣುರೇಣು,, ತೃಣಕಾಷ್ಠದಲ್ಲೆಲ್ಲ ಆತ ಓತಪ್ರೋತ. ಆತನವು ಎನ್ನಲಾಗುವ ಪೃಥ್ವಿ ಮುಂತಾದ ಅಷ್ಟ ತನುಗಳಲ್ಲಿ ಒಂದಾದ ತೇಜಸ್ಸು ಕೂಡ ಎಲ್ಲೆಡೆ ಹರಡಿಕೊಂಡಿದೆ. ಅದು ಕೆಲವೆಡೆ ಪ್ರಕಟ, ಪ್ರಸ್ಫುಟ. ಇನ್ನು ಬೇರೆಡೆ ಅದು ಸುಪ್ತ ಗುಪ್ತ. ಅನುಕೂಲ ಸಂದರ್ಭ ಒದಗಿತೋ ಅದೆಲ್ಲ ಪ್ರತ್ಯಕ್ಷ. ಅರಣಿ (ಮರದ ತುಂಡು)ಗಳನ್ನು ಒಂದಕ್ಕೊಂದು ಕಡೆವರೆ, ಹೊರಹೊಮ್ಮುವ ಯಜ್ಞೇಯ ಅಗ್ನಿಯಂತೆ, ಕತ್ತಿಗೆ ಕತ್ತಿ ಮಸೆಯುವುದರಿಂದ ಕಾರುವ ಕಿಡಿಯಂತೆ, ನೀರು ತುಂಬಿದ ಮೋಡಗಳು ಒಂದಕ್ಕೊಂದು ಅಪ್ಪಳಿಸಿದಾಗ ಗುಡುಗು ಅಬ್ಬರಿಸಿ ಮಿಂಚು ಚುಮಕಿಸಿ ಖಡ ಖಡಲ್ ಎಂದೆರಗುವ ಸಿಡಿಲಿನಂತೆ, ದೂರ ಕಡಲಿನ ಜಲರಾಶಿಯಲ್ಲಿ ಧಿಗ್ಗನೆ ಮೇಲೇಳುವ ವಡವಾಗ್ನಿಯಂತೆ, ಭೂಮಿಯ ಒಡಲು ಬಿರಿದು ಭುಗಿಲೇಳುವ ಜ್ವಾಲಾಮುಖಿಯಂತೆ, ಸೂರ್ಯ ರಶ್ಮಿಯ ಸ್ಪರ್ಶಕ್ಕೆ ಕಿಡಿಕಾರುವ ಸೂರ್ಯಕಾಂತ ಶಿಲೆಯಂತೆ, ನೇಸರನ ಕಿರಣಗಳಿಗೆ ಎದುರಾಗಿ ಹಿಡಿದ, ರಾವುಗನ್ನಡಿಯಿಂದ ಕಾಗದವು ಹೊತ್ತಿಕೊಳ್ಳುವಂತೆ.

ಪ್ರಶಾಂತವಾದ ನಿಶಾ ಸಮಯದ ನಭೋಮಂಡಲದ ಮೇಲಂಚಿನಲ್ಲಿ ಮುತ್ತುಗಳ ಛತ್ತಿನಂತೆ ಮಿನುಗುವ ಅಗಣಿತ ತಾರಾಗಣವೆಲ್ಲ ಆ ದಿವ್ಯ ತೇಜಸ್ಸಿನ ಆವಿರ್ಭಾವದ ನಿದರ್ಶನವೇ ಸೈ. ಇದಲ್ಲದೆ ಬೆಂಕಿಯ ಉಂಡೆಯಂತೆ ಅಖಂಡವಾಗಿ ಉರಿಯುವ ಮತ್ತು ನಿಲುಗಡೆ ಎಂಬುದನ್ನೇ ಅರಿಯದೆ, ಬೆಳಕನ್ನು ಬೀರುವ, ಬುರುಡೆಯಂತಿರುವ ಭಾಸ್ಕರನಲ್ಲಿಯ ತೇಜಸ್ಸು, ಅದೇ ತೆರನಾಗಿ ಶೀತಲವಾದ, ಆಹ್ಲಾದಕರವಾದ

ಚಂದ್ರಮನಿಂದ ಹೊರಹೊಮ್ಮುವ ಕಾಂತಿ - ಇವು ಕೂಡ ಆ ಸರ್ವವ್ಯಾಪಿ ದಿವ್ಯ ತೇಜಸ್ಸಿನ ದ್ಯೋತಕವಲ್ಲವೆ?

ಭೂಮಿಯ ಮೇಲಂತೂ ಆ ದಿವ್ಯ ತೇಜಸ್ಸು ಅಗ್ನಿಯರೂಪದಿಂದ ಸತತವಾಗಿ ಉಪಸ್ಥಿತ. ಎಳೆಯರಿಂದ ಹಳಬರವರೆಗೆ ಎಲ್ಲರಿಗೂ ಸುಪರಿಚಿತ. ನಮ್ಮ ದೈನಂದಿನ ಕಾರ್ಯಗಳಲ್ಲಿ ಅಗ್ನಿ ಅತ್ಯಂತ ಉಪಯುಕ್ತ. ಅದರ ಉಷ್ಣತೆ ಇಲ್ಲದೆ ಅನ್ನ ಬೇಯುವುದಿಲ್ಲ, ರೊಟ್ಟಿ ಸುಡುವುದಿಲ್ಲ, ಹಾಲು-ನೀರು ಮುಂತಾದ ಪೇಯ ಕಾಯುವುದಿಲ್ಲ. ಯಾವುದೇ ಬಗೆಯ ಯಂತ್ರ ಕಾರ್ಯಪ್ರವೃತ್ತವಾಗುವುದಿಲ್ಲ. ಬೀಡಿ, ಸಿಗರೇಟು ಸೇದುವವರ ಚಟ ಸಿದ್ಧಿಸುವುದಿಲ್ಲ. ಉಂಡ ಅನ್ನ ಅರಗುವುದಿಲ್ಲ, ನಮ್ಮ ಶರೀರ ಜೀವಂತವಾಗುವುಳಿಯುವುದಿಲ್ಲ. ಅಗ್ನಿ ಅದೆಷ್ಟು ಅಗತ್ಯ ಎಂಬುದನ್ನು ಎತ್ತಿ ತೋರಿಸಲು ಇವಿಷ್ಟು ಸಾಕಲ್ಲವೆ?

ವಿಶ್ವದಲ್ಲಿಯ ಮೂಲ ತೇಜಸ್ಸು ಒಂದೇ ಒಂದಾದರೂ ಅದರ ಆವಿರ್ಭಾವವಾದ ಅಗ್ನಿ ವಿವಿಧ ಇಂಧನದ ಸಂಯೋಗದಿಂದಾಗಿ ಬೇರೆ ಬೇರೆಯಾಗಿ ಕಾಣಿಸಿಕೊಳ್ಳುತ್ತದೆ. ಕಟ್ಟಿಗೆಯೊಂದಿಗೆ ಕೂಡಿದಾಗ ಜ್ವಾಲೆಯಾಗಿ, ಇದ್ದಲಿನೊಂದಿಗೆ ಸೇರಿದಾಗ ಕೆಂಡವಾಗಿ, ಎಣ್ಣೆ ತುಂಬಿದ ಹಣತೆಯಲ್ಲಿಯ ಬತ್ತಿಯ ಜೊತೆಗೆ ಜ್ಯೋತಿಯಾಗಿ, ಸೌದೆಯ ಕಣಗಳೊಂದಿಗೆ ಚೆರೆತರೆ ಹಾರುವ ಕಿಡಿಯಾಗಿ- ಎಂದು ಮೊದಲಾಗಿ ತೋರುವುದೆಲ್ಲ ಅಗ್ನಿಯರೂಪಗಳೆ. ಇದಲ್ಲದೆ ಇಂಧನದ ವ್ಯತ್ಯಾಸದಿಂದಾಗಿಯೋ, ಜ್ವಲನಕ್ರಿಯೆಯ ಪ್ರಮಾಣದಿಂದಾಗಿಯೋ ಇದರ ವರ್ಣ ಕೂಡ ವೈವಿಧ್ಯಪೂರ್ಣ - ಬಿಳಿ, ಇಲ್ಲವೆ ಹಳದಿ, ಇಲ್ಲವೆ ಕಂದು, ಇಲ್ಲವೆ ನೀಲಿ ಇತ್ಯಾದಿ. ಕೆಲವೊಂದು ಇಂಧನ ಸುಡುವುದು ಬಲು ನಿಧಾನ; ಕರ್ಪೂರ ಅರಳೆಯಂಥ ಬೇರೆ ಕೆಲವು ಕುರುಕುರು ಸುಟ್ಟುಹೋಗುವಂಥವು. ಬೆಂಕಿಯನ್ನು ನಂದಿಸಲು ಸಾಮಾನ್ಯವಾಗಿ ಬಳಸಲಾಗುವ ನೀರು ಕೂಡ ಅಗ್ನಿಯನ್ನು ಸೃಜಿಸಬಲ್ಲದು ಎಂಬುದೊಂದು ಸೃಷ್ಟಿಯ ವೈಚಿತ್ರ್ಯವೇ ಸೈ. ವಡವಾಗ್ನಿಗೆ ಇನ್ನೊಂದು ಹೆಸರು ಅಬಿಂಧನ. ಅಪ್ ಎಂದರೆ ನೀರನ್ನು + ಇಂಧನ ಎಂದರೆ ಉರುವಲನ್ನಾಗಿ ಪಡೆದಿರುವುದರಿಂದ ಇಂಥ ಪದ ವಡವಾಗ್ನಿಯ ಸೂಚಕ.

ಅಗ್ನಿಯದು ಊರ್ಧ್ವಮುಖಿ. ಯಾವಾಗಲೂ ಅಂತರಿಕ್ಷದತ್ತ ನೆಗೆತ. ಅಗ್ನಿಪದದ ವ್ಯುತ್ಪತ್ತಿ- "ಅಂಗ್ ಅಂಗತಿ, ಊರ್ಧ್ವಂಗಚ್ಛತಿ"- ಕೂಡ ಇದನ್ನೇ ಮಾರ್ದನಿಸುವಂತಿದೆ. ಅಗ್ನಿ ಔನ್ನತ್ಯದ ಸಂಕೇತ. ಪ್ರಗತಿಯ ದ್ಯೋತಕ ಎಂಬುದರಲ್ಲಿ ಸಂದೇಹವಿಲ್ಲ. ಇದೆಲ್ಲದಕ್ಕೂ ಮಿಗಿಲಾಗಿ ಅಗ್ನಿ ಪವಿತ್ರತೆಯ ಪ್ರತೀಕ. ತಾನು ಪವಿತ್ರವಾಗಿರುವುದರ ಜೊತೆಗೆ ತನ್ನಲ್ಲಿ ಇರಿಸಿದುದನ್ನು ಕೂಡ ಪವಿತ್ರಗೊಳಿಸುವ ಮಹತ್ತರ ಕಾರ್ಯ ಇದರದು. ಬಂಗಾರವು ವಿಶುದ್ಧವೋ ಅಶುದ್ಧವೋ ಎಂಬುದು ನಿರ್ಧಾರಗೊಳ್ಳುವುದು ಆ ಚಿನ್ನದ ತುಣುಕನ್ನು ಬೆಂಕಿಯಲ್ಲಿ ಪುಟಕ್ಕೆ ಹಾಕಿದಾಗ ತಾನೆ?.

ಅಗ್ನಿ ಜೀವನ್ಮುಕ್ತನಿದ್ದಂತೆ. ಯಾವುದರ ಬಗೆಗೂ ದ್ವೇಷ ಭಾವನೆ ಇಲ್ಲ. ವಿಶೇಷ ಅಭಿಲಾಷೆಯೂ ಇಲ್ಲ- "ದ್ವೇಷ್ಯಂ ನಾಸ್ತಿ, ಪ್ರಿಯಂ ನಾಸ್ತಿ, ಯಸ್ಯ ನಾಸ್ತಿ ಶುಭಾಶುಭಂ" ಎನ್ನುವಂತೆ. ಹೋಮಾದಿ ಮಂಗಳಕಾರ್ಯಗಳಲ್ಲಿ ಹೇಗೋ ಹಾಗೆಯೇ ಅಂತ್ಯಸಂಸ್ಕಾರದಂತಹ ಶೋಕ ಪ್ರಸಂಗದಲ್ಲಿ ಕೂಡ ಅಗ್ನಿಯ ಬಳಕೆ. ಒಂದೇ ಅಂತರ ಒಂದು ಸ್ವಾಹಾಕಾರ, ಇನ್ನೊಂದು ಸ್ವಧಾಕಾರ. ಸ್ವಾಹಾ ಮತ್ತು ಸ್ವಧಾ ಅಗ್ನಿಯ ಪತ್ನಿಯರು ಎಂದೆನಿಸಿಕೊಳ್ಳುತ್ತಾರೆ.

ಮಾನವರ ಒಳತಿಗೋಸುಗ ದೇವತೆಗಳು ಅಗ್ನಿಯನ್ನು ಭೂಲೋಕದೊಳಗೆ ತಂದಿರಿಸಿದರಂತೆ. ಇದು ನಮ್ಮ ಪ್ರಾಚೀನರ ನಂಬಿಗೆ. ಇಂಥ ಕಲ್ಪನೆಯ ತಪ್ಪು ಒಪ್ಪುಗಳನ್ನು ವಿಶ್ಲೇಷಿಸುವುದು ಇಲ್ಲಿ ಅನಗತ್ಯ. ಒಂದು ಮಾತು ಮಾತ್ರ ನಿರ್ವಿವಾದ: ಅಗ್ನಿ ಮಹದುಪಕಾರಿ; ಎಂತಲೆ ಪುರೋಹಿತ ಎಂಬ ಅಭಿಧಾನಕ್ಕೆ ಪಾತ್ರ. ಆದರೆ ಅಷ್ಟೇ ಅಪಾಯಕಾರಿ ಕೂಡ. ಅದು ತಂದೊಡ್ಡುವ ಅನರ್ಥಗಳಿಗೆ ಪ್ರಕೃತಿ ಪ್ರಕೋಪ ಕೆಲಮಟ್ಟಿಗೆ ಕಾರಣ. ಹೆಚ್ಚು ಬಲವತ್ತರವಾದ ಕಾರಣ ಮಾನವ ಪ್ರಮಾದವೆಂದೇ ಹೇಳಬೇಕು. ತಪ್ಪು ಎಸಗುವವ ಮಾನವ; ದಯೆ-ಮಾಯೆ ಎಳ್ಳನಿತು ಈ ಅಗ್ನಿಗಿಲ್ಲ ಎಂದು ತೆಗಳಿಕೆಗೆ ಗುರಿಯಾಗಬೇಕು ಈ ಅಗ್ನಿದೇವ! ಹೇಗಿದೆ ಈ ಪ್ರಪಂಚದ ವೈಶಿಷ್ಟ್ಯ?

**• ಪ್ರೊ. ಶ್ರೀನಿವಾಸ ತೋಫಖಾನೆ**

# ಹರಟೆ

• ಪ್ರಭಾ

# ಸವೆಯೋದು...

ಅನಾದಿ ಕಾಲದಿಂದಲೂ ಸವೆಯೋ ಪ್ರಸಂಗಗಳು ನಮ್ಮಲ್ಲಿದ್ದೇ ಇವೆ. ಇದರ ಮೊಟ್ಟ ಮೊದಲ ದಾಖಲಾತಿ ಬಹುಶಃ ನಮ್ಮ ಮಹಾ ಕಾವ್ಯವಾದ ಮಹಾಭಾರತದಲ್ಲಿ ಕಾಣಸುತ್ತೆ. ದೇವಾದಿ ದೇವತೆಗಳ ಕಾಲುಗಳು ನೆಲವನ್ನು ಮುಟ್ಟದಿರುವುದರಿಂದ ಅವುಗಳು ಸವೆಯುವು ದಿಲ್ಲ. ಅದೇ ದೇವಾನುದೇವತೆಗಳು ಭೂಮಿಗೆ ಬಂದು ಮನುಷ್ಯ ಜನ್ಮವೆತ್ತಿದಾಗ ಅವರ ಕಾಲುಗಳು ನೆಲಕ್ಕೆ ತಾನೇ ಉಜ್ಜಿಕೊಂಡೇ ನಡೆಯಬೇಕು. ಆಗ ಸವೆತ ಆರಂಭವಾಗುತ್ತೆ.

ಅದೇ ರೀತಿ ಸವೆತದ ಇನ್ನೂ ಒಂದು ದಾಖಲಾತಿ ನಮ್ಮ ರಾಮಾಯಣದಲ್ಲಿ ಬಂದಿದೆ. ಇಲ್ಲಿ ಸವೆದಿರುವುದು ಜೋಡಲ್ಲ;



ಸವೆತ ಇರುವುದೇ ಬಾಳು, ಮತ್ತು ಸವೆತ ಇರುವುದರಿಂದಲೇ ಈ ಜಗತ್ತು!

ಬದಲಿಗೆ ರಥಕ್ಕೆ ಹಾಕುವ ಕಠಾರಿ! ಇದು ಸವೆದು ಸವೆದು ದಶರಥ ರಥ ಓಡಿಸಬೇಕಾದರೆ ಕಠಾರಿ ಕಳಚಿಬೀಳುತ್ತದೆ. ಕಠಾರಿ ಕಳಚಿರುವುದನ್ನು ಕಂಡ ಕೈಕೇಯಿ ಅದರ ಬದಲು ತನ್ನ ಬೆರಳಿಡುತ್ತಾಳೆ ಮತ್ತು ಅದರಿಂದ ಮೂರು ವರಗಳನ್ನು ಪಡೆಯುತ್ತಾಳೆ. ಈ ಮೂರು ವರಗಳನ್ನು ಉಪಯೋಗಿಸಿ ಒಂದು ರಾಮಾಯಣವೇ ನಡೆಯುವಂತೆ ಮಾಡುತ್ತಾಳೆ. ಸವೆತದಿಂದ ಒಂದು ರಾಮಾಯಣವೇ ಹುಟ್ಟುತ್ತದೆ. ಅದೇ ರಾಮಾಯಣ ಇಡೀ ಒಂದು ಜನಾಂಗಕ್ಕೆ ಒಂದು ಮಹತ್ವಪೂರ್ಣವಾದ ಮೌಲಿಕವಾದ, ಸತ್ಯ, ನ್ಯಾಯ, ಧರ್ಮ ಮೊದಲಾದ ತತ್ವಗಳನ್ನು ಬೋಧಿಸುವಂತಹ ಪುರಾಣ ಗ್ರಂಥವಾಗಿ ಬೆಳೆಯುತ್ತದೆ!

ನಮ್ಮ ಕೋಲೀಗು ಹನುಮಂತರಾಯ ಮೊನ್ನೆ ಚಿಂತಾಕ್ರಾಂತನಾಗಿ ತಲೆ ಮೇಲೆ ಕೈಹೊತ್ತು ಕುಳಿತಿದ್ದ. ಹೆಸರಿಗೆ ತಕ್ಕ ಹಾಗೆ ಈ ಹನುಮಂತರಾಯ ಭಾರೀ ಚಟುವಟಿಕೆಯ ಸಮುದ್ರ. 'ಏನಾದರೂ ಮಾಡುತಿರು ತಮ್ಮಾ' ಎಂಬ ಕವಿವಾಣಿಯಲ್ಲಿ ಅಚಲವಾದ ನಿಷ್ಠೆಯನ್ನು ಹೊಂದಿ ಅದರಂತೆ ತನ್ನ ಜೀವನ ರೂಪಿಸಿಕೊಂಡಿರುವಾತ. ಅಂತಹ ವ್ಯಕ್ತಿ ಚಿಂತಾಕ್ರಾಂತನಾಗಿ ತಲೆಯ ಮೇಲೆ ಕೈಹೊತ್ತು ಕುಳಿತನೆಂದರೆ ಅದೆಂತಹ ವಿಪತ್ತು ಬಂದಿದೆಯೋ ಎನಿಸಿತು.

"ಏನಪ್ಪಾ ಸಮಾಚಾರ?" ಅಂದೆ.

"ನನಗೂ ನನ್ನಾಕೆಗೂ ಕೊಂಚ ರಬ್ಬಿಂಗ್," ಅಂದ.

"ಯಾವ ಗಂಡ ಹೆಂಡತಿಗೆ ರಬ್ಬಿಂಗ್ ಇರೊಲ್ಲ ಹೇಳು" ಅಂದೆ.

"ಇದು ಬೇರೆತರಹ ರಬ್ಬಿಂಗ್," ಅಂತ ಅದರ ವಿವರಣೆ ನೀಡಿದ. ಹೆಂಡತಿ ಇವನನ್ನು ಕಾಸಿನ ಖರ್ಚು ಕೇಳುವುದು, ಇವನು ಖರ್ಚಿನ ವಿವರ ನೀಡುವುದು ಒಂದು ಮಾಮೂಲಂತೆ. ಅದೇ ರೀತಿ ಹಿಂದಿನ ದಿನ ಮಾರ್ಕೆಟ್‌ನಿಂದ ಷಾಪಿಂಗ್ ಮುಗಿಸಿಕೊಂಡು ಬಂದ ನಂತರ ಇಬ್ಬರೂ ಕೂತು ಖರ್ಚು, ವೆಚ್ಚ ತನಿಖೆ ನಡೆಸಿದರು. ಇವನ ಅದೃಷ್ಟಕ್ಕೆ ಆರು ರೂಪಾಯಿ ಎಂಬತ್ತು ಪೈಸೆಯ ಲೆಕ್ಕ ಸರಿಹೋಗಲಿಲ್ಲ! ಇವನಾಕೆ ತುಂಬಾ ರೇಗಿದಳಂತೆ. "ನಿಮಗೆ ಬರೊ ಪ್ರತಿ ಕಾಸಿನಲ್ಲಿ ಕಾಸು ಕಾಸಿಗೆ ಲೆಕ್ಕಹಾಕಿ ನಾನು ಸಂಸಾರ ಸಾಗಿಸಿ ಸಾಗಿಸಿ ಸವೀತಾ ಇದ್ದೀನಿ. ನಾನು ಸವೆಯೋಕ್ಕಾದರೂ ಮರ್ಯಾದೆ ಬೇಡವೇ? ಸವೆದೂ ಸವೆದೂ ಸುಣ್ಣವಾಗೋದೇ ನನ್ನ ಹಣೇಲಿ ಬರೆದಿರೋದು... ಈ ನಿಟ್ಟಿನಲ್ಲಿ ಮಾತುಕತೆ ಮುಂದುವರೆದು ಇವನಿಗೆ ನೀರು ಇಳಿಸಿದಳಂತೆ. ಅಲ್ಲವಯ್ಯಾ ಆಕೆ ಒಬ್ಬಳೇನೇ ಸಂಸಾರಕ್ಕೋಸ್ಕರ ಸವೀತಾ ಇರೋದು? ನಾನು ಸವೀತಿಲ್ಲವೇ?... ಅಂತ ಈತನ ಯೋಚನೆ.

"ಚಿಂತಿಸಬೇಡ. ಸಂಸಾರ ಅಂದ ಮೇಲೆ ಎಲ್ಲರೂ ಸವೆಸಲೇ ಬೇಕು. ಹೆಂಡತಿಗೆ ಒಂದೆರಡು ಒಳ್ಳೆ ಮಾತು ಹೇಳಿ ಅವಳನ್ನು ಸಾರಿ ಕೇಳು" ಅಂತ ಅಡ್ವೈಜಿಸಿದೆ. ಯಾಕೆ ಅಂದರೆ ಸವೆತಗಳು 'ಸಾರಿ'ಗಳಿಂದ ಸರಿ ಹೋಗುತ್ತವೆ.

ನಾವು ಚಿಕ್ಕವರಿದ್ದಾಗ ಸಾಲ ವಸೂಲಿಗೆಂದು ನಮ್ಮ ಮನೆಗೆ ಕೆಲವರು ಬರುತ್ತಿದ್ದರು. ಕೆಲವು ಸಲ ಈ ವಸೂಲಿಗರು ಹೇಳುವ ಮಾತುಗಳು ನನ್ನನ್ನೂ ಅಚ್ಚರಿಪಡಿಸುತ್ತಿತ್ತು. ಅವುಗಳಲ್ಲಿ ಈಗಲೂ ನನ್ನ ನೆನಪಿನಿಂದ ಮರೆಯಾಗದ ಒಂದೆರಡು ಮಾತುಗಳೆಂದರೆ 'ನಿಮ್ಮ ಮನೆಗೆ ಅಲೆದಲೆದೇ ನನ್ನ ಚಪ್ಪಲಿ ಸವೆದುಹೋಯಿತು' ಅನ್ನುವುದು. ಇದೇ ಡಯಲಾಗ್ ಮೊನ್ನೆ ಮತ್ತೆ ಕೇಳಿಸಿಕೊಂಡೆ. ಆದರೆ ಈ ಬಾರಿ ಅದನ್ನು ಆಡಿದವರು ಬೇರೆಯವರು ಮತ್ತು ಪರಿಸ್ಥಿತಿನೂ ಬೇರೆಯದ್ದು. ಮಗಳಿಗೆ ಗಂಡು ಹುಡುಕುತ್ತಿರುವ ನನ್ನ ಸಹೋದ್ಯೋಗಿ ಒಬ್ಬರು "ಮಗಳಿಗೆ ಗಂಡು ಹುಡುಕುವುದರಲ್ಲೇ ನನ್ನ ಹತ್ತು ಜೊತೆ ಚಪ್ಪಲಿ ಸವೆದಿವೆ" ಅಂದರು. ಇವರಿಗೆ ಮಗಳಿಗೆ ಗಂಡು ಸಿಗಲಿಲ್ಲ ಅನ್ನುವ ದುಃಖಕ್ಕಿಂತಲೂ ಜೋಡು ಸವೆದಿರುವ ದುಃಖವೇ ಜಾಸ್ತಿ ಅಂತ ಆ ಕ್ಷಣಕ್ಕೆ ನನ್ನಗನ್ನಿಸಿದ್ದುಂಟು.

ಜೋಡುಗಳೇ ಅಲ್ಲದೆ ಚಿನ್ನದ ಆಭರಣ

ಗಳೂ ಸವೆಯುತ್ತವೆ ಎಂದು ನನ್ನ ಅನುಭವ ಹೇಳುತ್ತದೆ. ನನ್ನಾಕೆಯ ಕಿವಿಯೋಲೆ ಮಾಡಿಸಿದ ಮೂರೇ ತಿಂಗಳಿಗೆ ಸವೆದು ತಿರುಪು ಎಲ್ಲೋ ಬಿದ್ದು ಮುಂಭಾಗದ ಭಾಗವೂ ಬಿದ್ದ ನಂತರವೇ ತಿಳಿದದ್ದು. ಅದೇ ರೀತಿ ಮನುಷ್ಯನ ಅಂಗಾಂಗಗಳೂ ಸವೀತವಂತೆ. ಕಾಲಿನ ಮೂಳೆ ಸವೆಯೋದು, ಹಲ್ಲುಗಳು ಸವೆಯೋದು, ಒಸಡುಗಳು ಸವೆಯೋದು ನಿಮಗೆಲ್ಲಾ ತಿಳಿದಿರುವ ಸಂಗತಿಗಳೇ.

ನೆನಪುಗಳು ಸಹ ಸವೀತವೆ. ಆದರೆ ಅದನ್ನು ಸವೆತ ಎಂದು ಯಾರು ಯಾಕೆ ಹೇಳಿದ್ದು ನನಗೆ ತಿಳಿಯದು. ಬದಲಿಗೆ "ಮಾಸಿದೆ, ನೆನಪು ಮಾಸಿದೆ" ಎನ್ನುತ್ತಾರೆ. ಬಹುಶಃ ಸವೆಯುವುದಕ್ಕೂ, ಮಾಸುವುದಕ್ಕೂ ನಿಕಟತೆ ಇರಬಹುದು.

ವಯಸ್ಸಾದಂತೆ ಮನುಷ್ಯನ ಅಂಗಾಂಗಗಳು ಸವೀತವೆ ಎಂದು ಎಂದೋ ಓದಿದ ನೆನಪು ನನಗಿದೆ. ಇದರಿಂದಾಗಿಯೇ ಕೆಲವರು ನಡೆವಾಗ ತಟ್ಟಾಡುವುದನ್ನು ಕಂಡು ಅನುಕಂಪಪಟ್ಟಿದ್ದೇನೆ. ಆದರೆ ತಲೆಗೆ ನಿಶೆ ಏರಿಸಿ ತಟ್ಟಾಡುವವರನ್ನು ಕಂಡಾಗ ಆ ಥರ ಅನಿಸಿಲ್ಲ.

ಒಂದೇ ವಸ್ತು ಹಲವಾರು ಬಾರಿ ಕೈ ದಾಟಿದರೆ ಅದು ಸವೆಯುತ್ತೆ ಎಂದು ಅನುಭವಸ್ಥರು ಹೇಳುವ ಮಾತು. ಸವೆದ ನಯಾ ಪೈಸೆಗಳನ್ನು ನೋಡಿದಾಗ ಈ ಮಾತು ತಟಕ್ಕನೆ ನೆನಪಿಗೆ ಬಂದರೆ, ಹುಲ್ಲಿನ ಮೇಲೆ ನಡೆದೂ ನಡೆದೂ ಹುಲ್ಲನ್ನೇ ಸವೆಸಿ ಕಾಲು ದಾರಿ ನಿರ್ಮಿಸಿಕೊಳ್ಳುವ ಮನುಷ್ಯನ ಜಾಣ್ಮೆಯ ಬಗ್ಗೆ ಅಚ್ಚರಿ ಮೂಡುತ್ತದೆ. ನಮ್ಮ ಕಾಡುಗಳು ಸವೆದಿವೆ, ನಮ್ಮ ಪ್ರಕೃತಿ ಸವೆಯುತ್ತಿದೆ, ನಮ್ಮ ಗಾಳಿ, ನಮ್ಮ ಗ್ಲೋಬು ಸಹ ಸವೆತಕ್ಕೆ ಒಳಗಾಗಿದೆ ಎಂದು ಪರಿಸರವಾದಿಗಳು ಬೊಬ್ಬೆ ಹೊಡೆದಾಗ ನಿಜಕ್ಕೂ ಸವೆತದ ಅಗಾಧತೆಯ ಬಗೆಗೆ ಹೆದರಿಕೆಯಾಗುತ್ತದೆ. ಇದೇ ಹೆದರಿಕೆ ಜೀವನ ಸವೆಸುವವರ ಬಗೆಗೂ ಉಂಟಾಗಿ ನಾಳೆ ನಾವೂ ಅದೇ ರೀತಿ ಆಗುತ್ತೇವಲ್ಲಾ ಎಂಬ ಆತಂಕ ಉಂಟಾಗುತ್ತದೆ. ಹಾಗಾಗಿ ಪ್ರಪಂಚದಲ್ಲಿ ಸವೆತವೇ ಇರಬಾರದಿತ್ತು ಎಂದು ಅನೇಕಬಾರಿ ಚಿಂತಿಸಿದ್ದೇನೆ. ಸವೆತವೇ ಇಲ್ಲದಿದ್ದಲ್ಲಿ ಮೊಟ್ಟ ಮೊದಲ ಹೊಡೆತ ಚಪ್ಪಲಿ ತಯಾರಿಕಾ ಕಂಪನಿಗಳಿಗೆ ಬೀಳುತ್ತಿತ್ತು. ಎರಡನೇ ಹೊಡೆತ ಸೋಫಾ ತಯಾರಿಕರಿಗೆ ಎಂದು ನನ್ನ ಅನಿಸಿಕೆ. ಇದೇ ರೀತಿ ನಮ್ಮ ಲಾಜಿಕ್ಕು ಅತ್ತ ಇತ್ತ ಹರಿದಾಡಿದರೆ ಇಡೀ ನಮ್ಮ ವ್ಯವಸ್ಥೆಗೆ ಸವೆತ ನಿಂತು ಹೋಗಿ ನಮ್ಮ ಜೀವನ ಒಂದು ರೀತಿ ಕಲ್ಲುಬಂಡೆಗಳ ಹಾಗಿರುತ್ತಿತ್ತು! ಆದ್ದರಿಂದ ಸವೆತ ಇರುವುದೇ ಬಾಳು ಮತ್ತು ಸವೆತವಿರುವುದರಿಂದಲೇ ಈ ಜಗತ್ತು ಇನ್ನೂ ನಮಗೆ ಆಕರ್ಷಕ ಎನಿಸುತ್ತಿದೆ. ಹೀಗೀದೆ ಸವೆತದ ಮಹಿಮೆ!

## ವಿಚಾರ-ಅವಿಚಾರ

ವಿಚಾರಗಳ ತಾಕಲಾಟದಲ್ಲಿದ್ದಾಗಿನ ಸ್ಥಿತಿ ಒಂದು ರೀತಿಯಲ್ಲಿ ಅವಿಚಾರಿಯ ಸ್ಥಿತಿಯೆ. ಅವಿಚಾರವೆಂಬುದು ಎಲ್ಲ ಆಪತ್ತುಗಳ ಮೂಲ. ವಿಚಾರಪೂರ್ವಕ ಕಾರ್ಯನಿರ್ವಹಿಸುವವನ ಮನೋವಾಂಛಿತ ಕಾಮನೆಗಳು ಸ್ವಯಂಪೂರ್ಣವಾಗಿಬಿಡುತ್ತವೆ.

• ಭಾರವಿ

ಯಾರೂ ಬಿಡಿಸಲಾಗದ ಪ್ರಶ್ನೆಗಳಿಗೆ ಯಾರಿಗೂ ಅರ್ಥವಾಗದ ಉತ್ತರಗಳು-ಅದೇ ತತ್ವಜ್ಞಾನ.

• ಹೆನ್ರಿ ಆ್ಯಡಮ್ಸ್

# ಜಿನ್ನಾರ ಪಾಕಿಸ್ತಾನದ ಕನಸು ನನಸಾದದ್ದು ಇಲ್ಲಿಯೆ

**ಮುಂ**ಬಯಿಯಲ್ಲಿ ಹೆಚ್ಚಾಗಿ ಶ್ರೀಮಂತರೇ ವಾಸಿಸುವ ಸ್ಥಳವೆಂದು ಪ್ರಸಿದ್ಧವಾದ ಮಲಬಾರ್ ಹಿಲ್‌ನಲ್ಲಿ ಮಹಮ್ಮದಲಿ ಜಿನ್ನಾ ೧೯೩೬ರಲ್ಲಿ ತಮಗಾಗಿ ಭವ್ಯ ಬಂಗಲೆಯನ್ನು ಕಟ್ಟಿಸಿ, ಸುಮಾರು ಒಂಭತ್ತು ವರ್ಷಗಳ ಕಾಲ ರಾಜಕೀಯ ಜೀವನವನ್ನು ಅಲ್ಲಿ ನಡೆಸಿದರು. ಈ ಕಟ್ಟಡದಲ್ಲಿಯೆ ಜಿನ್ನಾರವರ ಪಾಕಿಸ್ತಾನದ ಕನಸು ನನಸಾಯಿತು. ವಿಭಜನೆಯ ನಂತರವೂ ಜಿನ್ನಾರವರಿಗೆ ಈ ಬಂಗಲೆಯ ಮೇಲಿನ ಮೋಹ ಬಿಟ್ಟಿರಲಿಲ್ಲ.

ಆಜಮ್' (ನೀತಿ ನಿರ್ಣಾಯಕ) ಎಂದೇ ಪರಿಗಣಿಸಲ್ಪಟ್ಟ ಮಹಮ್ಮದಲಿ ಜಿನ್ನಾ ಅಭಿಜಾತ ಕುಲದವರೆನ್ನಿಸಿ ಆಕರ್ಷಕ ವ್ಯಕ್ತಿಯಾಗಿ ಬಾಳಿದರು. ಉಡುಪು ವ್ಯವಹಾರ, ನಡತೆ, ಎಲ್ಲಾ ರೀತಿಯಲ್ಲೂ ಒಂದು ರೀತಿ ಶೋಕೀ ಜೀವನ ನಡೆಸಿದರು. ೧೯೩೦ರಲ್ಲಿ ಲಂಡನ್ ಬಿಟ್ಟು ಬಂದ ನಂತರ ಮುಂಬಯಿ ಹೈಕೋರ್ಟಿನಲ್ಲಿ ವಕೀಲಿ ವೃತ್ತಿಯನ್ನು ಕೈಗೊಳ್ಳಲು ನಿರ್ಧರಿಸಿದರು.

ಜಿನ್ನಾರವರಿಗೆ ಮುಂಬಯಿ ಬಹಳ

# ವಿವಾದಗ್ರಸ್ತ ಐತಿಹಾಸಿಕ ಜಿನ್ನಾ ಬಂಗಲೆ

*-ಕಬ್ಬಳ್ಳಿ ಗಣಪತಿ ಶರ್ಮ*

ಪ್ರೀತಿಯ ನಗರವಾಗಿತ್ತು. ವಕೀಲಿ ವೃತ್ತಿಯಲ್ಲಿ ಮುಂದುವರಿದಂತೆ ಅಲ್ಲಿ ತಮ್ಮದೇ ಆದ ಬಂಗಲೆಯನ್ನು ಕಟ್ಟಿಸಲು ನಿರ್ಧರಿಸಿದರು. ಮಲಬಾರ್ ಹಿಲ್‌ನಲ್ಲಿ ೪೬೩೬ ಚದರ ಮೀಟರ್ ಉದ್ದ ಹಾಗೂ ೧೬೯೪ ಮೀಟರ್ ಅಗಲವಾದ ಕಟ್ಟಡಕ್ಕೆ ನಕ್ಷೆಯನ್ನು ತಯಾರಿಸುವ ಕೆಲಸವನ್ನು ಬ್ರಿಟಿಶ್ ವಾಸ್ತು ಶಿಲ್ಪಿ ಕ್ಲಾಡ್ ಬೇಲಿ ಎಂಬುವವರಿಗೆ ಒಪ್ಪಿಸಿದರು. ಆ ಎಂಜಿನೀಯರ್ ತಯಾರಿಸಿದ ನಕ್ಷೆಯಲ್ಲಿ ತಮಗೆ ಸೂಕ್ತವೆನಿಸಿದ ಹಾಗೆ ಬದಲಾವಣೆಗಳನ್ನು ಸೂಚಿಸಿದರು. ಇಂದು ಮುಂಬಯಿ

ಅವರ ಇಚ್ಛೆಯಂತೆಯೇ ಈ ಕಟ್ಟಡವನ್ನು ಬ್ರಿಟಿಷ್ ಡೆಪ್ಯುಟಿ ಹೈ ಕಮೀಷನರ್‌ರವರಿಗೆ ಬಾಡಿಗೆಗೆ ಕೊಡಲಾಯಿತು. ಆದರೆ ೧೯೮೨ರ ನಂತರ ಬ್ರಿಟಿಷ್ ಡೆಪ್ಯುಟಿ ಹೈಕಮೀಷನರ್ ತಮ್ಮ ನಿವಾಸವನ್ನು ಬದಲಾಯಿಸಿದ ಕಾರಣ, ಇಂದು ಇದು ವಿವಾದಾಸ್ಪದ ಕಟ್ಟಡವಾಗಿ ಭಾರತ ಹಾಗೂ ಪಾಕಿಸ್ತಾನಗಳೆರಡೂ ತಮ್ಮ ಹಕ್ಕನ್ನು ಸಾಧಿಸುವುದಕ್ಕೆ ಪ್ರಯತ್ನಿಸುತ್ತಿವೆ.

## ಐತಿಹಾಸಿಕತೆ

ಮುಸಲ್ಮಾನರಿಗೆ 'ಕಾಯಿದಾ ಎ

ಯಲ್ಲಿ ಜಿನ್ನಾರವರ ಬಂಗಲೆಗಿಂತಲೂ ಹೆಚ್ಚು ಭವ್ಯವಾದ ಕಟ್ಟಡಗಳು ಇರುವುವಾದರೂ ಅಂದು ಇದು ಇಡಿ ನಗರದಲ್ಲಿ ಭವ್ಯವಾದ, ಸುಂದರ ಕಟ್ಟಡವೆಂದು ಪರಿಗಣಿಸಲ್ಪಟ್ಟಿತ್ತು.

ಬಂಗಲೆಯ ನಕ್ಷೆ ಸಿದ್ಧವಾದ ಕೂಡಲೇ ಜಿನ್ನಾ ಡಿ.ಆರ್. ಚೌಧುರಿ ಎಂಬ ಎಂಜಿನಿಯರರನ್ನು ಗೊತ್ತುಮಾಡಿಕೊಂಡರು. ಕಟ್ಟಡದ ಯಾವ ಭಾಗವೂ ಜಿನ್ನಾರವರ ಒಪ್ಪಿಗೆಯಿಲ್ಲದೆ ರೂಪುಗೊಳ್ಳುತ್ತಿರಲಿಲ್ಲ. ಗೋಡೆ, ಕಿಟಕಿ, ವರಾಂಡ, ಮೆಲ್ಛಾವಣಿ ಎಲ್ಲಾ ಭಾಗಗಳನ್ನು ಜಿನ್ನಾ ಸ್ವತಃ ನಿಂತು ನೋಡುತ್ತಿದ್ದರು. ಯಾವ ಭಾಗದಲ್ಲಾದರೂ ಸ್ವಲ್ಪ ವ್ಯತ್ಯಾಸ ಅಥವಾ ದೋಷ ಕಂಡರೆ ಕೂಡಲೆ ಸರಿಪಡಿಸುವಂತೆ ಹೇಳುತ್ತಿದ್ದರು. ಕಟ್ಟಡಕ್ಕೆ ಬೇಕಾದ ಚಂದ್ರಶಿಲೆಗಳನ್ನು ಇಟಲಿಯಿಂದ ತರಿಸಿದರು. ಸ್ನಾನಗೃಹ, ಶೌಚಗೃಹಗಳನ್ನು ನಿರ್ಮಿಸಲು ಬೋಟಾ ಎಂಬುವವನನ್ನೂ ಶಿಲೆಯ ಕೆಲಸಕ್ಕಾಗಿ ಆ ಕಾಲದಲ್ಲಿ ಹೆಸರಾದ ಫಾಕೋಸ್ ಎಂಬಾತನನ್ನೂ ನಿಯಮಿಸಿಕೊಂಡರು. ಮೊಗಲರ ಕಾಲದ ವಾಸ್ತು ಹಾಗೂ ಶಿಲ್ಪಕಲೆಗಳನ್ನಾಧರಿಸಿ ಮರದ ಕೆಲಸವನ್ನು ಮಾಡಿಸಿದರು.

## ಬಂಗಲೆಯ ವೈಶಿಷ್ಟ್ಯ

ಬಂಗಲೆಗೆ ತಕ್ಕುದಾಗಿ ಉತ್ತರದ ಕಡೆಗೆ ಹತ್ತಲು ವೃತ್ತಾಕಾರದ ಮೆಟ್ಟಿಲುಗಳಿವೆ. ಬೆಳಕು, ಗಾಳಿ ಸಾಕಷ್ಟು ಇರುವ ಈ ಮೆಟ್ಟಿಲುಗಳ ಮೇಲೆ ಕುಳಿತು ಬಂಗಲೆಯ ಸುತ್ತಲಿನ ಸೌಂದರ್ಯವನ್ನು ಸವಿಯಬಹುದು. ಒಳಗೆ ಕುಳಿತರೂ ಅರಬ್ಬೀ ಸಮುದ್ರ ಕಾಣುವ ಹಾಗೆ ಬಂಗಲೆಯನ್ನು ರಚಿಸಲಾಗಿದೆ. ಬಂಗಲೆಗೆ ಹತ್ತಿಕೊಂಡೇ ಮೊಗಲ್ ಶೈಲಿಯಲ್ಲಿ ಉದ್ಯಾನವನ್ನು ನಿರ್ಮಿಸಲಾಗಿದೆ.

ಈ ಬಂಗಲೆಯಲ್ಲಿ ವಿಶಾಲವಾದ ಕೊಠಡಿಗಳು ಸಾಕಷ್ಟಿದ್ದರೂ ಜಿನ್ನಾರವರಿಗೆ ಮೊದಲನೇ ಮಹಡಿಯಲ್ಲಿದ್ದ ೩೬.೯ ಮೀಟರ್ ಉದ್ದ, ೨೦.೬ ಚದರ ಅಡಿ ಉದ್ದದ ಕೊಠಡಿಯೇ ಬಹಳ ಪ್ರಿಯವಾಗಿದ್ದರಿಂದ ಅಲ್ಲಿಯೆ ಜಿನ್ನಾರವರು ರಾಜಕೀಯ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಇದಲ್ಲದೆ ಬಂಗಲೆಯ ವಿಶಾಲವಾದ ಹಜಾರಕ್ಕೆ ಹೊಂದಿಕೊಂಡಂತೆ ಮೂರು ದೊಡ್ಡ ಕೊಠಡಿಗಳಿದ್ದವು. ಅವರ ಡ್ರೆಸ್ಸಿಂಗ್ ರೂಮ್‌ನಲ್ಲಿ ಬೆಲೆಬಾಳುವ ತೇಗದ ಮರಗಳಿಂದ ತಯಾರಿಸಿದ ಪೀಠೋಪಕರಣಗಳಿದ್ದವು. ಎಲ್ಲಾ ಕೊಠಡಿಗಳನ್ನು ಹವಾನಿಯಂತ್ರಣಕ್ಕೊಳಪಡಿಸಲಾಗಿತ್ತು ಹಾಗೂ ಅಲ್ಲಿಂದಲೇ ಅರಬ್ಬೀ ಸಮುದ್ರದ ಸೌಂದರ್ಯವನ್ನು ಅನುಭವಿಸಬಹುದಾಗಿತ್ತು.

ಮಹಮ್ಮದಲಿ ಜಿನ್ನಾ ತಮ್ಮ ಪತ್ನಿ ತೀರಿದ ನಂತರ ೧೯೩೯ ರಿಂದ ಇದೇ ಕೊಠಡಿಯಲ್ಲಿ ಹೆಚ್ಚು ಕಾಲ ಕಳೆದಿದ್ದರು. ಅವರು ತಮ್ಮ ಬಂಗಲೆಗೆ ಕಾವಲುಗಾರರನ್ನು ನಿಯಮಿಸಿಕೊಂಡಿರಲಿಲ್ಲವಾದರೂ ಕೊನೆಯ ಕಾಲದಲ್ಲಿ ರಾಜಕೀಯ ಕಾರಣಕ್ಕಾಗಿ ತಮ್ಮ ಮೇಲೆ ದಾಳಿಯಾದಾಗ, ಉಪಾಯವಿಲ್ಲದೆ ಕಾವಲುಗಾರನೊಬ್ಬನನ್ನು ನೇಮಿಸಿಕೊಂಡಿದ್ದರಂತೆ.

## ರಾಜಕೀಯ ಚಟುವಟಿಕೆ

ಮಹಮ್ಮದಲಿ ಜಿನ್ನಾ ಮುಸ್ಲಿಂ ಲೀಗ್‌ನಲ್ಲಿ 'ಕಾಯಿದೇ ಆಜಮ್' ಆಗಿದ್ದ ಕಾರಣ, ಆ ಸಂಸ್ಥೆಯವರಿಗೆಲ್ಲ ಅವರ ಮಾತು ವೇದವಾಕ್ಯವಾಗಿರುತ್ತಿತ್ತು. ೧೯೦೬ರಲ್ಲಿ 'ಮುಸ್ಲಿಂ ಲೀಗ್' ಕಾಂಗ್ರೆಸ್ಸಿಗೆ ಸಮಾನಾಂತರ ಪಕ್ಷವಾಗಿ ಜನ್ಮತಾಳಿ, ೧೯೧೬ರವರೆಗೂ ಕಾಂಗ್ರೆಸ್‌ನೊಂದಿಗೆ ಮೈತ್ರಿಭಾವದಿಂದಲೇ ವರ್ತಿಸುತ್ತಿತ್ತು. ಆದರೆ ಜಿನ್ನಾರವರ ಪ್ರಭಾವದಿಂದ ಅದು ೧೯೩೮ರಲ್ಲಿ ಭಾರತವನ್ನು ತುಂಡರಿಸಿ, ಮುಸ್ಲಿಮರಿಗಾಗಿ ಸ್ವತಂತ್ರ ರಾಷ್ಟ್ರವನ್ನು ಸ್ಥಾಪಿಸುವ (ಮುಖ್ಯವಾಗಿ ಹಿಂದೂಗಳಿಂದ ಮುಕ್ತವಾದ ರಾಷ್ಟ್ರವನ್ನು ಸ್ಥಾಪಿಸುವ) ತೀರ್ಮಾನವನ್ನು ಕೈಗೊಂಡಿತು. ಜಿನ್ನಾ ಮಹಾತ್ಮಾಗಾಂಧಿಯವರ ಖಿಲಾಫತ್ ಆಂದೋಲನವನ್ನು ಸಮರ್ಥಿಸಲಿಲ್ಲ. ಅವರ ದೃಷ್ಟಿಯಲ್ಲಿ ಭಾರತದ ಮುಸಲ್ಮಾನರು ಇತರ ದೇಶಗಳ

ಮುಸಲ್ಮಾನರಿಗಾಗಿ ತಮ್ಮ ರಾಷ್ಟ್ರಭಕ್ತಿಯನ್ನು ಒಪ್ಪಿಸಬೇಕಾಗಿರಲಿಲ್ಲ.

ಮಹಮ್ಮದಲಿ ಜಿನ್ನಾ ಈ ಬಂಗಲೆಯಲ್ಲೇ ೧೯೩೬ರಿಂದ ೧೯೪೫ರವರೆಗೂ ಇದ್ದು, ಪಾಕಿಸ್ತಾನಕ್ಕಾಗಿ ಹೋರಾಟ ನಡೆಸಿದರು. ಗಾಂಧೀಜಿ ಜಿನ್ನಾರವರ ಮನವೊಲಿಸಲು ಇದೇ ಬಂಗಲೆಯಲ್ಲಿ ಸಂಧಾನ ನಡೆಸಿದರು. ಅಖಂಡ ಭಾರತದ ಸ್ವಾತಂತ್ರ್ಯಕ್ಕಾಗಿ ಮಾತು ಕತೆ ನಡೆಸಿದರು. ೧೯೪೪ನೇ ಇಸವಿಯಲ್ಲಿ ಹದಿನೆಂಟು ದಿನಗಳ ಕಾಲ ಗಾಂಧೀಜಿ ಜಿನ್ನಾರವರೊಡನೆ ಸಂಧಾನ ನಡೆಸಿದರೂ ಫಲಕಾರಿಯಾಗಲಿಲ್ಲ. ಸಂಧಾನ ನಡೆಯುತ್ತಿದ್ದ ಸಮಯದಲ್ಲಿ ಗಾಂಧಿಜಿಯವರನ್ನು ಎದುರುಗೊಳ್ಳಲು ಸ್ವತಃ ಜಿನ್ನಾ ಸಾಹೇಬರು ಪೋರ್ಟಿಕೋವರೆಗೆ ಬರುತ್ತಿದ್ದರು. ಆರಂಭದಲ್ಲಿ ಸೌಜನ್ಯಯುತವಾಗಿ ಆರಂಭಗೊಂಡ ಮಾತುಗಳು ಅಂತ್ಯದಲ್ಲಿ ಬಿರುಸಾಗಿರುತ್ತದ್ದವಂತೆ. ಆದರೆ ಜಿನ್ನಾ ಗಾಂಧೀಜಿಗೆ ದಿನವೂ ಒಂದು ಗುಲಾಬಿ ಹೂವನ್ನು ಕೊಡಲು ಮರೆಯುತ್ತಿರಲಿಲ್ಲ. ಇದನ್ನು ಗಮನಿಸಿದಾಗ ರಾಜಾಜಿ ಕೊನೆಗೊಂದು ದಿನ ಮಾತುಕತೆ ಏನಾಯಿತೆಂದು ಗಾಂಧೀಜಿಯಿಂದ ತಿಳಿಯಲು ಯತ್ನಿಸಿದಾಗ, ಅವರು ನಗುತ್ತಲೇ, 'ಬರಿ ಹೂವು ಸಿಕ್ಕಿತು, ಹಣ್ಣು (ಫಲ) ಸಿಗಲಿಲ್ಲ' ಎಂದು ಉತ್ತರಿಸಿದರಂತೆ.

ಗಾಂಧೀಜಿ ಮಧ್ಯಾಹ್ನದ ಭೋಜನಕ್ಕೆ ಮಿತವಾದ ಶಾಕಾಹಾರವನ್ನು ತೆಗೆದುಕೊಂಡು ಹೋಗುತ್ತಿದ್ದರೆ, ಜಿನ್ನಾ ಸಾಹೇಬರು ಸೊಗಸಾದ ಬಿರಿಯಾನಿ, ಕಬಾಬ್ ಊಟ ತರಿಸಿಕೊಳ್ಳುತ್ತಿದ್ದರಂತೆ. ಆರಂಭದಲ್ಲಿ ಗಾಂಧೀಜಿ ಕುಡಿಯಲು ಕುದಿಸಿದ ನೀರನ್ನು ತಮ್ಮೊಡನೆ ಕೊಂಡೊಯ್ಯುತ್ತಿದ್ದರು. ಕೊನೆಗೆ ಜಿನ್ನಾ ಸಾಹೇಬರ ಮನಸ್ಸಿಗೆ ಬೇಜಾರಾಗಬಹುದೆಂದು ಭಾವಿಸಿ ನೀರನ್ನು ಅಲ್ಲಿಯೇ ತೆಗೆದುಕೊಳ್ಳಲಾರಂಭಿಸಿದರಂತೆ.

## ಅಂತಿಮ ಬಯಕೆ

೧೯೪೭ರ ಆಗಸ್ಟ್ ೧೪ರಂದು ಪಾಕಿಸ್ತಾನ ಅಸ್ತಿತ್ವಕ್ಕೆ ಬಂದಾಗ, ಕಾಯಿದಾ ಆಜಮ್ ಮಹಮ್ಮದಲಿ ಜಿನ್ನಾ ಗವರ್ನರ್ ಜನರಲ್ ಪದವಿ ಸ್ವೀಕರಿಸಲು ಕರಾಚಿಗೆ ತೆರಳಿದರು. ಆದರೆ ಸ್ವತಂತ್ರ ಪಾಕಿಸ್ತಾನದ ಕನಸು ನನಸಾಗುವುದನ್ನು ಕಂಡ ಜಿನ್ನಾ ಸಾಹೇಬರು ಎರಡು ವರ್ಷ ಮುಗಿಯುವ ಮೊದಲೇ ಕೊನೆಯುಸಿರು ಎಳೆದರು.

ಮಹಮ್ಮದಲಿ ಜಿನ್ನಾರವರಿಗೆ ವಿಭಜನೆಯ ನಂತರವೂ ಮುಂಬಯಿಯ ಈ ಬಂಗಲೆ ತಮ್ಮ ಅಧೀನದಲ್ಲೇ ಇರಬೇಕೆಂಬ ಇಚ್ಛೆಯಿತ್ತು. ಅವರಿಗೆ ಮುಂಬಯಿಯಲ್ಲಿ ಈ ಬಂಗಲೆ ಮಾತ್ರವಲ್ಲದೆ 'ನಿವೇಶನ ಹಾಗೂ ಮತ್ತೊಂದು ಮನೆ ಕೂಡ ಇತ್ತು.

ಜವಾಹರಲಾಲ್ ನೆಹರೂ ಜಿನ್ನಾರವರ ಭಾವನೆಯನ್ನು ಅರ್ಥಮಾಡಿಕೊಂಡಿದ್ದರು. ಅಂತೆಯೇ ಪಾಕಿಸ್ತಾನದಲ್ಲಿ ಅಂದು ಭಾರತದ ಹೈಕಮೀಷನರ್ ಆಗಿದ್ದ ಶ್ರೀಪ್ರಕಾಶರವರಿಗೆ ಜಿನ್ನಾರವರನ್ನು ಕಂಡು ಆ ಕುರಿತು ಅಭಿಪ್ರಾಯ ತಿಳಿಯುವಂತೆ ಹೇಳಿದರು.

ಆಗ ಜಿನ್ನಾ ಅವರು "ಮಿಸ್ಟರ್ ಶ್ರೀಪ್ರಕಾಶ್, ದಯವಿಟ್ಟು ಈಗ ಆ ಬಂಗಲೆಯ ಬಗ್ಗೆ ಮಾತನಾಡಬೇಡಿ, ನೆನೆಸಿಕೊಂಡರೆ ಬಹಳ ದುಃಖವಾಗುತ್ತದೆ. ನಾನು ಆ ಬಂಗಲೆಯ ಒಂದೊಂದು ಇಟ್ಟಿಗೆಯನ್ನೂ ಪ್ರೀತಿಯಿಂದ ಕಾಣುತ್ತಿದ್ದೇನೆ. ಬಂಗಲೆಗೆ ಸ್ವಲ್ಪವೂ ಹಾನಿಯಾಗದಂತೆ ನೋಡಿಕೊಳ್ಳುವ ರಾಜ ಪರಿವಾರದವರಿಗಾಗಲಿ ಬ್ರಿಟಿಷರಿಗಾಗಲಿ ಬಾಡಿಗೆ ಕೊಡಲು ಜವಾಹರಲಾಲರಿಗೆ ಹೇಳಿರಿ," ಎಂದರಂತೆ.

ಶ್ರೀಪ್ರಕಾಶರು ಜಿನ್ನಾರ ಇಚ್ಛೆಯನ್ನು ತಿಳಿಸಿದಾಗ ನೆಹರೂರವರು ಬಂಗಲೆಯನ್ನು ಬ್ರಿಟಿಷ್ ಡೆಪ್ಯುಟಿ ಹೈಕಮೀಷನರ್ ಕಚೇರಿಗೆ ಕೊಟ್ಟು, ತಿಂಗಳಿಗೆ ೩೦೦೦ ರೂಪಾಯಿ ಬಾಡಿಗೆ ಕೊಡುವ ವ್ಯವಸ್ಥೆ ಮಾಡಿದರು.

ಈ ಬಂಗಲೆ ೧೯೮೨ರವರೆಗೂ ಬ್ರಿಟಿಷ್ ಡೆಪ್ಯುಟಿ ಹೈಕಮೀಷನರ ಕಚೇರಿಯಾಗಿಯೇ ಉಳಿದುಕೊಂಡಿತ್ತು. ೧೯೮೨ರಲ್ಲಿ ಹೈಕಮೀಷ

ನರರು ಕಚೇರಿಯನ್ನು ಬದಲಿಸಿದಾಗ ಪಾಕಿಸ್ತಾನ ಆ ಬಂಗಲೆಯನ್ನು ತನ್ನ ವಶಕ್ಕೆ ತೆಗೆದುಕೊಂಡು, ಮುಂಬಯಿಯಲ್ಲಿ ತನ್ನ ಡೆಪ್ಯುಟಿ ಹೈ ಕಮೀಷನರ್ ಕಚೇರಿಯಾಗಿ ಪರಿವರ್ತಿಸಲು ಪ್ರಯತ್ನಿಸಿತು. ಜನತಾ ಸರಕಾರ ಈ ಕಟ್ಟಡವನ್ನು ತಾತ್ಕಾಲಿಕ ಒಪ್ಪಂದದ ಪ್ರಕಾರ ಗೇಣಿಯ ಮೇಲೆ ಪಾಕಿಸ್ತಾನಕ್ಕೆ ಕೊಡಲು ನಿರ್ಧರಿಸಿಯೂ ಇತ್ತು. ಆದರೆ ಮುಂದಿನ ಸರಕಾರ ಈ ಒಪ್ಪಂದಕ್ಕೆ ಒಪ್ಪಲಿಲ್ಲ. ಇಂದು ಜಿನ್ನಾ ಬಂಗಲೆ ವಿವಾದಾಸ್ಪದವಾಗಿದೆ. ಭಾರತ ಸರ್ಕಾರ ಬಂಗಲೆಯನ್ನು ಪಾಕಿಸ್ತಾನಕ್ಕೆ ಒಪ್ಪಿಸಲು ಸಿದ್ಧವಿಲ್ಲ. ಬದಲು, ಮ್ಯೂಸಿಯಂ ತೆರೆಯಲು ಯೋಚಿಸುತ್ತಿದೆ. ಇದರ ಯಾವ ಭಾಗವೂ ಹಾಳಾಗದಂತೆ, ಅದರಲ್ಲಿರುವ ಬೆಲೆಬಾಳುವ ಪ್ರತಿಯೊಂದು ವಸ್ತುವನ್ನೂ ಸುರಕ್ಷಿತವಾಗಿ ಇಡುವಂತೆ ಅದು ಎಚ್ಚರಿಕೆ ವಹಿಸುತ್ತಿದೆ.

ಪಾಕಿಸ್ತಾನ ೧೯೬೨ ರಿಂದಲೂ ಈ ಕಟ್ಟಡವನ್ನು ವಿವಾದಗ್ರಸ್ತವಾಗಿಸಿ ಇದರ ಮೇಲೆ ತನ್ನ ಅಧಿಕಾರ ಸ್ಥಾಪಿಸಲು ಹೋರಾಡುತ್ತಿದೆ.

ಸದ್ಯ ಈ ಕಟ್ಟಡಕ್ಕಾಗಿ ಮಹಮ್ಮದಲಿ ಜಿನ್ನಾರವರ ಮಗಳ ಮಗ, ಭಾರತದ ಪ್ರಮುಖ ಉದ್ಯಮಿ ನುಸ್ಲಿ ವಾಡಿಯಾ ತನಗೆ ತನ್ನ ತಾಯಿಯಿಂದ ಬರತಕ್ಕ ಆಸ್ತಿ ಎಂದು ಹುಯಿಲೆಬ್ಬಿಸದಿರುವುದೇ ಸಮಾಧಾನದ ವಿಷಯ.

★

## ಪೀಸಾ ನೇರ್ಪಡೆ

ಜಗತ್ಪಸಿದ್ಧ ಪೀಸಾದ ಗೋಪುರ ಕೆಲವು ಶತಮಾನಗಳಲ್ಲಿ ಕೇಂದ್ರದಿಂದ ನಾಲ್ಕೂವರೆ ಮೀಟರಿನಷ್ಟು ವಾಲಿದೆ. ೧೩ ಅಂತಸ್ತುಗಳದ್ದಾಗಿರಬೇಕಾದ ಈ ಗೋಪುರ ಕಟ್ಟುವಾಗಲೇ ೨.೧ ಮೀಟರಿನಷ್ಟು ವಾಲಿದ್ದರಿಂದ ೮ ಅಂತಸ್ತುಗಳಿಗೇ ಕೆಲಸವನ್ನು ನಿಲ್ಲಿಸಬೇಕಾಯಿತು. ಇಂತಹ ಕಟ್ಟಡಗಳನ್ನು ನೇರ್ಪಡಿಸುವುದರಲ್ಲಿ ಸಿದ್ಧಹಸ್ತರಾಗಿರುವ ಚೀನಾದ ಕವೋ ಪಿಜಾಂಗ್ ಮೊದಲಿನ ೨.೧ ಮೀಟರಿನ ವಾಲುವಿಕೆಗೇ ಗೋಪುರವನ್ನು ಮರಳಿಸುತ್ತೇನೆಂದು ಹೇಳುತ್ತಾರೆ. ಎಳ್ಳಷ್ಟೂ ವಾಲುವಿಕೆಯಿಲ್ಲದಂತೆ ಗೋಪುರವನ್ನು ನೇರ್ಪಡಿಸಬಹುದಾದರೂ ಐತಿಹಾಸಿಕ ಮಹತ್ವವನ್ನು ಕಳೆದುಕೊಳ್ಳುತ್ತದೆಂಬುದರಿಂದಾಗಿ ಅದನ್ನು ತೀರ ಸರಿಪಡಿಸುವ ಉದ್ದೇಶ ಕವೋ ಪಿಜಾಂಗರಿಗಿಲ್ಲ.

ಇದುವರೆಗೂ ಕವೋ ಪಿಜಾಂಗ್ ಚೀನಾದಲ್ಲಿ ೨೬ ವಾಲುತ್ತಿರುವ ಕಟ್ಟಡಗಳನ್ನು ನೇರ್ಪಡಿಸಿದ್ದಾರೆ. ಪೀಸಾ ಗೋಪುರವನ್ನೂ ಮೊದಲಿನ ಸ್ಥಿತಿಗೆ ತರಬೇಕೆಂಬ ಅವರ ಕನಸು ನನಸಾಗುವುದಾದರೆ ಇಟಾಲಿಯನ್ ಸರಕಾರ ಹಾಗೂ ಇತರ ಪ್ರಾಚ್ಯರಕ್ಷಣಾ ಕೇಂದ್ರಗಳು ಬಹುಮಾನವಾಗಿ ಘೋಷಿಸಿರುವ ಹತ್ತು ಕೋಟಿ ಡಾಲರುಗಳಿಗೆ ಒಡೆಯರಾಗುತ್ತಾರೆ ಕವೋ ಪಿಜಾಂಗ್.

• ಟಿ.ಎಸ್. ಲಲಿತ

## ಕಡಿಮೆ ತೂಕದ ಮಿದುಳು!

ಅನತೋಲ್ ಫ್ರಾನ್ಸ್ ಫ್ರೆಂಚ್ ಸಾಹಿತ್ಯದಲ್ಲಿ ಬಹು ದೊಡ್ಡ ಹೆಸರು. ನೋಬೆಲ್ ಬಹುಮಾನ ಪಡೆದಾತ. ೧೯೨೪ರಲ್ಲಿ ಆತ ಮರಣಿಸಿದಾಗ ವಿಜ್ಞಾನಿಗಳು ಕುತೂಹಲದಿಂದ ಅವನ ಮಿದುಳನ್ನು ತೂಗಿ ನೋಡಿದರು. ಆ ವರೆಗೆ ದಾಖಲಾದ ತೂಕಗಳಲ್ಲಿ ಆತನ ಮಿದುಳೇ ಅತಿ ಕಡಿಮೆ ತೂಕದ್ದಾಗಿತ್ತು.

• ಜೆ.ವಿ. ತಿಪ್ಪೇಸ್ವಾಮಿ

# ಪ್ರೀತಿಗೆ

ಬೆಟ್ಟಕ್ಕೆ ತಿಲಕವಿಡು
ಕವಿತೆಗೆ ಮನಸು ಕೊಡು
ಮುನಿಸಲ್ಲಿ ತೆರವಾಗಿ
ಮುಚ್ಚಿ ಕೊಡು ಒಲವ

ದೃಷ್ಟಿಯಾದರೆ ಜಗದ
ಮೂಢನಂಬಿಕೆಯಲ್ಲ
ಒಲವಿನೊಟ್ಟೊಟ್ಟಿಗೇ
ಹೆರರ ಹೆಜ್ಜೆ ಕರುಬುವುದು

ದೇವ-ದೇವನ ಬಿಟ್ಟು
ಪ್ರೀತಿಯಾದಳು ಹುಡುಗಿ
ಸಿರಿಯ ಸೆಲೆ ತೊರೆದು
ನಿನ್ನ ಬಳಿ ಬಂದವಳು

ನೀ ಕೊಟ್ಟದುದ ಮಲುಕಾಡಿ
ಮನ ತುಂಬಬೇಕು
ಅರೆಕ್ಷಣದ ಮಿಲನ
ಇಡಿಯ ಬಾಳಿಗೆ ಸಾಕು

ಕೈಹಿಡಿದು ಮೈದಡವಿ
ಹೃದಯ ತಟ್ಟದ ಹುಡುಗ
ಬಿಗಿದಪ್ಪಿ ಒಂದಾದ
ಸರಸವಂತ

ಒಂದೇ ಕನ್ನಡಿಯಲ್ಲಿ
ಇರಲಿ ಇಬ್ಬರ ಮುಖವು
ಕೆನ್ನೆ-ಕೆನ್ನೆಯು ತಟ್ಟ
ಜೇನ ಸುರಿಸುವ ಒಲವು

ಇರುಳ ಮದುಳಲ್ಲಿ
ಮುಗಿಲಿಗೇರದು ಭಾರ
ಇಡಿಯು ದಿನ ನೀನಾಗೆ
ನಿನ್ನದೇ ಕಾರುಬಾರ



ಕೇಳಬರುತಿದೆ ಅಲ್ಲಿ
ನಿನ್ನ ಗೆಲುವಿನ ಹೆಜ್ಜೆ
ಮತ್ತೆ ನನಗಿನ್ನೇಕೆ
ಕವಿತೆಯೊಳಗಿನ ಲಜ್ಜೆ?

• ಕನ್ನಿಕಾ ಹೆಗಡೆ

# 'ದೇವರು': ಒಂದು ಪ್ರತಿಕ್ರಿಯೆ

• ಶಂಕರ ಅಜ್ಜಂಪುರ

**ಮಾ**ರ್ಚ್ ೧೯೯೫ರ ಸಂಚಿಕೆಯಲ್ಲಿ ಪ್ರಕಟವಾದ ಡಾ. ತರ್ಲಗಟ್ಟಿಯವರ 'ದೇವರು-ಧರ್ಮ' ಕುರಿತು ಈ ಪ್ರತಿಕ್ರಿಯೆ. ದೇವರು ಇದ್ದಾನೆ ಅಥವಾ ಇಲ್ಲ ಎಂಬ ಎರಡೂ ವಾದಗಳನ್ನು ಸ್ವೀಕರಿಸಲು ನಿಷ್ಠೆಯ ಅಗತ್ಯವಿದೆಯೆಂದಾದರೆ ತಳಹದಿಯಲ್ಲಿ 'ಪ್ರಮಾಣ'ವಿರಬೇಕು. ಪ್ರಮಾಣ ರಹಿತವಾಗಿ ಯಾವುದನ್ನೂ ಒಪ್ಪುವುದು ಅಸಂಗತವೆಂಬ ಮತವಿರುವಂತೆಯೇ, ಅಮೂರ್ತ ಚಿಂತನೆಗಳಿಗೆ ಭೌತಿಕ ಪ್ರಮಾಣಗಳನ್ನು ಅಪೇಕ್ಷಿಸುವುದು ಅಸಾಧ್ಯ ಎಂಬ ಮಾತು ಇದೆ. 'ದೇವರು'ಎಂಬುದೇ ಅಮೂರ್ತ ಕಲ್ಪನೆಯಾಗಿರುವಾಗ ಅದಕ್ಕೆ ಪ್ರಾಮಾಣ್ಯವನ್ನು ಒದಗಿಸುವುದು ಅಶಕ್ಯ. ದೇವರೆಂಬುದು ತಾತ್ವಿಕ ಚಿಂತನೆಯಾಗಿ ಉಳಿದಿದ್ದ ಕಾಲದವರೆಗೂ ನಿಗೂಢದ ಅನ್ವೇಷಣೆಯ ಮಾರ್ಗಗಳು ನಿಚ್ಚಳವಾಗಿದ್ದವು. ನಿರಾಕಾರ-ಸಗುಣ-ಬ್ರಹ್ಮನೆಂಬುದು ಮಾನವ ಬುದ್ಧಿ ನಿರ್ಮಿಸಿದ 'ದೇವರ'ಅತ್ಯಂತ ಶ್ರೇಷ್ಠ ಕಲ್ಪನೆಗಳಲ್ಲಿ ಒಂದು. ನಂತರದಲ್ಲಿ ಇದನ್ನು ಸರಳಗೊಳಿಸಲು ಹೊರಟಿದ್ದರಿಂದ, ಮೂಡಿಬಂದ ಸಂಕೇತಗಳು, ಚಿಹ್ನೆಗಳು ಮನುಕುಲಕ್ಕೆ ಉಂಟುಮಾಡಿದ ಪ್ರತಿಕೂಲಗಳ ಪರಿಣಾಮಗಳನ್ನೇ ನಾವಿಂದು ಅನುಭವಿಸುತ್ತಿದ್ದೇವೆ. ಇವುಗಳಿಂದಾಗಿ ಬೆಳೆದ ಪಂಥೀಯತೆಗಳು ಆಯಾ ಪ್ರದೇಶದ ಜನರ ಅಗತ್ಯಗಳನ್ನು, ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುವುದರ ಜತೆಗೇ, ಅಸಂಖ್ಯಾತ ಪಂಗಡ, ಪದ್ಧತಿಗಳ ಜನನಕ್ಕೂ ಕಾರಣವಾಯಿತು.

ವೇದ ಪ್ರಾಮಾಣ್ಯದ ವಿಷಯವಾಗಿ ಸಾಕಷ್ಟು ಜಿಜ್ಞಾಸೆಗಳಿವೆ. ಇದರಲ್ಲಿನ ಸಾಹಿತ್ಯಕ ವಿಷಯಗಳು, ಚಿಂತನೆಯಲ್ಲಿ ಗೂಢರೂಪದಲ್ಲಿ ಗೋಚರಿಸುತ್ತಿದೆಯಾದ ಕಾರಣ ಅಮೂರ್ತದ ಚಿಂತನೆಗಳನ್ನು ಪ್ರತಿಮೀಕರಿಸಿ ನೋಡುವ ಹವ್ಯಾಸವುಳ್ಳವರಿಗೆ ಕಗ್ಗಂಟಾಗಿ ತೋರುತ್ತಿದೆ. ಅಂತಹವರು ಯಾವ ಪ್ರಮಾಣದ ಅವಶ್ಯಕತೆಯನ್ನೂ ಅಪೇಕ್ಷಿಸದೇ, ಮಂತ್ರ ದ್ರಷ್ಟಾರರ ಚಿಂತನೆಗಳನ್ನು ಮನನ ಮಾಡುವುದಕ್ಕೇ ನಮಗೆ ಆಯುಷ್ಯ ಸಾಲದಿರುವಾಗ, ಈ ಬಗ್ಗೆ ವಿಶ್ಲೇಷಣೆ ನಡೆಸುವುದು ಅಧಿಕ ಪ್ರಸಂಗವೆಂದು ಬಗೆದವರು. ಮನುಕುಲದ ಇತಿಹಾಸವನ್ನು ವೈಜ್ಞಾನಿಕ ಆಧಾರ ಸಹಿತ ಬೆನ್ನು ಹತ್ತಿ, ಕೇವಲ ೫೦,೦೦೦ ವರ್ಷಗಳ ಹಿಂದೆಯಷ್ಟೇ ಮನುಷ್ಯನು ಉದಯಿಸಿದನೆಂದು ವಿಜ್ಞಾನ ಪ್ರಮಾಣವಿರುವಾಗ, ವೈದಿಕ ಸಾಹಿತ್ಯರಾಶಿಯು ಇಷ್ಟು ವರ್ಷಗಳ ಹಿಂದೆ ರಚಿತವಾಯಿತೆಂಬ ತೀರ್ಮಾನಕ್ಕೆ ಬಂದರೇ ಹೊರತು, ಅವರ ಒಲವು ಸಾಹಿತ್ಯಕ, ಚಿಂತನಶೀಲ ಅಂಶಗಳತ್ತ ಹರಿಯದಿದ್ದುದು ಮತ್ತೊಂದು ಸ್ವಾರಸ್ಯ.

ಮಹಮ್ಮದೀಯರು, ಕ್ರೈಸ್ತರಿಗೆ ದೇವರು ಸಗುಣ-ನಿರಾಕಾರನಾಗಿದ್ದಾನೆಂದ ಮಾತ್ರಕ್ಕೆ ಅವರಲ್ಲಿಯೂ ಪ್ರತಿಮೀಕರಣದ ಹಂಬಲ ತಪ್ಪಲಿಲ್ಲ. ಗೋರಿ, ಹಸ್ತದ ಚಿಹ್ನೆಗಳು, ಆರಾಧನಾ ಮಂದಿರಗಳ ವ್ಯವಸ್ಥೆ ಇದ್ದೇ ಇದೆ. ತನ್ನ ಬೌದ್ಧಿಕ ಶಕ್ತಿಯ ಅಳವಿಗೆ ಮೀರಿದ ಅಗೋಚರ ಶಕ್ತಿಯು ಬ್ರಹ್ಮಾಂಡವನ್ನು ನಿಯಂತ್ರಿಸು

ತ್ತಿದೆಯೆಂಬ ತಿಳಿವಳಿಕೆ, ಅದನ್ನರಿಯುವ ತಹತಹವೇ ದೇವರ ಪರಿಕಲ್ಪನೆಯ ಮೂಲ, ಪಂಚಭೂತಾತ್ಮಕ ದೇವದೇವತೆಗಳನ್ನು ವೈದಿಕ ಜನಾಂಗ ಪರಿಕಲ್ಪಿಸಿಕೊಂಡ ಕಾಲಕ್ಕೆ. ಮುಂದೆ ಇವೇ ದೇವತೆಗಳು ಸಾವಿರಾರು ರೂಪ ಪಡೆದು ಜನರ ಆರಾಧನೆಯ ವಸ್ತುಗಳಾಗಿ ಮಾರ್ಪಡುತ್ತವೆಯೆಂದು ಊಹಿಸಿಯೂ ಇರಲಾರರು. ಪರಿಶುದ್ಧ ಚಿಂತನೆಯ ಸಾಮಗ್ರಿಯನ್ನು ವೈಯಕ್ತಿಕ, ಸಾಂಘಿಕ ಹಿತಾಸಕ್ತಿಗಳಿಗೆ ಬಳಸಿಕೊಂಡು, ಅವನ್ನು ಗುರುತಿಸಲಾಗದಷ್ಟು ವಿರೂಪಗೊಳಿಸಿ, ಸಮಾಜದಲ್ಲಿ ಮೇಲು-ಕೀಳುಗಳ ಅಂತರ ಬೆಳೆಯುವಂಥ ಪರಿಸ್ಥಿತಿ ನಿರ್ಮಾಣವಾದದ್ದು ನಮ್ಮ ದೇಶದ ದೊಡ್ಡ ದುರಂತಗಳಲ್ಲಿ ಒಂದು. ಐಹಿಕ ಸುಖ ಭೋಗಗಳನ್ನು ಅಭಿವೃದ್ಧಿ ಪಡಿಸಲು ಆಶಿಸದೇ, ಆ ದಿಕ್ಕಿನಲ್ಲಿ ಅಗತ್ಯವಾದ ಚಿಂತನೆ ಪ್ರಯೋಗಗಳನ್ನು ನಡೆಸದೇ, ಕೇವಲ ಬೌದ್ಧಿಕ ಚಿಂತನೆಗಳಿಗೆ ಮಾತ್ರವೇ ಪ್ರಾಧಾನ್ಯ ನೀಡಿದುದರ ಪರಿಣಾಮವಾಗಿ ಅನರ್ಘ್ಯ ವೈದಿಕ ಉಪನಿಷತ್ ಸಾಹಿತ್ಯ ಲಭ್ಯವಾಯಿತು.

ವಸ್ತುನಿಷ್ಠ ಅನ್ವೇಷಣೆಯಲ್ಲಿ ಮುಂದುವರೆದ ಪಾಶ್ಚಾತ್ಯ ವೈಜ್ಞಾನಿಕರು ಭೌತಿಕ ವಿಶ್ಲೇಷಣೆಯ ಮೂಲಕ ಇದೇ ಸತ್ಯಗಳನ್ನು ಅರಸಿದರು. ಇದರಿಂದ ಐಹಿಕ ಭೋಗ ಸಾಮಗ್ರಿಗಳು ಉಪಲಬ್ಧವಾದವೇ ವಿನಾ ದೇವರ ಅಸ್ತಿತ್ವವನ್ನು ಭೌತಪ್ರಮಾಣ ಸಹಿತ ನಿರ್ದೇಶಿಸುವುದು ಅಸಾಧ್ಯವೆಂದೂ, ಅದು ಬೌದ್ಧಿಕ ಚಿಂತನೆಗಳ ಮೂಲಕವೇ ನಡೆಯಬೇಕಾದ್ದು ಅನಿವಾರ್ಯವೆಂದೂ ಗುರುತಿಸಿಕೊಳ್ಳುವಂತಾಯಿತು. ಇದೇ ಚಿಂತನೆಗಳ ಸರಣಿಯಲ್ಲಿ 'ಮಾನವತಾವಾದ'ವೆಂಬ ಶ್ರೇಷ್ಠ ಕಲ್ಪನೆಗೂ ಪುನರ್ಜೀವನ ದೊರೆಯಿತು. ಸಕಲ ಜೀವ ರಾಶಿಗಳನ್ನೂ ಪರಿಸರವನ್ನೂ ಒಳಗೊಳ್ಳದ, ಕೇವಲ ಮಾನವಹಿತ ಕೇಂದ್ರಿತವಾದ 'ಮಾನವತಾವಾದ'ವು ನಿಜಕ್ಕೂ ಸಂಕುಚಿತವಾದುದು. ವ್ಯಕ್ತಿಯ ಚಿಂತನೆ, ನಡವಳಿಕೆಗಳಲ್ಲಿ 'ದೇವರು' ಕೇವಲ ನಿಗೂಢವನ್ನು ಪರಿಶೋಧಿಸುವ ಕುತೂಹಲದ ವಸ್ತುವಾಗಿರದೆ, ಐಹಿಕ ಲಾಭಗಳನ್ನು ಒದಗಿಸುವ ಅಗೋಚರನೂ ಆಗಿರದೇ, ಮಾನವ ಸಾದ್ಗುಣ್ಯವನ್ನು ವರ್ಧಿಸುವಂತಹ, ವಿಶ್ವವ್ಯಾಪಾರಗಳನ್ನು ಬೆರಗಿನ, ವಿಸ್ಮಯದ ದೃಷ್ಟಿಯಿಂದ ನೋಡಲು ಕಲಿಸುವಂಥ ಪ್ರಚೋದಕ ತತ್ವವೆಂದುಕೊಳ್ಳಬಹುದು.

ಇದಲ್ಲದೆ ಮನುಷ್ಯನು ಅಪೂರ್ಣನೆಂದುಕೊಳ್ಳುವುದು, ವಿನೀತ ಭಾವದ ನೈಚ್ಯಾನುಸಂಧಾನವೇ ಸರಿ. ಪರಿಪೂರ್ಣತೆಯ ಒಂದು ಆದರ್ಶ ಮಾತ್ರವೇ ವಿನಾ ಅದನ್ನು ಸಾಕಾರಗೊಳಿಸಿದಾತನ ಎದುರಿಗೂ ಇನ್ನಷ್ಟು ಸವಾಲುಗಳು ಹುಟ್ಟಿಕೊಳ್ಳಬಹುದು. ಈ ತರ್ಕದಲ್ಲಿ ಅಪೂರ್ಣನೆಂದು ಹೇಳಿಕೊಳ್ಳಬಹುದಾದರೂ, ಬೆಳವಣಿಗೆಗೆ ತಡೆಯೊಡ್ಡುವಂಥ ನೈಚ್ಯಭಾವವು ಅನಾರೋಗ್ಯಕರವಷ್ಟೇ ಅಲ್ಲ; ಅನಪೇಕ್ಷಣೀಯವೂ ಹೌದು.

★

## ಕಿರಿಯ ಪತ್ರಕರ್ತ

ಗುಜರಾತದ ಖ್ಯಾತ ಪತ್ರಿಕೋದ್ಯೋಗಿ ಹರಿ ದೇಸಾಯಿಯವರ ಮಗ ಮಿಲಿಂದ್ ರಕ್ತದ ಕ್ಯಾನ್ಸರಿನಿಂದ ಬಳಲುತ್ತಿದ್ದ. ಆತ ರಕ್ತ ಹಾಕಿಸಿಕೊಳ್ಳಲು ಆಸ್ಪತ್ರೆಗೆ ಹೋಗುತ್ತಿದ್ದಾಗ ದಾರಿಯಲ್ಲೇ ಮರಣಹೊಂದಿದ. ಗುಜರಾತಿ ಮಾಸಿಕ 'ಮಂಥನ'ದ ಸಂಪಾದಕನಾಗಿದ್ದ ಆತನಿಗೆ ಮೊದಲಿನಿಂದಲೂ ಬರೆಯುವ ಗೀಳು. ಅನೇಕ ಕವಿತೆಗಳನ್ನೂ ಒಂದು ಕಾದಂಬರಿಯನ್ನೂ ಬರೆದು ತುಂಬಾ ಹೆಸರು ಮಾಡಿಕೊಂಡ ಮಿಲಿಂದ್ ದೇಸಾಯಿ ತೀರಿಕೊಂಡಾಗ ಆತನಿಗೆ ಬರಿ ಹನ್ನೆರಡು ವರ್ಷಗಳಷ್ಟು ವಯಸ್ಸಾಗಿತ್ತು.

• ಟಿ.ಎಸ್. ಲಲಿತ

■ ಡಾ. ಎ.ಎಚ್. ಶಿವಯೋಗಿಸ್ವಾಮಿ

**ನಾವು ಈಗ ತಿಳಿದುಕೊಂಡಿರುವ ದಿನಗಳಲ್ಲಿ ಅಲ್ಲವೇ ಅಲ್ಲವಂತೆ...**

# ಮಹಾಭಾರತ ಯುದ್ಧ ನಡೆದದ್ದು ಯಾವಾಗ?

ಮಹಾಭಾರತ ಯುದ್ಧ ನಿಶ್ಚಿತವಾಗಿ ಎಂದು ನಡೆಯಿತೆಂಬುದು ಪ್ರಪಂಚದ ಮೇಧಾವಿಗಳಿಗೆಲ್ಲ ಒಂದು ಯಕ್ಷಪ್ರಶ್ನೆ. ಆದರೆ ಗಣಿತ ಹಾಗೂ ಖಗೋಳಶಾಸ್ತ್ರಗಳನ್ನು ಆಧರಿಸಿದರೆ ನಾವು ಸರಿಯಾದ ಉತ್ತರ ಪಡೆಯಬಹುದು. ಅನೇಕ ವಿದ್ವಾಂಸರು ಪ್ರಾಚೀನ ಭಾರತದಲ್ಲಿ ಖಗೋಳಶಾಸ್ತ್ರ ಅಭಿವೃದ್ಧಿಗೊಂ



ಡಿದ್ದಿಲ್ಲ ಎಂಬ ಯೋಚನೆಯೊಂದಿಗೆ ಅದನ್ನು ಗಮನಿಸಿರುವುದಿಲ್ಲ. ಆದರೆ ಪಾಶ್ಚಾತ್ಯ ವಿದ್ವಾಂಸರಾದ ಬೇಲಿ, ವ್ಯಾಲೇಸ್ ಮತ್ತಿತರರು ಭಾರತೀಯ ಖಗೋಳಶಾಸ್ತ್ರ ಪುರಾತನವಾದದ್ದು ಮತ್ತು ಆದನ್ನು ಕೇವಲ ಕ್ರಿಸ್ತಪೂರ್ವ ೩,೦೦೦ ವರ್ಷ ಎಂದು ತಿರುಚಿದ್ದಾರೆ ಎಂದು ಹೇಳಿ ತಮ್ಮ ಹೇಳಿಕೆಯನ್ನು ಸಾಧಿಸಿದ್ದಾರೆ. ಖಗೋಳ ಹಾಗೂ ಗಣಿತಶಾಸ್ತ್ರಗಳು ಪ್ರಾಚೀನ ಭಾರತದಲ್ಲಿ ಮುಂದುವರೆದ ವೈಜ್ಞಾನಿಕ ವಿಷಯವಾಗಿತ್ತೇ ಅಥವಾ ಇಲ್ಲವೇ ಎನ್ನುವುದು ಅತಿ ಮುಖ್ಯವಾಗಿದ್ದು ಅದನ್ನು ನಾವು ಗಮನಿಸಬೇಕಾಗಿದೆ. ಏಕೆಂದರೆ ಇಂದಿನ ಅತ್ಯಾಧುನಿಕ ವಿಷಯಗಳ ಸಹಾಯದಿಂದ ನಾವು ವ್ಯಾಸ ಮಹರ್ಷಿಯು ಬರೆದಿರುವಂ

'ಮೊಗವೀರ'ದಿಂದ ಸಾಭಾರ

ತಹ ಗ್ರಹಗತಿಗಳು ಹಾಗೂ ಗ್ರಹಗಳ ಸ್ಥಿತಿಗಳನ್ನು ಕಂಡುಹಿಡಿಯಬಹುದಾಗಿದೆ. ನಕ್ಷತ್ರಗಳು ಹಾಗೂ ಗ್ರಹಗಳು ಋಗ್ವೇದದ ಕಾಲದಿಂದಲೂ ಭಾರತೀಯರಿಗೆ ಚೆನ್ನಾಗಿ ಗೊತ್ತಿರುತ್ತವೆ. ಮಹಾಭಾರತದಲ್ಲಿ ಬರುವ ಖಗೋಳ ಸಮಸ್ಯೆಗಳನ್ನು ಪರಿಹರಿಸಿದ ನಂತರ ಮಹಾಭಾರತದ ಕಾಲಮಾನ ಕ್ರಿ.ಪೂ. ೫೪೮೦-೬೪೪೮ರ ಮಧ್ಯೆ ಸಂಭವಿಸಿದೆ ಎಂದು ತಿಳಿದುಬರುತ್ತದೆ. ಇದನ್ನು ನಾವು ಋತುಮಾನಗಳ ಸಹಾಯದಿಂದ ಮತ್ತೆ ಸಾಧಾರವಾಗಿ ತೋರಿಸಬಹುದು.

ಹರಿವಂಶನು ವಿಷ್ಣುಪರ್ವ (ಎ-೫)ದಲ್ಲಿ ತಿಳಿಸಿರುವ ಪ್ರಕಾರ ನಂದನು ಶ್ರೀಕೃಷ್ಣನನ್ನು ಗೋಕುಲಕ್ಕೆ ಕರೆದುಕೊಂಡು ಹೋಗಿದ್ದು ಶ್ರಾವಣ ವದ್ಯ ನವಮಿಯಂದು ಹಾಗೂ ಆಗ ಒಣಗಿದ ಸಗಣಿ ಎಲ್ಲೆಡೆ ಹರಡಿದ್ದು, ಗಿಡಮರಗಳನ್ನು ಕಡಿಯಲಾಗಿತ್ತು ಎಂದು ತಿಳಿಸಿರುತ್ತಾನೆ. ಒಣಗಿದ ಬೆರಣಿ ಎಲ್ಲೆಡೆ ಹರಡಿರುವುದು ಶ್ರಾವಣಮಾಸದಲ್ಲಿ ಬೇಸಿಗೆ ಇದ್ದುದನ್ನು ತಿಳಿಸುತ್ತದೆ. ಈಗ ಮತ್ತು ಆಗ ಸಹ ಸಾಮಾನ್ಯವಾಗಿ ಮರಗಿಡಗಳನ್ನು ಮಳೆಗಾಲದಲ್ಲಿ ಉರುವಲಾಗಿ ಉಪಯೋಗಿಸುವ ಕಾರಣಕ್ಕಾಗಿ ಬೇಸಿಗೆಯಲ್ಲಿ ಕಡಿಯಲಾಗುತ್ತದೆ. ಋತುಮಾನಗಳು ಪ್ರತಿ ೨,೦೦೦ ವರ್ಷಗಳಿಗೆ ಒಂದು ತಿಂಗಳು ಚಲಿಸುತ್ತವೆ. ಈಗ ಮಳೆಗಾಲ ಜೇಷ್ಠ ಮಾಸದಲ್ಲಿ ಶುರುವಾಗುತ್ತದೆ. ಕಾಳಿದಾಸನ ಕಾಲದಲ್ಲಿ ಅಂದರೆ ೨,೦೦೦ ವರ್ಷಗಳ ಹಿಂದೆ, ಮಳೆಗಾಲ ಆಷಾಢದಲ್ಲಿ ಶುರುವಾಗುತ್ತಿತ್ತು. ಶ್ರೀಕೃಷ್ಣನ ಜನ್ಮಕಾಲದಲ್ಲಿ ಶ್ರಾವಣಮಾಸದಲ್ಲಿ ಬೇಸಿಗೆ ಇರುತ್ತಿದ್ದು ಈಗ ಬೇಸಿಗೆ ವೈಶಾಖಮಾಸದಲ್ಲಿ ಬರುತ್ತದೆ. ಎಂದರೆ ಬೇಸಿಗೆಯೀಗ ೪ ತಿಂಗಳು ಬದಲಾಗಿದೆ. ಆದ್ದರಿಂದ ಶ್ರೀಕೃಷ್ಣನ ಕಾಲಮಾನ ೪x೨೦೦೦ =೮೦೦೦ ವರ್ಷ ಹಿಂದಿನದು. ಎಂದರೆ ಸುಮಾರು ಕ್ರಿ.ಪೂ. ೬,೦೦೦ ವರ್ಷಗಳು ಎಂದು ತಿಳಿಯಬಹುದು. ನಾನು ಒಂದು ಕೋಷ್ಟಕವನ್ನು ರಚಿಸಿ ಶನಿಗ್ರಹವು ಪೂರ್ವದಲ್ಲಿದ್ದ ವರ್ಷಗಳನ್ನು ನೇರವಾದ ಸಾಲಿನಲ್ಲಿ ಬರೆದುಕೊಂಡೆ. ಅದೇ ರೀತಿ ಗುರುಗ್ರಹವು ಶ್ರಾವಣದಲ್ಲಿದ್ದುದು ಹಾಗೂ ರಾಹುವು ಉತ್ತರಾಷಾಢದಲ್ಲಿದ್ದ ವರ್ಷಗಳನ್ನು ಗುರುತಿಸಿಕೊಂಡೆ. ನಂತರ ಅವೆಲ್ಲವೂ ಸಮಾನವಾಗಿ ಇದ್ದ ವರ್ಷವನ್ನು ಅಡ್ಡಸಾಲಿನಲ್ಲಿ ನೋಡಿದಾಗ ಅದು ಕ್ರಿ.ಪೂ. ೫೫೬೧-೬೨ ಎಂದು ದೃಢೀಕರಿಸಲ್ಪಟ್ಟಿತು.

ಭೀಷ್ಮರು ಉತ್ತರಾಯಣ ಕಾಲದ ಆರಂಭದಲ್ಲಿ ಅಂದರೆ ಡಿಸೆಂಬರ್ ೨೨ರಂದು ನಿಧನರಾದರು. ಅವರು ೫೮ ರಾತ್ರಿಗಳನ್ನು ಶರಶಯ್ಯೆಯಲ್ಲಿ ಕಳೆದಿದ್ದು, ೧೦ ದಿನಗಳ ಕಾಲ ಯುದ್ಧ ಮಾಡಿದರು. ಎಂದರೆ ೬೮ ದಿನಗಳ ಮೊದಲು (ಡಿಸೆಂಬರ್ ೨೨ಕ್ಕೆ) ಯುದ್ಧ ಶುರುವಾಯಿತು. ಅರ್ಥಾತ್ ೧೬ರಂದು ಯುದ್ಧ ಶುರುವಾಯಿತು. ಈಗ ನಾವು ಕ್ರಿ. ಪೂ. ೧೬ನೇ ಅಕ್ಟೋಬರ್ ೫೫೬೧ ರಂದು ಇದ್ದ ಗ್ರಹಗತಿಗಳ ಸ್ಥಿತಿಯನ್ನು ಕಂಡುಹಿಡಿಯೋಣ.

## ಶನಿಗ್ರಹ

ಲಾರೋಸ್ ಬರೆದಿರುವ ಖಗೋಳಶಾಸ್ತ್ರದ ವಿಶ್ವಕೋಶದ ಪ್ರಕಾರ ಶನಿಗ್ರಹದ ಒಂದು ಸುತ್ತು ೨೯ ವರ್ಷ ೧೬೭ ದಿನಗಳನ್ನು ತೆಗೆದುಕೊಳ್ಳುತ್ತದೆ. ಭೂಗ್ರಹದ ಒಂದು ವರ್ಷವೆಂದರೆ ೩೬೫.೨೫ ದಿನಗಳು ಎಂದಾಗ ಶನಿಗ್ರಹವು ಒಂದು ಪೂರ್ಣ ಸುತ್ತು ಬರಲು ೨೯.೪೫೪೪೮೩೨೩ ವರ್ಷ ತೆಗೆದುಕೊಳ್ಳುತ್ತದೆ.

೧೯೫೦ರ ಮೇ ೫ರಂದು ಶನಿಗ್ರಹ ಪೂರ್ವದಲ್ಲಿತ್ತು. ಎಂದರೆ ಈಗ ನಾವು ೫೫೬೧ರಂದು ಶನಿಗ್ರಹದ ಸ್ಥಿತಿ ನೋಡೋಣ. ೫೫೬೧+೧೯೫೦ = ೭೫೧೧ ವರ್ಷ. ೭೫೧೧ನ್ನು ೨೯.೪೫೪೪೮೩೨ ಇದರಿಂದ ಭಾಗಿಸಿದರೆ ೨೫೫,೦೦೩೬೨ ಸುತ್ತುಗಳು ಬರುತ್ತದೆ. ಎಂದರೆ ಶನಿ ಗ್ರಹ ೨೫೫ ಸುತ್ತು ಮುಗಿಸಿ

ದಂತೆ ಹಾಗೂ ೦೦೩೬೨ಗಳಿಂದ ಮುಂದೆ ಹೋಗಿದ್ದಾನೆ. ಅರ್ಥಾತ್ ೧.೩ ಡಿಗ್ರಿಗಳಿಂದ ಮುಂದಕ್ಕೆ ಚಲಿಸಿದ್ದಾನೆ. ಆದ್ದರಿಂದ ಶನಿಗ್ರಹವು ೫-೫-೫೫೬೨ರಂದು ಪೂರ್ವಾರ್ಧದಲ್ಲಿತ್ತು. ೧೬-೧೦- ೫೫೬೨ರಲ್ಲಿ ಎಂದರೆ ೧೬೪ ದಿನಗಳ ನಂತರ ಗ್ರಹವು. ೦೩೩೪೫೯೭ ಡಿಗ್ರಿ ಚಲಿಸಿದ್ದು ಅದನ್ನು ೧೬೪ರಿಂದ ಗುಣಿಸಿದರೆ ೫.೪೮೭ ಡಿಗ್ರಿಗಳಾಗುತ್ತವೆ. ಎಂದರೆ ಶನಿಗ್ರಹವು ೧೪೧ಡಿಗ್ರಿಗಳಲ್ಲಿ ಇದ್ದಂತಾಗುತ್ತದೆ. ಅಕ್ಟೋಬರ್ ೧೯೬೨ರಲ್ಲಿ ಶನಿಗ್ರಹವು ೨೮೧ ಡಿಗ್ರಿಗಳಲ್ಲಿದ್ದು ೧೯೬೨+೫೫೬೧=೭೫೨೩ ವರ್ಷ. ೭೫೨೩ನ್ನು ೨೯.೪೫೪೪೮೩೨ ಇದರಿಂದ ಭಾಗಿಸಿದರೆ ೨೫೫.೪೧೧೦೩ ಸುತ್ತುಗಳು ಬರುತ್ತವೆ. ಎಂದರೆ ಶನಿಗ್ರಹ ಸಂಪೂರ್ಣ ಸುತ್ತುಗಳು ಆದ ಮೇಲೆ .೪೧೧೦೩ ಸುತ್ತು ಎಂದರೆ ೧೪೮ ಡಿಗ್ರಿಗಳಷ್ಟು ಹಿಂದಕ್ಕೆ ಹೋಗಿದೆ. ೨೮೧-೧೪೮ = ೧೩೩ ಡಿಗ್ರಿ. ಇದು ಶನಿಗ್ರಹವು ಪೂರ್ವದಲ್ಲಿದ್ದ ಸ್ಥಿತಿ. ೧೯೩೧ರಿಂದ ಲೆಕ್ಕ ಮಾಡಿದಾಗಲೂ ಶನಿಗ್ರಹವು ೧೪೧ ಡಿಗ್ರಿ ಪೂರ್ವದಲ್ಲಿದೆ ಎಂದಾಗ ೧೬-೧೦-೫೫೬೨ ರಲ್ಲಿ ಶನಿಗ್ರಹವು ವ್ಯಾಸರು ತಿಳಿಸಿದಂತೆ ಪೂರ್ಹದಲ್ಲಿತ್ತು.

## ರಾಹು

ರಾಹುವು ತನ್ನ ಪ್ರತಿ ಒಂದು ಸುತ್ತಿಗೆ ೧೮.೫೯೯೨ ವರ್ಷಗಳನ್ನು ತೆಗೆದುಕೊಳ್ಳುತ್ತಾನೆ. ೧೬-೧೦-೧೯೭೯ರಂದು ರಾಹು ೧೩೨ ಡಿಗ್ರಿಗಳಲ್ಲಿ ಇದ್ದ. ೧೯೭೯+೫೫೬೧ = ೭೫೪೦ ಮತ್ತು ಇದನ್ನು ೧೮.೫೯೯೨ರಿಂದ ಭಾಗಿಸಿದರೆ ೪೦೫.೩೯೩೭೮ ಸುತ್ತುಗಳು. ೩೯೩೭೮ ಸುತ್ತು ಎಂದರೆ ೧೪೧.೭ ಡಿಗ್ರಿ. ರಾಹು ಯಾವಾಗಲೂ ಹಿಂಬದಿ ಚಲಿಸುವುದರಿಂದ ನಾವು ಹಿಂದಕ್ಕೆ ೧೪೧.೭ ಡಿಗ್ರಿ ಕೂಡಿಸಬೇಕು ಎಂದರೆ ೧೩೨+೧೪೧.೭ =೨೭೩.೭ ಇದು ಉತ್ತರಾಷಾಢ ಹಾಗೂ ರಾಹು ಈ ಸ್ಥಳದಲ್ಲಿದ್ದನು. ೧೯೬೨ ಮತ್ತು ೧೮೯೩ರಿಂದ ಲೆಕ್ಕ ಮಾಡಿದಾಗಲೂ ರಾಹು ಉತ್ತರಾಷಾಢದಲ್ಲಿರುವುದು ಕಂಡುಬರುತ್ತದೆ.

## ಗುರು

ಗುರುಗ್ರಹವು ತನ್ನ ಪ್ರತಿ ಒಂದು ಸುತ್ತಿಗೆ ೧೧.೮೬೩೦೧೮ ವರ್ಷ ತೆಗೆದುಕೊಳ್ಳುತ್ತಾನೆ. ಮತ್ತು ೧೬-೧೦-೧೯೭೯ರಂದು ಗುರುಗ್ರಹವು ೧೨೯ ಡಿಗ್ರಿಗಳಲ್ಲಿದ್ದನು. ೧೯೭೯+೫೫೬೧ = ೭೫೪೦. ಇದನ್ನು ೧೧.೮೬೩೦೧೮ ರಿಂದ ಭಾಗಿಸಿದರೆ ೬೩೫.೫೮೮೯೨ ಸುತ್ತುಗಳು ಬರುತ್ತವೆ. ೦.೫೮೮೯೨ ಸುತ್ತು ಎಂದರೆ ೨೧೨ ಡಿಗ್ರಿಗಳು ಎಂದಾಗ ಗುರುಗ್ರಹವು ೨೧೨ ಡಿಗ್ರಿಗಳಷ್ಟು ತನ್ನ ಮೂಲಸ್ಥಾನಕ್ಕಿಂತ ಹಿಂದಿದ್ದಾನೆ. ೧೨೯-೨೧ = ೮೩ ಎಂದರೆ ೩೬೦-೮೩ = ೨೭೭.೨೭೭ ಡಿಗ್ರಿ ಎಂದರೆ ಶ್ರಾವಣದ ಸ್ಥಾನ. ಆದ್ದರಿಂದ ಗುರುವು ಶ್ರಾವಣದಲ್ಲಿದ್ದನು. ೧೯೩೨ ಮತ್ತು ೧೯೭೭ರಲ್ಲಿ ಗುರುಗ್ರಹದ ಸ್ಥಾನ ತೆಗೆದುಕೊಂಡು ಲೆಕ್ಕ ಮಾಡಿದಾಗಲೂ ಗುರುಗ್ರಹವು ೨೮೫ ಮತ್ತು ೨೮೧ ಡಿಗ್ರಿ ಎಂದರೆ ಶ್ರಾವಣದ ವಿಭಾಗದಲ್ಲಿ ಗೋಚರಿಸುತ್ತಾನೆ. ಇದೂ ವ್ಯಾಸರು ತಿಳಿಸಿದಂತೆಯೇ ಇರುತ್ತದೆ.

## ಮಂಗಳ

ಮಂಗಳ ಗ್ರಹವು ತನ್ನ ಪ್ರತಿ ಒಂದು ಸುತ್ತಿಗೆ ೧.೮೮೦೮೯ ವರ್ಷ ತೆಗೆದುಕೊಳ್ಳುತ್ತದೆ. ೧೬-೧೦-೧೯೭೯ರಂದು ಮಂಗಳಗ್ರಹವು ೧೦೮ ಡಿಗ್ರಿಗಳಲ್ಲಿ ಇತ್ತು. ೧೯೭೯+೫೫೬೧ = ೭೫೪೦ ಇದನ್ನು ೧,೮೮೦೮೯ರಿಂದ ಭಾಗಿಸಿದರೆ ೪೦೦೮.೭೪೦೫ ಸುತ್ತುಗಳು ಬರುತ್ತವೆ. ೦.೭೪೦೫ ಸುತ್ತು ಎಂದರೆ ೨೬೬ ಡಿಗ್ರಿಗಳು. ಮಂಗಳಗ್ರಹವು ತನ್ನ ಮೂಲಸ್ಥಾನಕ್ಕಿಂತ ೨೬೬ ಡಿಗ್ರಿಗಳಷ್ಟು ಹಿಂದೆ ಇದ್ದಾನೆ. ಎಂದರೆ ೧೦೮-೨೬೬ = -೧೫೮.೩೬೦-೧೫೮ =

೨೦೨ ಡಿಗ್ರಿಗಳು. ಇದು ವಿಖಾಖ ನಕ್ಷತ್ರದ ಹಿಂದೆ ಹಾಗೂ ಅನುರಾಧ ನಕ್ಷತ್ರದ ಕಡೆ ಚಲಿಸುವ ಸ್ಥಾನ. ಆದ್ದರಿಂದ ವ್ಯಾಸರು "ಅನುರಾಧ ಪ್ರಥಾಯತೇ" ಎಂದು ತಿಳಿಸಿರುವುದು ಸರಿ ಎನಿಸುತ್ತದೆ. ೧೯೬೨ ಹಾಗೂ ೧೯೦೦ನೇ ಇಸವಿಯಿಂದ ಲೆಕ್ಕ ಮಾಡಿದಾಗಲೂ ಮಂಗಳನು ೨೦೬ ಮತ್ತು ೨೦೮ ಡಿಗ್ರಿಗಳಲ್ಲಿ ಇರುವುದು ಕಂಡುಬರುತ್ತದೆ. ಆದ್ದರಿಂದ ವಿಶಾಖದಲ್ಲಿದ್ದರೂ "ಅನುರಾಧ ಪ್ರಥಾಯತೆ" ಎಂದು ಕರೆಯಬಹುದು. ಇದು ವ್ಯಾಸರು ಬರೆದಿರುವ ಸತ್ಯತೆಯನ್ನು ತೋರಿಸುತ್ತದೆ. ಈಗ ಎಲ್ಲಾ ನಾಲ್ಕು ಪ್ರಮುಖ ಗ್ರಹಗಳು ವ್ಯಾಸರು ತಿಳಿಸಿದ ಸ್ಥಾನಗಳಲ್ಲಿಯೇ ಇರುವುದು ೧೬-೧೦-೫೫೬೨ರಲ್ಲಿ ಎಂದು ಗೋಚರಿಸುತ್ತದೆ. ಆದ್ದರಿಂದ ನಾವು ಇದನ್ನೇ ಮಹಾಭಾರತ ಯುದ್ಧ ಆರಂಭವಾದ ಕಾಲ ಎಂದು ನಿರ್ಣಾಯಕವಾಗಿ ಹೇಳಬಹುದು.

ಇದನ್ನು ಸಮರ್ಥಿಸಲು ಇನ್ನಿತರ ಕಾರಣಗಳೂ ಇವೆ.

ವಿಶ್ವಘಸ್ರ ಪಕ್ಷ: ಎಂದರೆ ೧೩ ದಿನಗಳ ಪಕ್ಷವು ವ್ಯಾಸರು ತಿಳಿಸಿದಂತೆ ಮಹಾಯುದ್ಧದ ಮೊದಲು ಸಂಭವಿಸಿದೆ. ಅಂತಹ ಪಕ್ಷವು ೨೨ ವರ್ಷಗಳಿಗೆ ಒಮ್ಮೆ ಸಂಧಿಸುತ್ತದೆ. ಆದ್ದರಿಂದ ೫೫೬೨ ರಲ್ಲಿ ಕ್ಷಯ ಬಂದಿರುವುದು ಲೆಕ್ಕದಿಂದ ಕಂಡುಬರುತ್ತದೆ.

## ಅಮಾವಾಸ್ಯೆ ಘಟಿಸಿದ್ದು

ಕೃಷ್ಣ ಮತ್ತು ಕರ್ಣರು ಅಮಾವಾಸ್ಯೆಯ ದಿನದಂದು ಯುದ್ಧವನ್ನು ನಿಗದಿಪಡಿಸಿದರು. ವ್ಯಾಸರು ಸಹ (ಭೀಷ್ಮ ೨-೩) ಯುದ್ಧವು ಎರಡನೇ ಅಮಾವಾಸ್ಯೆಯಂದು ಘಟಿಸಿತು ಎಂದು ತಿಳಿಸಿರುತ್ತಾರೆ. ಏಕೆಂದರೆ ಎರಡು ಅಮಾವಾಸ್ಯೆಗಳು ಜೊತೆಯಲ್ಲಿ ಬಂದವು. ಭೀಷ್ಮರು ೬೭ ರಾತ್ರಿ (೫೮+೯)ಗಳ ನಂತರ, ಎಂದರೆ ಡಿಸೆಂಬರ್ ೨೨ರಂದು ಮರಣ ಹೊಂದಿದರು. ಆದ್ದರಿಂದ ಯುದ್ಧವು ಅಕ್ಟೋಬರ್ ೧೬ರಂದು ಆರಂಭವಾಯಿತು. ಈಗ ಅಂದು ಅಮಾವಾಸ್ಯೆ ಬರುತ್ತದೆಯೋ ಎನ್ನುವುದನ್ನು ನೋಡೋಣ. ೧೯೭೯ರಲ್ಲಿ ೨೧-೧೦ ರಂದು ಅಮಾವಾಸ್ಯೆ; ೨೯.೫೩೦೫೮ ದಿನಗಳ ಅಂತರದಲ್ಲಿ ಬಂದಿತು. ಚಂದ್ರವರ್ಷ ೩೫೪.೩೬೭ ದಿನಗಳು. ಸೂರ್ಯವರ್ಷ ೩೬೫.೨೫ ದಿನಗಳು. ೧೯೭೯+೫೫೬೧= ೭೫೪೦ ವರ್ಷ. ಇದನ್ನು ೩೬೫.೨೫ರಿಂದ ಗುಣಿಸಿ ೩೫೪.೩೬೭ ರಿಂದ ಭಾಗಿಸಿದರೆ ೭೭೭೧.೫೬೧೬ ಚಂದ್ರವರ್ಷಗಳು. ೦.೫೬೧೬ ಎಂದರೆ ೧೯೯.೦೧೨೫ ದಿನಗಳು. ೧೯೯.೦೧೨೫ ಅನ್ನು ಭಾಗಿಸಿದರೆ ೨೯.೫೩೦೫೮ ಎಂದರೆ ೬.೭೩೯೨೦೦೫. ಇದು ಅಮಾವಾಸ್ಯೆ ಮುಗಿದಿದ್ದು ಮತ್ತು ೦.೭೩೯೨೦೦೫ ಚಂದ್ರತಿಂಗಳು ಎಂದರೆ ೨೨ ದಿನ ಉಳಿದಿದ್ದನ್ನು ತಿಳಿಸುತ್ತದೆ. ಈ ೨೨ ದಿನಗಳು ೨೧-೧೦ಕ್ಕೆ ಮೊದಲು ಎಂದರೆ ೧೬-೧೦ ರಂದು ಎಂದರೆ ಆರುದಿನಗಳನ್ನು ೨೨ಕ್ಕೆ ಸೇರಿಸಿದರೆ ೨೮; ಎಂದರೆ ೨೮ದಿನಗಳಿಗೆ ಅಮಾವಾಸ್ಯೆ ಬರುತ್ತದೆ. ಹಾಗಾಗಿ ೧೫ ಮತ್ತು ೧೬-೧೦-೫೫೬೨ರಂದು ಎರಡು ಅಮಾವಾಸ್ಯೆ ಜೊತೆಯಲ್ಲಿಯೇ ಘಟಿಸಿರುತ್ತದೆ. ಇದನ್ನೇ ಮತ್ತೊಂದು ರೀತಿ ಕಂಡುಹಿಡಿಯುವುದೆಂದರೆ ಪ್ರತಿ ೧೯ ವರ್ಷಗಳಿಗೆ ಒಮ್ಮೆ ಅಮಾವಾಸ್ಯೆ ಅದೇ ದಿನಾಂಕದಂದು ಬರುತ್ತದೆ. ೧೯X೩೬೫.೨೫/೨೯.೫೩೦೫೮ ಎಂದರೆ ೨೩೫.೦೦೨೧೫ ಎಂದಾಗ ೧೯ ವರ್ಷಗಳಲ್ಲಿ ೨೩೫ ಅಮಾವಾಸ್ಯೆ ಮುಗಿದವು. ೧೭-೧೦-೧೯೬೩ರಂದು ಅಮಾವಾಸ್ಯೆ ಇತ್ತು. ೧೯೬೩+೫೫೬೧ = ೭೫೨೪/೧೯ ಎಂದರೆ ೩೯೬ ಇದು ಸಂಪೂರ್ಣ ವಿಭಜಿತ. ಆದ್ದರಿಂದ ಅಂದು ಅಮಾವಾಸ್ಯೆ ಇತ್ತು.

## ಗ್ರಹಣಗಳು

ವ್ಯಾಸರು ಮಹಾಭಾರತ ಯುದ್ಧ ಸಮಯದಲ್ಲಿ ಒಂದೇ ತಿಂಗಳಿನಲ್ಲಿ ಸೂರ್ಯ ಹಾಗೂ ಚಂದ್ರಗ್ರಹಣಗಳು ಘಟಿಸಿದ್ದಾಗಿ ತಿಳಿ

ಸಿದ್ದಾರೆ. ಅಕ್ಟೋಬರ್ ೫೫೬೨ರಲ್ಲಿ ಒಂದೇ ತಿಂಗಳಿನಲ್ಲಿ ಸೂರ್ಯ ಹಾಗೂ ಚಂದ್ರಗ್ರಹಣಗಳು ಬಂದಿದ್ದು ತಿಳಿದುಬರುತ್ತದೆ.

## ನಿರ್ಣಯ

ಕ್ರಿ.ಪೂ. ೧೬-೧೦-೫೫೬೨ರಲ್ಲಿ ಎಲ್ಲಾ ಗ್ರಹಗಳು ತಮ್ಮ ಸ್ಥಿತಿಯಲ್ಲಿ ಇರುತ್ತವೆ ಹಾಗೂ ಎರಡು ಅಮಾವಾಸ್ಯೆಗಳು ಬಂದಿರುತ್ತವೆ. ಎರಡು ಗ್ರಹಣಗಳು, ಕ್ಷಯಪಕ್ಷವು ಬಂದಿರುತ್ತದೆ. ಆದ್ದರಿಂದ ಎಲ್ಲಾ ಹದಿನೇಳು ಗಣಿತ ರೀತಿಯಲ್ಲೂ ಇದೇ ದಿನಾಂಕ ಬರುತ್ತದೆಯಾದ್ದರಿಂದ ವೈಜ್ಞಾನಿಕವಾಗಿ ನಿರ್ಣಯಿಸಿ ಒಪ್ಪುವುದಾದರೆ ಮಹಾಭಾರತ ಯುದ್ಧದ ಆರಂಭದ ದಿನ ಕ್ರಿ.ಪೂ. ೧೬-೧೦-೫೫೬೨ ಎಂದು ಒಪ್ಪಬೇಕು ಮತ್ತು ಎಲ್ಲ ಗ್ರಹಗಳು ಮತ್ತೊಮ್ಮೆ ಇದೇ ಸ್ಥಾನದಲ್ಲಿ ಬರುವುದಕ್ಕೆ ೨೨೨೯ ಕೋಟಿ ವರ್ಷಗಳು ಬೇಕು. ಆದರೆ ಭೂಗ್ರಹದ ಆಯುಷ್ಯ ಕೇವಲ ೪೦೦ ಕೋಟಿ ವರ್ಷಗಳಾದ್ದರಿಂದ ಇನ್ನೊಮ್ಮೆ ನಮ್ಮ ಗ್ರಹದ ಅವಧಿಯಲ್ಲಿ ಮೇಲ್ಕಂಡ ವಿವಿಧ ಗ್ರಹಗಳ ಸ್ಥಾನ ಇದೇ ರೀತಿ ಬರಲು ಸಾಧ್ಯವೇ ಇಲ್ಲ.

[ಆಧಾರ: ಪುಣೆಯ ಇನ್‌ಸ್ಟಿಟ್ಯೂಟ್ ಫಾರ್ ರೀರೈಟಿಂಗ್ ಇಂಡಿಯಾ (ಅಂಡ್ ವರ್ಲ್ಡ್) ಹಿಸ್ಟರಿ ಸಂಸ್ಥೆಯ Annual Research Journal-೧೯೮೮ A.D. ಸಂಚಿಕೆಯಲ್ಲಿ ಪ್ರಕಟವಾದ ಡಾ. ಪಿ. ವರ್ತಕ್ ಅವರ ಲೇಖನ] ★






# ಹವ್ಯಾಸ

**ಹವ್ಯಾಸವೆನ್ನುವುದು ನಮ್ಮನ್ನು ಸುತ್ತಿಕೊಂಡು ನಮ್ಮ ಬರ್ಬರ ಬದುಕನ್ನು ಸುಂದರಗೊಳಿಸುವ ಬಳ್ಳಿಯಂತೆ.**

• *ಹಾಲಾಡಿ ಮಾರುತಿರಾವ್*

ನಮ್ಮ ಮುಖ್ಯ ವ್ಯಾಸಂಗವನ್ನೋ ಉದ್ಯೋಗವನ್ನೋ ಮುಗಿಸಿ ನಮಗೆ ಸಿಗುವ ಬಿಡುವಿನ ವೇಳೆಯಲ್ಲಿ ಮನಸ್ಸಂತೋಷ ಕೊಡುವ ಕೆಲಸಗಳಲ್ಲಿ ನಮ್ಮನ್ನು ನಾವೇ ತೊಡಗಿಸಿಕೊಳ್ಳುವುದು ಹವ್ಯಾಸ.

ವೇಗಪ್ರಧಾನವಾಗಿರುವ ಇಂದಿನ ಪೈಪೋಟಿಯ ಜೀವನದಲ್ಲಿ ಬಿಡುವು ಸಿಗುವುದೇ ದುರ್ಲಭವೆಂದು ತರ್ಕಿಸಿ ಯಾವ ಹವ್ಯಾಸವನ್ನೂ ಹಚ್ಚಿಕೊಳ್ಳದೆ ಇರುವವರೂ ಇದ್ದಾರೆ. ಹಾಗೆ ನೋಡಿದರೆ ಯಂತ್ರಗಳ ಉಪಯೋಗ ಹೆಚ್ಚುತ್ತಿರುವಾಗ ಹವ್ಯಾಸಕ್ಕೆ ಬೇಕಾದ ವ್ಯವಧಾನ ಇನ್ನೂ ಹೆಚ್ಚು ಸಿಗುವಂತಾಗಿದೆ. ಬಿಡುವು ಎನ್ನುವುದು ಅವರವರ ಮನೋಧರ್ಮಕ್ಕೆ ಸೇರಿದ್ದು. ಒಮ್ಮೆ ಹವ್ಯಾಸದ ರುಚಿಯನ್ನು ಕಂಡವನು ತನಗೆ ಬೇಕಾದ ಬಿಡುವನ್ನು ಮಾಡಿಕೊಳ್ಳಲು ತಾನಾಗಿಯೇ ಕಲಿಯುತ್ತಾನೆ. ಆದುದರಿಂದ ಬಾಲ್ಯದಲ್ಲಿಯೇ ಮಕ್ಕಳಿಗೆ ನಾವು ಹವ್ಯಾಸದ ರುಚಿ ತೋರಿಸಿಕೊಡಬೇಕು.

ಹವ್ಯಾಸವನ್ನು ನಮಗೆ ನಾವೇ ಆರಿಸಿಕೊಳ್ಳುವುದರಿಂದ ಇದರಲ್ಲಿ ಯಾರ ಹಂಗೂ ಇರುವುದಿಲ್ಲ. ನಮಗೆ ಪೂರ್ಣ ಸ್ವಾತಂತ್ರ್ಯವಿರುತ್ತದೆ. ಮತ್ತೊಂದು ಮುಖ್ಯ ಅಂಶವೆಂದರೆ ಹವ್ಯಾಸದಲ್ಲಿ ನಿಯಮ ನಿಯಂತ್ರಣಗಳಿಲ್ಲ. ಇಷ್ಟರವರೆಗೆ ಎಂಬ ಲಕ್ಷ್ಮಣರೇಖೆಯಿಲ್ಲ. ನಮಗೆ ಬಿಡುವು ಸಿಕ್ಕಾಗ ನಾವು ಅದನ್ನು ಮುಂದುವರಿಸುತ್ತಾ ಹೋಗಬಹುದು. ಅದಕ್ಕೆ ಪರೀಕ್ಷೆಯಿಲ್ಲ, ಫಲಿತಾಂಶವಿಲ್ಲ. ಪದವಿಯಿಲ್ಲ, ಪ್ರತಿಫಲದ ಚಿಂತೆಯಿಲ್ಲ. ಸಂಪಾದನೆ ಇಲ್ಲದಿರಬಹುದು; ಆದರೆ ಸಂತೋಷವಂತೂ ಇದ್ದೇ ಇರುತ್ತದೆ.

ಹವ್ಯಾಸಕ್ಕೆ ಅಂತ್ಯವೆಂಬುದಿಲ್ಲ. ನಿವೃತ್ತಿಯಿಲ್ಲ. ಹನಿ ಹನಿಗೂಡಿ ಹಳ್ಳವಾದಂತೆ ನಮ್ಮ ಆಸಕ್ತಿ ಬೆಳೆದಷ್ಟೂ ಅದೂ ಬೆಳೆಯುತ್ತಾ ಹೋಗುತ್ತದೆ. ಕಾಲಹರಣ ಮಾಡದೆ ಇಷ್ಟೊಂದು ಸಾಧಿಸಲು ಸಾಧ್ಯವಾಯಿತಲ್ಲ ಎಂದು. ಆಗ ನಮಗೊಂದು ಬಗೆಯ ತೃಪ್ತಿ. ಅದನ್ನು ನೋಡಿದವರೂ ಆಶ್ಚರ್ಯಪಡುತ್ತಾರೆ. ಶಹಭಾಷ್‌ಗಿರಿ ಸಿಗುತ್ತದೆ. ಆದರೆ ಶಹಭಾಷ್‌ಗಿರಿ ಪಡೆಯಲೋಸುಗ ಹವ್ಯಾಸ ಹಂಬಲಿಸುವುದಿಲ್ಲ. ಬೇರೆಯವರಿಂದ ಹೇಳಿಸಿಕೊಳ್ಳದೆ ತನ್ನೊಳಗಿರುವ ಕ್ರಿಯಾತ್ಮಕತೆ ತನಗೆ ತಾನೇ ಪ್ರೇರಣೆಕೊಟ್ಟು ತಾನಾರಿಸಿಕೊಂಡ ಹವ್ಯಾಸದಲ್ಲಿ ತಲ್ಲೀನವಾಗಿ ತನ್ಮಯತೆಯನ್ನು ಪಡೆಯುವವನಿಗಿಂತ ಸುಖಿ ಬೇರೆ ಯಾರೂ ಇಲ್ಲ.

ಹವ್ಯಾಸ ಇರುವವರಿಗೆ ಬೇಸರವೆಂಬುದೇ ಇಲ್ಲ. ಜೊತೆಯಲ್ಲಿ ಜನರಿರಬೇಕೆಂಬ ಲವಲವಿಕೆಯೂ ಇಲ್ಲ. ಅವರಿಗೆ ಹವ್ಯಾಸವೇ ಸಂಸಾರ, ಅದೇ ಅವರ ಜಗತ್ತು. ಹವ್ಯಾಸ ಹಚ್ಚಿಕೊಂಡವರಿಗೆ ಒಂಟಿತನದ ಕೊರಗೇ ಇರುವುದಿಲ್ಲ. ದಣಿವು ಕಾಣಿಸಿಕೊಳ್ಳುವುದಿಲ್ಲ. ಬೇರೆಯವರ ಗೊಡವೆಗೆ ಹೋಗುವ ಚಪಲವಿರುವುದಿಲ್ಲ.

ನಿಜವಾಗಿಯೆಂದರೆ ಹವ್ಯಾಸ ಒಂದು

ಬಗೆಯ ಸೌಂದರ್ಯೋಪಾಸನೆ, ಜ್ಞಾನಾರ್ಜನೆ ಹಾಗೂ ಆತ್ಮಾನ್ವೇಷಣೆಯ ಮಟ್ಟಕ್ಕೆ ನಮ್ಮನ್ನು ಏರಿಸಬಲ್ಲ ಏಣಿ. ಪ್ರಾರಂಭದಲ್ಲಿ ಹುಚ್ಚು ಎಂದೆನಿಸಿದರೂ ಹವ್ಯಾಸದ ಆಳ ಮತ್ತು ವಿಸ್ತಾರ ಹೆಚ್ಚಿದಂತೆ ಅದು ತಪಸ್ಸಿನ ಘನತೆಗೆ ಸಾಟಿಯಾಗಬಲ್ಲದು.

ಸಂಗ್ರಹಿಸುವ ಹವ್ಯಾಸ ಮನುಷ್ಯನಿಗೆ ಸಹಜವಾಗಿ ಬಂದಿರುತ್ತದೆ. ಅಂಚೆ ಚೀಟಿಗಳ ಸಂಗ್ರಹ, ಹಳೆಯ ನಾಣ್ಯ-ನೋಟುಗಳ ಸಂಗ್ರಹ, ಚಾವಿ-ಚೈನುಗಳ ಸಂಗ್ರಹ, ಗೊಂಬೆಗಳ ಸಂಗ್ರಹ, ಸುಂದರ ಛಾಯಾಚಿತ್ರಗಳ ಸಂಗ್ರಹ, ಬಗೆಬಗೆಯ ಹೂದಾನಿಗಳ ಸಂಗ್ರಹ - ಈ ಬಗೆಯ ಹವ್ಯಾಸಗಳು ಸಾಕಷ್ಟಿವೆ. ಶಂಖ, ಕಪ್ಪೆಚಿಪ್ಪು, ಕವಡೆ ಮುಂತಾದ ಸಮುದ್ರ ತೀರದಲ್ಲಿರುವ ವಸ್ತುಗಳನ್ನು ಶೇಖರಿಸುವುದೂ ಒಂದು ಹವ್ಯಾಸವೇ. ಹೊರಗಿನಿಂದ ಕೊಂಡು ತಂದು ಅಂದವಾಗಿ ಜೋಡಿಸುವವರು ಪಕ್ಕಾ ಹವ್ಯಾಸಿಗಳಲ್ಲ. ಸಮುದ್ರ ತೀರಕ್ಕೆ ಹೋಗಬೇಕು. ಮರಳಲ್ಲಿ ನಡೆಯಬೇಕು. ಸಮುದ್ರದ ಅಲೆಯಲ್ಲಿ ಈ ವಸ್ತುಗಳು ಅಪರೂಪವಾಗಿ ಬಂದು ತೀರ ಸೇರುವಾಗ ಓಡಿಹೋಗಿ ಅವುಗಳನ್ನು ಹಿಡಿಯಬೇಕು. ಆ ಸಂತೋಷವನ್ನು ಪಡೆಯದೆ ಪೇಟೆಯಿಂದ ಕೊಂಡು ತಂದಿಡುವುದು ಡಂಭಾಚಾರವಾಗುತ್ತದೆ. ನಿಸರ್ಗದ ಸಾನ್ನಿಧ್ಯ ಪಡೆಯದೆ ಈ ಬಗೆಯ ವಸ್ತುಗಳನ್ನು ಪಡೆಯುವುದು, ಆಳವಾಗಿ ಅಭ್ಯಾಸ ಮಾಡದೆ ಪದವಿಗಳನ್ನು ಪಡೆಯುವ ಉಡಾಫೆಯ ತರವಾಗುತ್ತದೆ.

ಮೇಲ್ಕಂಡ ಹವ್ಯಾಸಗಳಿಂದ ನಮಗೆ ಜನರ ಜೀವನವಿಧಾನ, ವೈವಿಧ್ಯತೆ, ವೇಷಭೂಷಣ, ನಾಗರಿಕತೆ, ಚರಿತ್ರೆ, ಸಂಸ್ಕೃತಿ ಹಾಗೂ ಪ್ರಕೃತಿಯ ಸ್ಪಷ್ಟ ಕಲ್ಪನೆ ಸಿಗುತ್ತದೆ. ಸಂಗ್ರಹಿಸಿ ಕಲಿಯುವುದು, ಪುಸ್ತಕಗಳನ್ನು ಓದಿ ಗ್ರಹಿಸಿ ಕಲಿಯುವುದಕ್ಕಿಂತ ಉತ್ತಮ ಮಟ್ಟದ್ದು. ಆದುದರಿಂದಲೇ ವಸ್ತು ಸಂಗ್ರಹಾಲಯವು ಸಂಶೋಧನಾತ್ಮಕ ಶಿಕ್ಷಣಕ್ಕೆ ಸೋಪಾನವೆಂದು ಪರಿಗಣಿಸಲ್ಪಟ್ಟಿದೆ.

ಪ್ರಾಣಿ ಪಕ್ಷಿಗಳನ್ನು ಸಾಕುವುದು, ಬಗೆ ಬಗೆಯ ಹೂಗಿಡಗಳನ್ನು, ಹಣ್ಣಿನ ಗಿಡಗಳನ್ನು ತೋಟದಲ್ಲಿ ಬೆಳೆಸುವುದು ಒಳ್ಳೆಯ ಹವ್ಯಾಸ. ಪ್ರಾಣಿ ಪಕ್ಷಿಗಳ, ಸಸ್ಯಗಳ ಜೀವನದ ಒಳನೋಟವನ್ನು ಸನಿಹದಿಂದ, ಸ್ನೇಹದಿಂದ ಅರಿತುಕೊಳ್ಳುವ ಹವ್ಯಾಸ ಅಷ್ಟೊಂದು ಸುಲಭಸಾಧ್ಯವಲ್ಲ. ಅದಕ್ಕೆ ತಕ್ಕ ಪರಿಸರದ, ಪರಿಶ್ರಮದ ಆವಶ್ಯಕತೆ ಇರುತ್ತದೆ. ಜೀವಿಗಳೊಡನೆ ಒಡನಾಡಬೇಕಾದ್ದರಿಂದ ಅಲ್ಪಸ್ವಲ್ಪ ವ್ಯಾಸಂಗವೂ ಬೇಕಾಗುತ್ತದೆ. ಇಲ್ಲದಿದ್ದಲ್ಲಿ ಅಲಕ್ಷ್ಯದಿಂದ, ಅಜಾಗರೂಕತೆಯಿಂದ ಅವುಗಳನ್ನು ಕೊಂದಂತಾಗುತ್ತದೆ.

ಸಂಗೀತ ಕಲೆಗೆ, ನೃತ್ಯ ಕಲೆಗೆ, ಚಿತ್ರಕಲೆಗೆ ಸಂಬಂಧಿಸಿದ ಹವ್ಯಾಸಗಳು ಬೇಕಷ್ಟಿವೆ. ಹಾಡುವುದು, ವಾದ್ಯಗಳನ್ನು ನುಡಿಸುವುದು, ಚಿತ್ರಗಳನ್ನು ಬಿಡಿಸುವುದು, ಛಾಯಾಚಿತ್ರಗಳನ್ನು ತೆಗೆಯುವುದು, ನೃತ್ಯ-ನಟನೆಗಳಲ್ಲಿ ಪಾಲ್ಗೊಳ್ಳುವುದು ಇವೆಲ್ಲಾ ಹವ್ಯಾಸಗಳೇ. ಇತ್ತೀಚೆಗೆ ಸಿನಿಮಾ, ಹಾಡುಗಾರಿಕೆ, 'ಅಂತ್ಯಾಕ್ಷರಿ' ಆಧುನಿಕ ಅಭಿರುಚಿಗೆ ಹೊಂದಿಕೊಂಡು ಆಕರ್ಷಕ ಹವ್ಯಾಸಗಳೆನಿಸಿಕೊಂಡಿವೆ. ಹಿಂದಿನ ಕಾಲದಲ್ಲಿ ಜೋಗುಳ, ಹರಿಕಥೆ, ಜಾನಪದ ಗೀತೆಗಳ ಗಾಯನ, ಬಯಲಾಟ, ಕೋಲಾಟ ಇವೆಲ್ಲಾ ಆಹ್ಲಾದಕರ ಹವ್ಯಾಸಗಳೆನಿಸಿಕೊಂಡಿದ್ದವು. ಹವ್ಯಾಸಗಳು ಕಾಲ ಬದಲಾದಂತೆ ಹೇಗೆ ಬದಲಾಗುತ್ತಾ ಹೋಗುತ್ತವೆ ಎಂಬುದಕ್ಕೆ ಇದೊಂದು ದೃಷ್ಟಾಂತ.

ಕಾಗದದಿಂದ ಪುಷ್ಪಗಳನ್ನು ತಯಾರಿಸುವುದು, ತಂತಿಯಲ್ಲಿ ಮಣಿಗಳನ್ನು ಪೋಣಿಸಿ ಪಕ್ಷಿ ಪ್ರಾಣಿಗಳ ಆಕೃತಿಯನ್ನು ಉಂಟುಮಾಡುವುದು, ಕಡ್ಡಿಗಳಿಂದ ತಾಜಮಹಲಿನಂತಹ ಸುಂದರ ಚಿತ್ರಪಟಗಳನ್ನು ತಯಾರಿಸುವುದು ಇವೆಲ್ಲಾ ಕುಶಲಕಲೆಗೆ ಸಂಬಂಧಪಟ್ಟ ಹವ್ಯಾಸಗಳು. ದೃಷ್ಟಿ-ಸೃಷ್ಟಿಗಳ ತಾಳಮೇಳ. ಕಸದಿಂದ ರಸ ತೆಗೆಯುವ ವಿದ್ಯೆ. ನಿರುಪಯುಕ್ತವೆಂದು ಬಿಸಾಡುವ ಗಾಜಿನ ಬಳೆಯ ಚೂರುಗಳು, ಕಬ್ಬಿನ ಜೊಳ್ಳು, ಗುಂಡಿಗಳು,

ಗೋಲಿಗಳು, ಕವಡೆಗಳು ಈ ಹವ್ಯಾಸಗಳಲ್ಲಿ ಅಲಂಕಾರ ಸಾಮಗ್ರಿಗಳಾಗುತ್ತವೆ.

ಕ್ರೀಡಾರಂಗದಲ್ಲೂ ಸಾಕಷ್ಟು ಹವ್ಯಾಸಗಳಿವೆ. ಈಜುವುದು, ತಂತಿಯ ಮೇಲೆ ನಡೆಯುವುದು, ವಿವಿಧ ಬಗೆಯ ಆಟಗಳನ್ನೂ ಅವುಗಳ ನೀತಿ ನಿಯಮಗಳನ್ನೂ ನೋಡಿ ತಿಳಿದುಕೊಂಡು ಅವುಗಳ ಬಗ್ಗೆ ಮಾಹಿತಿ ಸಂಗ್ರಹಿಸುವುದು ಕೂಡ ಹವ್ಯಾಸವಾಗಬಲ್ಲದು.

ಪ್ರವಾಸಿ ಸ್ಥಳಗಳಿಗೆ ಭೇಟಿ ಕೊಡುವುದು ಇನ್ನೊಂದು ಬಗೆಯ ಹವ್ಯಾಸ. ಪುಣ್ಯಸ್ಥಳಗಳಿಗೆ ಧಾರ್ಮಿಕ ದೃಷ್ಟಿಯಿಂದ ಭೇಟಿ ಕೊಡುವುದು ಯಾತ್ರೆಯಾಗುತ್ತದೆ. ಮಾನವನ ಉನ್ನತ ಕಲಾ ವೈಭವಗಳನ್ನು ಕಂಡು ಕಣ್ಮನಗಳನ್ನು ತಣಿಸುವುದು ಹಾಗೂ ಆಗಿನ ಕಾಲದ ಜನಜೀವನವನ್ನು ಅರಿಯಲು ಪ್ರಯತ್ನಿಸುವುದು ಶ್ರೇಷ್ಠವಾದ ಹವ್ಯಾಸ. ಬೇರೆ ಹವ್ಯಾಸಗಳೊಡನೆ ಹೋಲಿಸಿದರೆ ಈ ಹವ್ಯಾಸ ದುಬಾರಿ. ಹಣವಿರುವವರಿಗೆ ಮಾತ್ರ ಸಾಧ್ಯ. ಪ್ರತಿಯೊಂದು ಊರಲ್ಲೂ ನೋಡಬೇಕಾದದ್ದು ಇದ್ದೇ ಇರುತ್ತದೆ. ನೋಡುವವನಿಗೆ ಬೆಟ್ಟದಲ್ಲಿ, ಸಮುದ್ರದಲ್ಲಿ, ನದಿಯಲ್ಲಿ, ಜಲಪಾತದಲ್ಲಿ, ಕಾಡಿನಲ್ಲಿ, ಜನಸಂದಣಿಯಲ್ಲಿ ಕೂಡ ನೋಡುವುದು, ಕಲಿಯುವುದು ಬೇಕಾದಷ್ಟಿದೆ. ನಾವು ಕಣ್ಣಿದ್ದೂ ಕುರುಡರು. ಹವ್ಯಾಸಿಗೆ ನೋಡಲು ಎರಡು ಕಣ್ಣುಗಳು ಸಾಲುವುದಿಲ್ಲ. ಹಾಗಾಗಿ ಅವನು ಪದೇ ಪದೇ ನೋಡಿದ ಸ್ಥಳವನ್ನೇ ನೋಡುವುದುಂಟು. ಪ್ರತಿಸಾರಿ ನೋಡಿದಾಗಲೂ ಅವನಿಗೆ ಹೊಸ ಹೊಸ ಆಯಾಮಗಳು ಗೋಚರಿಸುತ್ತವೆ. ಅವನು ಸುಮ್ಮನೆ ಮುಟ್ಟಿ ಬರುವ ಪೈಕಿಯವನಲ್ಲ. ತಟ್ಟಿ ತಟ್ಟಿ ಆ ಸ್ಥಳದ ರಹಸ್ಯ, ಸ್ವಾರಸ್ಯವನ್ನು ಹೀರುತ್ತಾನೆ. ಅದರೊಡನೆ ಆತ್ಮೀಯತೆಯನ್ನು ಬೆಳೆಸಿಕೊಳ್ಳುತ್ತಾನೆ.

ಸಾಹಿತ್ಯಕ್ಕೆ ಸಂಬಂಧಪಟ್ಟ ಹವ್ಯಾಸಗಳೂ ಇವೆ. ಪತ್ರಿಕೆಗಳನ್ನು, ಪುಸ್ತಕಗಳನ್ನು ಓದಿ ಅದರಲ್ಲಿ ಬರುವ ಸ್ವಾರಸ್ಯಕರವಾದ ಸಂಗತಿಗಳನ್ನು, ಸೂಕ್ತಿಗಳನ್ನು, ನವೀನ ಶಬ್ದ ಪ್ರಯೋಗಗಳನ್ನು, ನಗೆಹನಿಗಳನ್ನು, ಚುಟುಕಗಳನ್ನು ಬರೆದಿಟ್ಟುಕೊಳ್ಳುವುದು, ಇಲ್ಲವೇ ಕತ್ತರಿಸಿಟ್ಟುಕೊಳ್ಳುವುದು ಕೆಲವರ ಹವ್ಯಾಸವಾಗಿರುತ್ತದೆ. ಆದರೆ ಟಿವಿ ಬಂದನಂತರ ಓದುವುದು ಕಡಿಮೆಯಾಗಿ ಈ ಬಗೆಯ ಹವ್ಯಾಸ ನಶಿಸಿ ಹೋಗಬಹುದೆಂಬ ಶಂಕೆ ಇದೆ. ಓದುವವರಿಲ್ಲದಿದ್ದರೆ ಬರೆಯುವವರೂ ಕಡಿಮೆಯಾಗುತ್ತಾರೆ. ವಾಸ್ತವವಾಗಿ ಇಂದು ಸಾಹಿತ್ಯದ ಭವಿಷ್ಯವೇ ಪ್ರಶ್ನಾರ್ಥಕ ಸ್ಥಿತಿಯಲ್ಲಿದೆ!

ಒಟ್ಟಿನಲ್ಲಿ ಹೇಳುವುದಾದರೆ ಹವ್ಯಾಸವೆನ್ನುವುದು ನಮ್ಮನ್ನು ಸುತ್ತಿಕೊಂಡು ನಮ್ಮ ಬರ್ಬರ ಬದುಕನ್ನು ಸುಂದರಗೊಳಿಸುವ ಬಳ್ಳಿಯಂತೆ ಅದು ಚೇತೋಹಾರಿಯೂ ಹೌದು. ಎಷ್ಟೇ ಕಲಿತಿದ್ದರೂ ಕಲಿತದ್ದು ಸಾಲದು ಎಂಬುದನ್ನು ಹವ್ಯಾಸ ತೋರಿಸಿಕೊಡುತ್ತದೆ. ಹೆಚ್ಚು ಕಲಿಯಲು ಪ್ರೇರೇಪಿಸುತ್ತದೆ. ಹವ್ಯಾಸಿ ತನಗೆ ತಾನೇ ಗುರು. ಅವನೊಬ್ಬ ಏಕಲವ್ಯ. ★

## ಕಲ್ಲು-ಕಂಬನಿ

ನ್ಯೂಯಾರ್ಕಿನ ಗ್ರೀಕ್ ಆರ್ಥೋಡಕ್ಸ್ ಚರ್ಚಿನಲ್ಲಿ ಒಂದು ಶಿಲಾವಿಗ್ರಹವಿದೆ. ಅದರ ಕಣ್ಣಿನಿಂದ ಸದಾ ನೀರು ಹರಿಯುತ್ತಿರುವುದೇ ಆ ಪ್ರತಿಮೆಯ ವೈಶಿಷ್ಟ್ಯ. ಆ ಅದ್ಭುತವನ್ನು ನೋಡಲು ದಿನಾಲು ಸಾವಿರಾರು ಜನ ಬರುತ್ತಾರೆ. ಆದರೆ ಪ್ರತಿಮೆಯಿಂದ ನೀರು ಹೇಗೆ ಒಸರುತ್ತದೆನ್ನುವುದನ್ನು ಕಂಡುಹಿಡಿಯಲು ಮಾತ್ರ ಈ ವರೆಗೆ ಸಾಧ್ಯವಾಗಿಲ್ಲ.

• ಜೆ.ವಿ. ತಿಪ್ಪೇಸ್ವಾಮಿ

## ಮದನ ಕಾಮನ ಕಥೆಗಳು

೯

# ಸೇಡು ತೀರಿಸಿಕೊಳ್ಳಲು ಗುರುವಿನ ನಿರ್ಧಾರ

ತನ್ನ ಮಂತ್ರವನ್ನು ತನ್ನ ಮೇಲೆಯೇ ಪ್ರಯೋಗಿಸಿ, ತನಗೆ ಕೈಕೊಟ್ಟ ಶಿಷ್ಯನ ಮೇಲೆ ಸೇಡು ತೀರಿಸಿಕೊಳ್ಳಲು ತಕ್ಕ ಅವಕಾಶ ಇದೆ ಎಂದು ಮನದಲ್ಲಿಯೇ ನಿರ್ಧರಿಸಿಕೊಂಡ ಬ್ರಾಹ್ಮಣ ಗುರು ಧನಪಾಲನೆಡೆಗೆ ಹೊರಳಿ, ಉದಾಸೀನ ಸ್ವರದಲ್ಲಿ "ಓಹ್! ಸಾಹುಕಾರರೆ, ಒಂದು ವಿಷಯವನ್ನು ನಿಮ್ಮಿಂದ ಬಚ್ಚಿಡಬೇಕೆಂದು ಎಷ್ಟು ಪ್ರಯತ್ನಿಸಿದರೂ ನಿಮ್ಮ ಉಪ್ಪನ್ನುಂಡ ನನಗೆ ಸಾಧ್ಯವಾಗದಾಗಿದೆ. ಆದರೆ ....."ಎಂದು ನಿಟ್ಟುಸಿರು ಬಿಟ್ಟನು.

"ಹೇಳಿ ಹೇಳಿ ಸ್ವಾಮಿ, ನನಗೆ ಕಲ್ಯಾಣವಾಗುವಂತಹ ವಿಚಾರವೇ ನಿಮ್ಮ ಮನದಲ್ಲಿರುತ್ತದೆಂದು ನನಗೆ ವಿಶ್ವಾಸವಿದೆ."

"ಈ ಅಶ್ವದ ಉಚ್ಚ ಗುಣದ ಬಗ್ಗೆ ಎಳ್ಳಷ್ಟೂ ಸಂಶಯವಿಲ್ಲ. ಆದರೆ ನಿಮ್ಮ ಮಗನಿಗೆ ಇದನ್ನು ನೀಗಿಸಿಕೊಂಡು ಹೋಗುವದು ಶಕ್ಯವೇ? ಎಂದು ಮಾತ್ರ ನನಗೆ......" ಎಂದು ಗುರುವು ಮಾತಾಡುವಷ್ಟರಲ್ಲಿಯೇ ಧನಪಾಲ ನಡುವೆಯೇ ಬಾಯಿ ಹಾಕಿ,

"ಆದರೆ ನನ್ನ ಪುತ್ರ ಶ್ರೇಷ್ಠ ದರ್ಜೆಯ ಅಶ್ವಾರೋಹಿ ಎಂದು ನೀವೇ ಹೇಳುತ್ತಿದ್ದಿರಲ್ಲ?" ಎಂದನು.

"ನಿಜ," ಆದರೆ ಈ ಮಾತು ಸಾಮಾನ್ಯ ಕುದುರೆಗಳ ವಿಷಯದಲ್ಲಿ ಮಾತ್ರ ಅನ್ವಯಿಸುತ್ತದೆ. ಈ ಕುದುರೆಯ ಮಾತು ಹಾಗಲ್ಲ." ಇದು ಗಾಳಿಯಲ್ಲಿ ಪಕ್ಷಿಗಿಂತ ಹಗುರವಾಗಿ ತೇಲಬಲ್ಲದು. ಮುಗಿಲು ಮುಟ್ಟುವ ಸಾಮರ್ಥ್ಯ ಇದಕ್ಕಿದೆ. ಇದರಿಂದ ನಿಮ್ಮ ಪುತ್ರನ ಜೀವಕ್ಕೆಯೇ ಅಪಾಯವಿದೆ."

"ಹೀಗೋ? ನೀವೇನು ಆಡುತ್ತಿರುವಿರಿ ಎಂಬುದರ ಕಲ್ಪನೆ ನಿಮಗಿದೆಯೇ?" ಚಾಣಾಕ್ಷ ವ್ಯಾಪಾರಿ ಗುರುವಿನ ಮಾತನ್ನು ಒಮ್ಮೆಲೇ ನಂಬಲಾರದೆ ನುಡಿದನು.

ಗುರುವಿಗೆ ಧನಪಾಲನ ಮಾತಿನ ಇಂಗಿತ ತಕ್ಷಣ ಅರಿವಾಯಿತು. ಅವನ ಮನಸ್ಸಿನಲ್ಲಿಯ ಸಂಶಯ ನಿವಾರಿಸಲೆಂದು ಅವನು, "ನನ್ನ ಮಾತಿನ ಸತ್ಯತೆಯನ್ನು ನಿಮಗೆ ಕಂಡುಕೊಳ್ಳಬೇಕಿದೆಯಲ್ಲವೇ?" ಎಂದವನೇ ಆ ಕುದುರೆಯನ್ನೇರಿದನು.

ಬಾರಕೋಲಿನ ಒಂದೇ ಏಟು ಕುದುರೆಗೆ ಸಾಕಾಯಿತು. ಅದು ಎಷ್ಟೂ ಪ್ರಯತ್ನವಿಲ್ಲದೆಯೇ ಸರಾಗವಾಗಿ ಆಕಾಶದೆಡೆಗೆ ತನ್ನನ್ನೇ

ತೂರಿಕೊಂಡು ಅದ್ಭುತ ವೇಗದಿಂದ ತೇಲಿ ಕೊಂಡು ಕ್ಷಣಾರ್ಧದಲ್ಲಿ ಕಾಣದಾಯಿತು. ಗುರುವು ಕುದುರೆಯಿಂದ ಮರಳಿ ಬರುವವ ರೆಗೂ ಧನಪಾಲ ಅವರ ಆಶೆಯನ್ನೇ ತೊರೆದು ತನ್ನ ಮೂರ್ಖತನಕ್ಕಾಗಿ ಪಶ್ಚಾತ್ತಾಪ ಪಡಲಾರಂಭಿಸಿದ್ದನು.

ಗುರುವು ತಿರುಗಿ ಭೂಮಿಗಿಳಿದಾಗ ಧನ ಪಾಲನಿಗೆ ಸಮಾಧಾನವಾಗಿತ್ತು. ತನ್ನ ಅತ್ಯಂತ ಪ್ರೀತಿಯ ಏಕ ಮಾತ್ರ ಪುತ್ರನನ್ನು ಈ ಕುದುರೆಯ ಕೈಯಿಂದ ಗುರುವೇ ಪಾರು ಮಾಡಿದಂತಾಯಿತು ಎಂದುಕೊಂಡನಲ್ಲದೆ ಅದನ್ನು ಕೊಳ್ಳುವ ಮೊದಲೇ ಗುರುವನ್ನು ವಿಚಾರಿಸಬಾರದಿತ್ತೆ? ಎಂಬ ಯೋಚನೆಯೂ ಅವನಿಗೆ ಬರದಿರಲಿಲ್ಲ.

ಇಂಥ ಅಪೂರ್ವ ಶಕ್ತಿಯ ಕುದುರೆಯನ್ನು ಅದನ್ನು ನಿಯಂತ್ರಿಸಬಲ್ಲ ಈ ಬ್ರಾಹ್ಮಣ ಗುರುವಿಗೆಯೇ ದಾನವೆಂದು ಕೊಟ್ಟುಬಿಡು ವುದೇ ಉಚಿತ ಮಾರ್ಗವೆಂದು ಅವನಿ ಗೊಮ್ಮೆ ಅನಿಸಿತಾದರೂ ತಾನು ಅದಕ್ಕಾಗಿ ತೆತ್ತಿರುವ ಹಣ ನೆನೆದು, ತುಸು ಕಡಿಮೆ ಹಣ ದೊರೆತರೂ ಸರಿ, ಬೇರೆಯವರಿಗೆ ಅದನ್ನು ಮಾರಬೇಕೆಂದುಕೊಂಡ.



ಧನಪಾಲನ ಮನಸ್ಸಿನ ಹೊಯ್ದಾಟವನ್ನು ಕಂಡ ಗುರು ಈ 'ಬೇಟೆ' ತನ್ನ ಕೈಯಿಂದ ಜಾರಿಕೊಂಡು ಹೋಗಬಾರದೆಂದು ತಾನಾಗಿಯೇ, "ಧನಪಾಲ, ಈ ಕುದುರೆ ನಿಮ್ಮ ಮಗನಿಗೆ ಅದೆಷ್ಟು ಅಪಾಯಕಾರಿ ಎಂಬುದನ್ನು ನೀವೇ ಕಂಡುಕೊಂಡಿದ್ದೀರಿ. ಆದರೆ ಅದಕ್ಕಾಗಿ ನೀವು ಬೆಲೆ ಕೊಟ್ಟಿದ್ದೀರಿ. ಅದರ ಬಗ್ಗೆ ನಿಮಗೆ ಚಿಂತೆಬೇಡ. ಈ ಕುದುರೆ ನನಗಿರಲಿ. ನಿಮ್ಮ ಹಣವನ್ನು ಪೂರ್ತಿಯಾಗಿ ಸಲ್ಲಿಸಲು ನಾನು ಸಿದ್ಧ. ಬೇಕಾದರೆ ನಿಮ್ಮ ಮಗನನ್ನು ನನ್ನೊಂದಿಗೆ ಕಳುಹಿಸಿರಿ. ಈಗಲೇ ಹಣ ಕೊಟ್ಟುಬಿಡುವೆ," ಎಂದನು.

ಧನಪಾಲನಿಗಿದರಿಂದ ತುಂಬಾ ಸಂತೋಷವಾಯಿತು. ಮಗನ ಮೇಲಿನ ಕುತ್ತೂ ಪರಿಹಾರವಾಯಿತು, ತನ್ನ ಹಣವೂ ಮರಳಿ ದೊರೆಯಿತು ಎಂದಾಗ ಅವನು ಸಂತೋಷಪಡುವುದು ಸ್ವಾಭಾವಿಕವೇ. ಆದರೆ ಅದುವರೆಗಿನ ಘಟನೆಗಳನ್ನೆಲ್ಲ ಮೂಕ ಪ್ರೇಕ್ಷಕನಂತೆ ನೋಡುತ್ತ ನಿಂತಿದ್ದ ಧನಪಾಲನ ಮಗ ಮಾತ್ರ ದಿಙ್ಮೂಢನಾಗಿದ್ದ. ತಂದೆ ಹೇಳಿದೊಡನೆಯೇ ಮರು ಮಾತಾಡದೆಯೇ ಅವನು ತನ್ನ ಗುರುವಿನೊಂದಿಗೆ ಹೋಗಿ ಹಣ ತಗೆದುಕೊಂಡು ಬಂದನು.

ಮನುಷ್ಯ ಎಷ್ಟೇ ವಿದ್ವಾಂಸನೂ ತಿಳುವಳಿಕೆಯುಳ್ಳವನೂ ಆಗಿದ್ದರೂ ಸಿಟ್ಟು ಮತ್ತು ದ್ವೇಷಭಾವನೆಗಳು ಅವನನ್ನು ಕೆಣಕಿದಾಗ ಅವನು ತನ್ನ ಮನುಷ್ಯತ್ವವನ್ನೇ ಕಳೆದುಕೊಳ್ಳುವನು. ಈಗ ತನ್ನ ಶಿಷ್ಯನ ಬಗ್ಗೆ ಗುರುವಿನಲ್ಲಿ ದ್ವೇಷಭಾವನೆ ಉಕ್ಕೇರಿ ಕುಣಿಯುತ್ತಿತ್ತು. ಶಿಷ್ಯನು ಮಾಡಿದ ಅಪರಾಧ ದೊಡ್ಡದೋ ಚಿಕ್ಕದೋ ಎಂಬುದರ ಪ್ರಜ್ಞೆ ಕೂಡ ಅವನಿಗೆ ಉಳಿಯಲಿಲ್ಲ. ಗುರುವು ಆ ಕುದುರೆಯನ್ನು ಕಂಬವೊಂದಕ್ಕೆ ಕಟ್ಟಿ ಮನವಾರೆ ಥಳಿಸಿದನು. ಆನಂತರ ಹಲವಾರು ತಾಸುಗಳ ವರೆಗೆ ಅದಕ್ಕೆ ಅನ್ನ- ನೀರುಗಳನ್ನು ಕೊಡದೆಯೇ ಸತತವಾಗಿ ಸವಾರಿ ಮಾಡಿದನು. ಅದು ನೀರಡಿಕೆಯಿಂದಲೇ ಪ್ರಾಣ ನೀಗುವಂಥಹ ಪರಿಸ್ಥಿತಿ ಒದಗಿದಾಗ ಅದನ್ನು ತೀರ ತುಸು ನೀರಿರುವ ಕೆರೆಯೊಂದಕ್ಕೆ ಕರೆದೊಯ್ದನು. ಅಲ್ಲಿ ಇದ್ದ ನೀರು ಕೂಡ ರಾಡಿಯೇ ಆಗಿತ್ತು.

ಕುದುರೆಯ ರೂಪದಲ್ಲಿದ್ದ ಶಿಷ್ಯನಿಗೆ, ಗುರುವು ತನ್ನನ್ನು ಕೊಲ್ಲದೆ ಬಿಡಲಾರ ಎನ್ನಿಸಿತು. ಅಂತೆಯೇ ಪಾರಾಗಲು ತಕ್ಕ ಅವಕಾಶವನ್ನೇ ಅವನು ಎದುರು ನೋಡುತ್ತಿದ್ದನು. ಈಗ ಕೆರೆಯಲ್ಲಿ ನೀರು ಕುಡಿಯಲೆಂದು ಗುರುವು ತನ್ನ ಕೈಬಿಟ್ಟೊಡನೆಯೇ ತನ್ನ ಅವಕಾಶವನ್ನವನು ಕಂಡುಕೊಂಡನು.

ಅದೇ ಗುರುವಿನಿಂದ ಕಲಿತ ವಿದ್ಯೆಯೊಂದನ್ನು ನೆನೆಸಿಕೊಂಡು ಅವನು ಒಡನೆಯೇ ಕೆರೆಯಲ್ಲಿಯ ಸತ್ತ ಮೀನೊಂದರ ದೇಹದಲ್ಲಿ ಸೇರಿಕೊಂಡು ನೀರಿನಲ್ಲಿ ಮುಳುಗಿಬಿಟ್ಟನು. ಕುದುರೆಯು ಒಮ್ಮೆಲೇ ಸತ್ತು ಬಿತ್ತು.

ಕುದುರೆಯು ಇಷ್ಟೊಂದು ಅಲ್ಪ ಸಮಯದಲ್ಲಿಯೇ ಸತ್ತುದು ಗುರುವಿಗೆ ಆಶ್ಚರ್ಯವನ್ನುಂಟುಮಾಡಿತ್ತು. ಆದರೆ ತುಸು ವಿಚಾರ ಮಾಡಿನೋಡಿದಾಗ ಅವನಿಗೆ ಅದರ ಅರ್ಥ ಹೊಳೆಯಿತು. ಕೂಡಲೇ ಶಿಷ್ಯರನ್ನೆಲ್ಲ ಕರೆದು, ಆ ಕೆರೆಯಲ್ಲಿಯ ನೀರನ್ನೆಲ್ಲ ತೆಗೆದುಹಾಕಿ ಮೀನುಗಳನ್ನೆಲ್ಲಾ ಕೊಂದುಬಿಡಲು ಆಜ್ಞೆಯಿತ್ತನು. ಏಕೆಂದರೆ ಆ ನೂರಾರು ಮೀನುಗಳಲ್ಲಿ ಒಂದನ್ನೇ ಶೋಧಿಸುವುದು ಕಠಿಣವಿತ್ತು.

ಇನ್ನು ಈ ರೂಪದಲ್ಲಿ ತನ್ನ ಆಟ ಬಹಳಹೊತ್ತು ನಡೆಯಲಾರದೆಂದು ಬಗೆದು ಮೀನಿನ ರೂಪದಲ್ಲಿದ್ದ ಶಿಷ್ಯನು ಬೇರೆ ಮಾರ್ಗಗಳನ್ನು ಕುರಿತು ಚಿಂತಿಸಹತ್ತಿದನು.

ಅದೇ ಸಮಯಕ್ಕೆ ಮಾದಿಗನೊಬ್ಬ ಸತ್ತ ಎಮ್ಮೆಯೊಂದನ್ನು ದರದರನೇ ಎಳೆಯುತ್ತ ತಂದು, ಕೆರೆಯ ಹತ್ತಿರದ ಒಂದು ಮರದಡಿಯಲ್ಲಿ ಬಿಟ್ಟು, ಅದರ ಚರ್ಮ ಸುಲಿಯಲೋಸುಗ ಕತ್ತಿಯನ್ನು ತರಲೆಂದು ಮನೆಗೆ ಹೋದನು. ಇದು ಉತ್ತಮ ಅವಕಾಶವೆಂದು ಬಗೆದು ಮೀನಿನ ದೇಹದಲ್ಲಿದ್ದ ಶಿಷ್ಯನು ಆ ಎಮ್ಮೆಯ ದೇಹವನ್ನು ಸೇರಿ

ಮನೆಯ ಕಡೆಗೆ ಓಡಲಾರಂಭಿಸಿದನು.

ಮಾದಿಗ ಮರಳಿ ಬಂದಾಗ ತಾನು ಬಿಟ್ಟ ಎಮ್ಮೆ ಅಲ್ಲಿರದ್ದನ್ನು ಕಂಡು ಆಶ್ಚರ್ಯಚಕಿತನಾದನು. ಅಂತೆಯೇ ಅವನು ಆ ಬಗ್ಗೆ ಬ್ರಾಹ್ಮಣ ಗುರುವನ್ನು ವಿಚಾರಿಸಿದನು.

ಇದರಿಂದ ಗುರುವಿಗೆ ಕೆರೆಯನ್ನು ಬತ್ತಿಸಲು ತಾನು ಮಾಡುತ್ತಿದ್ದ ಪ್ರಯತ್ನ ನಿಕ್ಷಯೋಜಕವೆಂದು ತಿಳಿಯಿತು. ತನ್ನ ಶಿಷ್ಯ ತನ್ನನ್ನು ಮತ್ತೂ ಮೀರಲು ಯತ್ನಿಸುತ್ತಿದ್ದುದನ್ನು ಕಂಡು ಅವನು ಕೋಪದಿಂದ ತುಟಿ ಕಚ್ಚಿದನು. ಎಮ್ಮೆಯ ರೂಪದಲ್ಲಿ ಪಾರಾಗಿ ಹೋಗಲು ಯತ್ನಿಸಿದ ಶಿಷ್ಯನನ್ನು ಬೆನ್ನಟ್ಟಿ ಹಿಡಿಯಲು ಅವನು ತನ್ನ ಶಿಷ್ಯರನ್ನೆಲ್ಲ ಅಟ್ಟಿದನು. ಓಡಿ ಓಡಿ ದಣಿದ ಎಮ್ಮೆ ಗಿಡವೊಂದರ ಕೆಳಗೆ ನಿಂತಿರುವುದು ಕಂಡೊಡನೆಯೇ ಗುರುವು ಅದನ್ನು ಹೊಡೆದು ಕೊಲ್ಲಲು ಮಾದಿಗನಿಗೆ ಆಜ್ಞೆ ವಿಧಿಸಿದನು.

ತನ್ನ ಕಷ್ಟ ಪರಂಪರೆಗೆ ಕೊನೆಯೇ ಇಲ್ಲದುದನ್ನು ಕಂಡ ಶಿಷ್ಯನು ಮುಖ ಮೇಲೆತ್ತಿದನು. ಅಲ್ಲಿ ಗಿಡದಲ್ಲಿಯ ಗೂಡೊಂದರಲ್ಲಿ ಗಿಳಿ ಸತ್ತು ಬಿದ್ದಿರುವುದು ಅವನ ಲಕ್ಷ್ಯಕ್ಕೆ ಬಂತು. ತಕ್ಷಣ ಅವನು ಎಮ್ಮೆಯ ದೇಹ ತೊರೆದು ಗಿಳಿಯ ಶರೀರದಲ್ಲಿ ನುಸುಳಿ ಅಲ್ಲಿಂದ ಹಾರಿಹೋದನು.

ಈ ಸಲ ಮಾತ್ರ ಗುರುವು ಮೋಸ ಹೋಗಲಿಲ್ಲ; ತನ್ನ ವಿದ್ಯೆಯ ಬಲದಿಂದ ತನ್ನ ಶಿಷ್ಯ ಗಿಳಿಯಾಗಿ ಹಾರಿಹೋದುದನ್ನು ಕಂಡುಕೊಂಡ. ಅದರಿಂದ ಎಷ್ಟೂ ಧೃತಿಗೆಡದೆಯೇ ಅವನು ಕೂಡಲೇ ಗರುಡಪಕ್ಷಿಯಾಗಿ ಪರಿವರ್ತನೆ ಹೊಂದಿ ಆ ಗಿಳಿಯನ್ನು ಬೆನ್ನಟ್ಟಿದನು.

ಎಷ್ಟೋ ದೂರದ ವರೆಗೆ ಈ ಗುರು-ಶಿಷ್ಯರಿಬ್ಬರ ಸ್ಪರ್ಧೆ ನಡೆದೇಇತ್ತು. ಆದರೂ ಗಿಳಿ ಗರುಡನ ಕೈಗೆ ಸಿಕ್ಕಲಿಲ್ಲ. ಕೊನೆಗೆ ಅವೆರಡೂ ನಗರವೊಂದನ್ನು ಸೇರಿದಾಗ ಗಿಳಿ ಪಾರಾಗಲು ಅವಕಾಶ ಕಂಡುಕೊಂಡಿತು. ಅರಮನೆಯ ಮೇಲಂತಸ್ತಿನ ಕಿಟಕಿಯೊಂದು ತೆರೆದಿತ್ತು. ಒಳಗಡೆ ಸುಂದರ ಯುವತಿಯಾದ ರಾಜಪುತ್ರಿಯು ಸ್ನಾನಾನಂತರ ತನ್ನ ಕೂದಲನ್ನು ಒಣಗಿಸುತ್ತ ಮಂಚದ ಮೇಲೆ ಪವಡಿಸಿದ್ದಳು. ತಾನು ಬದುಕಲು ಇದಕ್ಕಿಂತ ಯೋಗ್ಯವಾದ ಆಶ್ರಯ ಬೇರೆ ಇಲ್ಲವೆಂದು ನಿರ್ಧರಿಸಿ ಗಿಳಿಯು ಸರ್ರನೆ ಕಿಟಕಿಯೊಳಗಿಂದ ಹಾರಿಬಂದು ರಾಜಕುಮಾರಿಯ ತೊಡೆಯ ಮೇಲೆ ಬಿತ್ತು.

ಹಿಂದಿನಿಂದಲೇ ಬಂದ ಗರುಡ ಈ ರೀತಿ ಅರಮನೆಯನ್ನು ಪ್ರವೇಶಿಸುವಂತಿರಲಿಲ್ಲ. ಉಪಾಯಗಾಣದೆ ಅದು ಕಿಟಕಿಯ ಹೊಸ್ತಿಲ ಮೇಲೆಯೇ ಕುಳಿತು ಪಕ್ಷಿಗಳ ಭಾಷೆಯಲ್ಲಿಯೇ, "ನನ್ನಿಂದ ಕಲಿತ ವಿದ್ಯೆಯನ್ನು ನನ್ನ ಮೇಲೆಯೇ ತಿರುಗಿಸಲು ನೀನು ಪ್ರಯತ್ನಿಸುತ್ತಿರುವೆ! ಆದರೆ ಗೆದೆಯುವೆನೆಂದು ಮಾತ್ರ ನೀನು ಭಾವಿಸಬೇಡ; ಇನ್ನೆಂಟು ದಿನಗಳಲ್ಲಿ ನಿನ್ನನ್ನು ಮುಗಿಸುವೆ," ಎಂದಿತು.

ಅದಕ್ಕುತ್ತರವಾಗಿ ಗಿಳಿಯು, "ಹಾಳಾಗಿ ಹೋಗು!" ಎಂದು ಶಪಿಸಿತು.

ಪಕ್ಷಿಗಳ ಈ ಭಾಷೆ ಎಳ್ಳಷ್ಟೂ ಅರ್ಥವಾಗದ ರಾಜಕನ್ಯೆಯು ಪ್ರೀತಿಯಿಂದ ಗಿಳಿಯ ಮೈದಡವಿದಳು.

(ಮುಂದಿನ ಸಂಚಿಕೆ ನೋಡಿ)

## ಬರೆಸಿದ ಕವಿ

ಡಂಕನ್ ಮ್ಯಾಕ್ ಇಂಟೈರ್‌ನ (೧೭೨೪-೧೮೧೨)ಕವನಗಳೆಂದರೆ ಸ್ಕಾಟ್ಲೆಂಡಿನ ಜನ ಹುಚ್ಚೆದ್ದು ಕುಣಿಯುತ್ತಾರೆ. ಆದರೆ ಆತನಿಗೆ ಓದಲೂ ಬರುತ್ತಿರಲಿಲ್ಲ; ಬರೆಯಲೂ ಬರುತ್ತಿರಲಿಲ್ಲ. ಇಂಟೈರ್ ಹೇಳಿದ ಕವನಗಳನ್ನು ಆತನ ಮಿತ್ರರು ಬರೆದುಕೊಳ್ಳುತ್ತಿದ್ದರಂತೆ.

• ಜಿ.ವಿ. ತಿಪ್ಪೇಸ್ವಾಮಿ

# ಗೂಢಚಾರಿಣಿಯೊಬ್ಬಳ ಪ್ರೇಮ ಪ್ರಕರಣ

• ಉಮಾಶಂಕರ

ಆಧಾರ: 'ರೀಡರ್ಸ್ ಡೈಜೆಸ್ಟ್'

೧೯೮೭ನೇ ಇಸವಿಯ ಒಂದು ದಿನ. ವಿಮಾನವೊಂದು ಚೀನಾದ ನಾನ್‌ಜಿಂಗ್ ಪಟ್ಟಣದಲ್ಲಿ ಬಂದಿಳಿಯಿತು. ಅದರಲ್ಲಿದ್ದ ಕ್ಯಾಲಿಫೋರ್ನಿಯಾದಲ್ಲಿರುವ ಸ್ಯಾನ್ ಜೋಸ್ ಸ್ಟೇಟ್ ಯೂನಿವರ್ಸಿಟಿಯ ಇತಿಹಾಸ ಅಧ್ಯಾಪಕ ಲಾರಿ ಏಂಜಲ್‌ಮನ್ ಚೀನಾದ ನಾನ್‌ಜಿಂಗ್ ಯೂನಿವರ್ಸಿಟಿಯಲ್ಲಿ ಅಧ್ಯಾಪಕ ಹುದ್ದೆಯನ್ನು ವಹಿಸಿಕೊಳ್ಳುವವರಿದ್ದರು. ಅಮೆರಿಕದಲ್ಲಿ ಎರಡು ದಶಕಗಳಿಂದ ಅಧ್ಯಾಪಕರಾಗಿದ್ದ ಅವರು ಆ ಎರಡು ದೇಶಗಳ ನಡುವೆ ಆದ ವಿನಿಮಯ ಯೋಜನೆಯ ಅಂಗವಾಗಿ ಚೀನಕ್ಕೆ ಬಂದಿದ್ದರು.

ಆದರೆ ತನ್ನ ಮೇಲೆ ಚೀನಾದ ಪೀಪಲ್ಸ್ ಲಿಬರೇಷನ್ ಆರ್ಮಿ (ಪಿ.ಎಲ್.ಎ) ತೀವ್ರ ನಿಗಾ ಇಟ್ಟಿದೆ ಎಂದು ಏಂಜಲ್‌ಮನ್ ಕನಸಿನಲ್ಲಿಯೂ ಎಣಿಸಿರಲಿಲ್ಲ. ಅಮೆರಿಕದಲ್ಲಿರುವಾಗ ಅವರು ವಿಯೆಟ್ನಾಂ ಯುದ್ಧದ ಬಗ್ಗೆ ಒಂದು ಪುಸ್ತಕ ಬರೆದಿದ್ದು ಪಿ.ಎಲ್.ಎ.ಗೆ ಗೊತ್ತಿತ್ತು. ಇದೇ ಕಾರಣದಿಂದಾಗಿ ಅವರು ಅಮೆರಿಕದ ಸಿ.ಐ.ಎ.ಯವರ ಗೂಢಚಾರ ಎಂದು ಪಿ.ಎಲ್.ಎ. ಭಾವಿಸಿತ್ತು. ಮುಂದಿನ ದಿನಗಳಲ್ಲಿ ಅವರು ನಾನ್‌ಜಿಂಗ್ ಪಟ್ಟಣದಲ್ಲಿ ಫೋಟೋಗಳನ್ನು ತೆಗೆಯುತ್ತಾ ಇಂಗ್ಲಿಷ್ ಬಲ್ಲ ಅಪರಿಚಿತರೊಂದಿಗೆ ಕಾಲ ಕಳೆಯುತ್ತಿದ್ದರು. ಆದರೆ ಇದು ಗೂಢಚಾರರು ಮಾಡುವ ಕೆಲಸವಾಗಿರಲಿಲ್ಲ. ಅಲ್ಲದೆ ಅಮೆರಿಕದಲ್ಲಿದ್ದಾಗ ಅವರು ಪತ್ರಿಕಾ ಪ್ರತಿನಿಧಿಯಾಗಿಯೂ ಕೆಲಸ ಮಾಡಿದ್ದರು. ಆದರೆ ಏಂಜಲ್‌ಮನ್ ತಮ್ಮ ಉದ್ದೇಶವನ್ನು ಮುಚ್ಚುಮರೆಯಿಂದ ಸಾಧಿಸುತ್ತಿದ್ದಾರೆಂದು ಪಿಎಲ್‌ಎ ತಿಳಿದುಕೊಂಡಿತ್ತು.

ಒಂದು ದಿನ ತರಗತಿಯ ನಂತರ ಅವರು ತಮ್ಮ ನೆಚ್ಚಿನ ವಿದ್ಯಾರ್ಥಿನಿ ಶೂ ಮೆಹಂಗ್‌ಳನ್ನು ತಮ್ಮೊಂದಿಗೆ ಅಂಚೆ ಕಚೇರಿಗೆ ಬರುವಂತೆ ಕೇಳಿಕೊಂಡರು. ಮೆಹಂಗ್ ಅತ್ಯುತ್ತಮ ವಿದ್ಯಾರ್ಥಿನಿಯಾಗಿದ್ದಳು. ಇಂಗ್ಲಿಷ್ ಬಲ್ಲ ಆಕೆ ಲೋಕಾಭಿರಾಮವಾಗಿ ಹರಟುತ್ತಾ ದಾರಿಯಲ್ಲಿ ರಾಜಕೀಯ, ಮಿಲಿಟರಿ ಹಾಗೂ ಇತರ ವಿಷಯಗಳ ಬಗ್ಗೆ ಪ್ರಶ್ನೆ ಕೇಳಿದಳು.

ನವೆಂಬರ್ ತಿಂಗಳಲ್ಲಿ ಕೆಲವು ದಿನಗಳವ

> **"ನಮ್ಮಿಬ್ಬರ ಸಂಬಂಧ ಕೆಡಬಾರದೆಂದೇ ನಾನು ನಿನಗೆ ಮುಂಚಿತವಾಗಿ ಹೇಳಬೇಕಾಯಿತು" ಎಂದಳು ಮೆಹಂಗ್**

ರಿಗೆ ಬೈಜಿಂಗ್ ಪ್ರವಾಸ ಕೈಗೊಂಡಾಗ ಅವರಿಬ್ಬರ ನಡುವೆ ಪ್ರೇಮಾಂಕುರವಾಯಿತು. ಚೀನಿ ಮತ್ತು ಅಮೆರಿಕನ್ನರು ವೈಯಕ್ತಿಕ ಸಂಬಂಧ ಹೊಂದುವುದನ್ನು ನಿಷೇಧಿಸಲಾಗಿದ್ದರೂ ಅದು ಮೆಹಂಗ್ ಏಂಜಲ್‌ಮನ್‌ರ ಪ್ರೀತಿಗೆ ಅಡ್ಡ ಬರಲಿಲ್ಲ.

೧೯೬೩ರಲ್ಲಿ ನಾನ್‌ಜಿಂಗ್‌ನಿಂದ ೮೦ ಕಿಲೋಮೀಟರ್ ದೂರವಿರುವ ಹಳ್ಳಿಯೊಂದರಲ್ಲಿ ಹುಟ್ಟಿದ ಮೆಹಂಗ್ ಅಂತಾರಾಷ್ಟ್ರೀಯ ಸಂಬಂಧ ಮತ್ತು ಇಂಗ್ಲಿಷ್‌ಗಳಲ್ಲಿ ತರಬೇತಿ ಹೊಂದಿದ್ದಳು. ಪಿ.ಎಲ್.ಎ.ಗಾಗಿ ಕೆಲಸ ಮಾಡುವವರಿಗೆ ಸಮಾಜದಲ್ಲಿ ಅಂತಸ್ತು, ಅಧಿಕಾರಗಳಿದ್ದವು. ಹೀಗಾಗಿ ಅವಳೂ ಪಿ.ಎಲ್.ಎ.ಗಾಗಿ ಕೆಲಸ ಮಾಡುವ ಕನಸು ಕಂಡಿದ್ದಳು. ಪಿ.ಎಲ್.ಎ. ಅತ್ಯಂತ ಸೂಕ್ಷ್ಮ ಕೆಲಸ ಮಾಡಿಸಲು ಮಹಿಳೆಯರನ್ನು ಆಯ್ಕೆ ಮಾಡಲು ತೊಡಗಿದಾಗ ಮೆಹಂಗ್ ಅವರ ಕಣ್ಣಿಗೆ ಬಿದ್ದಳು. ಪಿ.ಎಲ್.ಎ. ನಾನ್‌ಜಿಂಗ್‌ನಲ್ಲಿ ರಷ್ಯನ್, ಇಂಗ್ಲಿಷ್, ಮಿಲಿಟರಿ, ವಿಮಾನ ರಚನೆ ಇತ್ಯಾದಿಗಳಲ್ಲಿ ತೀವ್ರ ತರಬೇತಿ ಕೊಟ್ಟಿದ್ದರಿಂದ ಮೆಹಂಗ್ ಅವುಗಳಲ್ಲಿ ಪರಿಣತಿ ಹೊಂದಿದ್ದಳು. ಅಲ್ಲದೆ ಬೇರೆ ಬೇರೆ ಆಯುಧಗಳನ್ನೂ ಆಕೆ ಬಳಸಬಲ್ಲವಳಾಗಿದ್ದಳು. ೧೯೮೮ರಲ್ಲಿ ಅವಳಿಗೆ ತನ್ನ ಗುರು ಏಂಜಲ್‌ಮನ್ ಅವರ ಮೇಲೆಯೆ ನಿಗಾ ಇಡುವ ಜವಾಬ್ದಾರಿಯನ್ನು ವಹಿಸಲಾಯಿತು! ವಾಸ್ತವವಾಗಿ ತೋರಿಕೆಗೆ ಮಾತ್ರ ಅವಳು ಇತಿಹಾಸದ ವಿದ್ಯಾರ್ಥಿನಿಯಾಗಿದ್ದಳು.

ದಿನಗಳೆದಂತೆ ಮೆಹಂಗ್ ಏಂಜಲ್‌ಮನ್ನರ ಬಗ್ಗೆ ಅಭಿಮಾನಪಡಲು ಪ್ರಾರಂಭಿಸಿದಳು. ಬಡ ಚೀನೀ ವಿದ್ಯಾರ್ಥಿನಿಯರಿಗೆ ಉಚಿತ ಅಮೆರಿಕನ್ ಪಠ್ಯಪುಸ್ತಕಗಳನ್ನು ವಿತರಿಸುತ್ತಿದ್ದ ಏಂಜಲ್‌ಮನ್ನರ ಔದಾರ್ಯವನ್ನು ಕೊಂಡಾಡತೊಡಗಿದಳು. ಬಾಲ್ಯದಿಂದಲೂ ಅಮೆರಿಕನ್ನರು ವಿಶ್ವಾಸಕ್ಕೆ ಯೋಗ್ಯರಲ್ಲ ಎನ್ನುವುದನ್ನು ಅವಳ ಮನಸ್ಸಿನಲ್ಲಿ ಬಿತ್ತಲಾಗಿತ್ತು. ಆದರೆ ಅದು ಸುಳ್ಳು ಎಂಬುದು ಅವಳಿಗೆ ಏಂಜಲ್‌ಮನ್ನರ ಸಹವಾಸದಿಂದ ದೃಢಪಟ್ಟಿತು. ಹೀಗಾಗಿ ಅವಳು ಏಂಜಲ್‌ಮನ್ ಪತ್ತೆದಾರಿಕೆ ನಡೆಸಲು ಬಂದವರಲ್ಲ ಎಂಬ ಅಭಿಪ್ರಾಯವನ್ನು ಮೇಲಧಿಕಾರಿಗಳಿಗೆ ತಿಳಿಸಿದಾಗ ಅವಳ ಕೋಣೆಯಲ್ಲಿ ಕದ್ದು ಕೇಳುವ ವ್ಯವಸ್ಥೆಯನ್ನು ಅಳವಡಿಸಲಾಯಿತು. ನಿರಾಶಳಾದ ಮೆಹಂಗ್ ಒಂದು ದಿನ ಏಂಜಲ್‌ಮನ್ನರ ಕೋಣೆಗೆ ಬಂದವಳೆ, "ಲಾರಿ, ನಿನಗೊಂದು ಮಾತು ಹೇಳಬಯಸುತ್ತೇನೆ. ನೀನಂದುಕೊಂಡಂತೆ ನಾನು ವಿದ್ಯಾರ್ಥಿನಿಯಲ್ಲ. ನಿನ್ನ ಮೇಲೆ ಪತ್ತೆದಾರಿಕೆ ನಡೆಸುತ್ತಿರುವ ಪಿ.ಎಲ್.ಎ. ಅಧಿಕಾರಿಣಿ. ನಮ್ಮವರೆಲ್ಲ ನಿನ್ನನ್ನು ಸಿ.ಐ.ಎ. ಏಜೆಂಟ್ ಎಂದೇ ಭಾವಿಸಿದ್ದಾರೆ. ನಮ್ಮಿಬ್ಬರ ಸಂಬಂಧ ಕೆಡಬಾರದೆಂದೇ ನಾನು ನಿನಗೆ ಇದನ್ನು ಮುಂಚಿತವಾಗಿ ಹೇಳಬೇಕಾಯಿತು," ಎಂದಳು. ಮೆಹಂಗ್‌ಳಿಗೆ ಹಾಸ್ಯ ಚಟಾಕಿಗಳನ್ನು ಹಾರಿಸುವ ಹವ್ಯಾಸವಿದ್ದುದರಿಂದ ಏಂಜಲ್‌ಮನ್ ಬರಿ ನಕ್ಕರಷ್ಟೆ.

ಮರುದಿನವೂ ಆಕೆ ಮಿಲಿಟರಿ ಸಮವಸ್ತ್ರದಲ್ಲಿ ಏಂಜಲ್‌ಮನ್ ಅವರ ಸ್ನಾನದ ಕೋಣೆಗೆ ತೆರಳಿ, "ಈಗ ಏನು ಹೇಳುವೆ? ಈಗಲಾದರೂ ನಾನು ಮಿಲಿಟರಿ ಲೆಫ್ಟಿನೆಂಟ್ ಎನ್ನುವುದನ್ನು ನಂಬುತ್ತೀಯೋ ಇಲ್ಲವೋ? ನಿಜ ಹೇಳಬೇಕೆಂದರೆ ನಿನ್ನ ಫೋನ್ ಕರೆಗಳನ್ನು ಕದ್ದು ಕೇಳಲಾಗುತ್ತಿದೆ. ನಿನಗೆ ಬರುವ ಪ್ರತಿಯೊಂದು ಪತ್ರವನ್ನೂ ಬಿಡಿಸಿ ಓದಲಾಗುತ್ತಿದೆ. ಇದೆಲ್ಲ ನಿನಗೆ ಗೊತ್ತಿದೆಯೇ?" ಎಂದು ಪ್ರಶ್ನಿಸಿದಳು.

ಆದರೂ ಇದೆಲ್ಲ ಸುಳ್ಳೇ ಎಂದು ಏಂಜಲ್‌ಮನ್ ಅಂದುಕೊಂಡರು. ಅವಳು ಧರಿಸಿದ ಸಮವಸ್ತ್ರವನ್ನು ಅವರು "ಫ್ಯಾನ್ಸಿ ಡ್ರೆಸ್" ಎಂದೇ ಭಾವಿಸಿ ಅವಳ ಫೋಟೋ ಒಂದನ್ನು ತೆಗೆದುಕೊಂಡರು. ಅದೇ ಅವರು ಮಾಡಿದ ತಪ್ಪಾಗಿತ್ತು. ನಂತರ ಅವರು

ಅದನ್ನು ಸ್ಟುಡಿಯೋಗೆ ತೆಗೆದುಕೊಂಡು ಹೋದಾಗ ಅಲ್ಲಿದ್ದ ಛದ್ಮವೇಷದ ಪಿ.ಎಲ್.ಎ ಅಧಿಕಾರಿಗಳು ಏಂಜಲ್‌ಮನ್ ತೆಗೆದ ಆ ಫೋಟೋಗಳನ್ನು ನೋಡುತ್ತಲೇ ದಿಗ್ಭ್ರಮೆಗೊಂಡರು. ತಾವು ಯಾರನ್ನು ಸಿ.ಐ.ಎ.ಯ ಏಜೆಂಟ್ ಎಂದು ತಿಳಿದುಕೊಂಡಿದ್ದರೋ ಆ ವ್ಯಕ್ತಿಯೇ ತೆಗೆದ ಫೋಟೋದಲ್ಲಿ ಮಿಲಿಟರಿ ಸಮವಸ್ತ್ರ ಧರಿಸಿದ ತಮ್ಮ ಒಬ್ಬ ಸಹೋದ್ಯೋಗಿಯ ಫೋಟೋ!

ಡಿಸೆಂಬರ್ ೨ರಂದು ಮಧ್ಯರಾತ್ರಿಯಾದರೂ ಮೆಹೆಂಗ್‌ಗೆ ನಿದ್ದೆ ಬಂದಿರಲಿಲ್ಲ. ಆಕೆ ಏಂಜಲ್‌ಮನ್ ಅವರಿಗೆ ಯಾವ ರೀತಿ ತಿಳಿಹೇಳಬೇಕೆಂದು ತಿಳಿಯದೆ ಒದ್ದಾಡುತ್ತಿದ್ದಳು. ಅಷ್ಟರಲ್ಲಿ ಅವಳ ಸಹೋದ್ಯೋಗಿಯೊಬ್ಬಳು ಫೋನ್ ಮಾಡಿ, ತಕ್ಷಣವೇ ಮೆಹೆಂಗ್ ಬಳಿ ಮಾತನಾಡಲು ಇದೆಯೆಂದೂ ಜೀಪ್ ಅನ್ನು ಕಳುಹಿಸುತ್ತಿದ್ದೇನೆಂದೂ ಹೇಳಿದಳು. ಜೀಪನ್ನೇರಿದಳು ಮೆಹೆಂಗ್. ಆದರೆ ಅದು ಮಿಲಿಟರಿ ಜೈಲ್ ಒಂದರ ಮುಂದೆ ನಿಂತಿತು. ಅಲ್ಲಿಯ ಕೋಣೆಯೊಂದರಲ್ಲಿ ಕೆಲವು ಪಿ.ಎಲ್.ಎ ಅಧಿಕಾರಿಗಳು ಅವಳಿಗಾಗಿ ಕಾಯುತ್ತಿದ್ದರು. ಅವರು ಏಂಜಲ್‌ಮನ್ ತೆಗೆದಿದ್ದ ಮೆಹೆಂಗ್‌ಳ



ಫೋಟೋವನ್ನು ಅವಳಿಗೆ ತೋರಿಸಿ, ಕೆಲವು ಗಂಟೆಗಳವರೆಗೆ ಪ್ರಶ್ನಿಸಿದರು. ಅನಂತರ ಅವಳ ಮೇಲೆ ಸರ್ಕಾರಕ್ಕೆ ನಂಬಿಕೆದ್ರೋಹಗೈದ ಆರೋಪ ಹೊರೆಸಿ ಅವಳನ್ನು ಸಣ್ಣ ಕೋಣೆ ಯೊಂದರಲ್ಲಿ ಇಡಲಾಯಿತು.

ಮುಂದಿನ ದಿನಗಳಲ್ಲಿ ಅಧಿಕಾರಿಗಳು ಅವ ಳನ್ನು ದೈಹಿಕ, ಮಾನಸಿಕ ಹಿಂಸೆಗೆ ಒಳಪಡಿ ಸತೊಡಗಿದರು. ಬೆಚ್ಚಗಿನ ವಸ್ತುಗಳನ್ನು ಕೊಡದೆ ಚಳಿಯಿಂದ ನರಳುವಂತೆ ಮಾಡಿ ದರು. ಆಕೆ ತೂಕಡಿಸುತ್ತಿರುವಾಗ ಅವಳನ್ನು ಎಚ್ಚರಿಸಲಾಗುತ್ತಿತ್ತು. ನಂತರ ಒಂಭತ್ತು ಪುಟ ಗಳ ತಪ್ಪೊಪ್ಪಿಗೆ ಪತ್ರ ತಂದು ಅದರ ಮೇಲೆ ಸಹಿ ಹಾಕುವಂತೆ ಒತ್ತಾಯಪಡಿಸಿದರು. ಅದ ರಲ್ಲಿ ಏಂಜಲ್‌ಮನ್ ತನ್ನ ಮೇಲೆ ಹಲವು ಬಾರಿ ಅತ್ಯಾಚಾರ ನಡೆಸಿದ್ದಾರೆಂದು ಹೇಳಲಾ ಗಿತ್ತು. ಒಂದು ವೇಳೆ ಅವಳು ಸಹಿ ಹಾಕಿದ್ದೇ ಆದರೆ ಏಂಜಲ್‌ಮನ್ ಅವರಿಗೆ ಚೀನಾದ ಕಾನೂನಿನ ಪ್ರಕಾರ ಮರಣದಂಡನೆ ವಿಧಿಸ ಬಹುದಾಗಿತ್ತು. ಅಲ್ಲದೆ ಅವಳನ್ನೂ ಸೆರೆಯ ಲ್ಲಿಯೇ ಕೊಳೆಯುವಂತೆ ಮಾಡಬಹುದಾ ಗಿತ್ತು. ಆದರೆ ಅವಳು ಎಷ್ಟೇ ಕಷ್ಟ ಬಂದರೂ ಸರಿ, ಸಹಿ ಹಾಕಬಾರದೆಂದೇ ನಿರ್ಧರಿಸಿದಳು. ಮುಂದಿನ ಎರಡು ತಿಂಗಳುಗಳ ಕಾಲ ಚೀನೀ ಅಧಿಕಾರಿಗಳು ಒಂದು ಪುಟ್ಟ ಕೋಣೆಯಲ್ಲಿ ಅವಳನ್ನು ಬಂಧಿಸಿಟ್ಟರು. ತುಪಾಕಿಯ ಸದ್ದು ಗಳನ್ನು ಕೇಳುತ್ತಾ, ಮರಣದಂಡನೆ ಶಿಕ್ಷೆ ವಿಧಿಸುವುದನ್ನು ಒತ್ತಾಯಪೂರ್ವಕವಾಗಿ ನೋಡುತ್ತಾ, ಯಾವಾಗ ತನಗೂ ಈ ಗತಿ ಬರುತ್ತದೆಯೋ ಎಂಬ ಭಯಾನಕ ಕಲ್ಪನೆಯ ಲ್ಲಿಯೇ ಕಾಲ ಕಳೆಯುವಂತೆ ಮಾಡಿದರು.

ಇತ್ತ ಮೆಹೆಂಗ್‌ಳನ್ನು ತರಗತಿಯಲ್ಲಿ ಕಾಣದೇ, ಫೋನಿಗೂ ಉತ್ತರವಿಲ್ಲದೆ ಏಂಜಲ್‌ಮನ್ ವ್ಯಗ್ರರಾದರು. ಮೆಹೆಂಗ್‌ಳ ಬಗೆಗೆ ಇತರ ವಿದ್ಯಾರ್ಥಿಗಳಲ್ಲಿ ವಿಚಾರಿಸುತ್ತಿ ದ್ದಾಗ ಚೀನೀ ಅಧಿಕಾರಿಗಳು ಆಕೆಯನ್ನು ಹುಡುಕುವ ಪ್ರಯತ್ನ ಕೈ ಬಿಡಬೇಕೆಂಬ ಎಚ್ಚ ರಿಕೆ ನೀಡಿದರು. ೧೯೮೮ರ ಜನವರಿ ತಿಂಗ ಳಿನಲ್ಲಿ ಮೆಹೆಂಗ್‌ಳು ಏಂಜಲ್‌ಮನ್ ತನ್ನ ಮೇಲೆ ಅತ್ಯಾಚಾರ ನಡೆಸಿದರೆನ್ನುವ ತಪ್ಪೊಪ್ಪಿ ಗೆಗೆ ಸಹಿ ಹಾಕಿದಳೆನ್ನುವ ಸುದ್ದಿ ಅವರಿಗೆ ಬಂತು. ಈಗ ಚೀನೀ ಅಧಿಕಾರಿಗಳು ಅವ ರನ್ನು ಯಾವ ಕ್ಷಣದಲ್ಲಿಯೂ ಬಂಧಿಸಬಹು ದಾಗಿತ್ತು. ಇದರಿಂದ ಪಾರಾಗಬೇಕಾದರೆ ತಕ್ಷ ಣವೇ ಅವರು ಚೀನಾ ತೊರೆಯಬೇಕಾಗಿತ್ತು. ಫೆಬ್ರವರಿ ೧೯ರ ಭಾನುವಾರದಂದು ಅವರು ಹಾಂಗ್‌ಕಾಂಗ್‌ಗೆ ವಿಮಾನದಲ್ಲಿ ಹಾರಿ ತಪ್ಪಿ ಸಿಕೊಂಡರು.

ಇತ್ತ ಮೆಹೆಂಗ್‌ಳ ಮೇಲೆ ಒತ್ತಡ ಹಾಗೆಯೆ ಮುಂದುವರೆದಿತ್ತು. ಗೆಳತಿಯರು ಅವಳ ಹುಟ್ಟುಹಬ್ಬದಂದು ಪಾರ್ಟಿಯೊಂ ದನ್ನು ಏರ್ಪಡಿಸಿ ತಪ್ಪೊಪ್ಪಿಗೆಗೆ ಸಹಿ ಹಾಕಿದರೆ ಅವಳನ್ನು ಅಧಿಕಾರಿಗಳು ಬಿಟ್ಟುಬಿಡುವರೆಂದು ಹೇಳಿದರು. ಆದರೆ ಮೆಹೆಂಗ್ ಒಪ್ಪಲಿಲ್ಲ.

ಇದಾದ ಮೂರು ವಾರಗಳ ನಂತರ ಮೆಹೆಂಗ್‌ಳನ್ನು ಕಾರಣ ನೀಡದೆ ದೂರದ ಸ್ಥಳ ಒಂದಕ್ಕೆ ಕರೆದೊಯ್ದು ಗದ್ದೆಯೊಂದರಲ್ಲಿ ದುಡಿಯಲು ಹಚ್ಚಲಾಯಿತು. ಅಲ್ಲಿ ವರ್ಷಗ ಟ್ಟಲೆ ದುಡಿಯಬೇಕಾಗುವುದೆಂದು ಅವಳು ತಿಳಿದಿದ್ದಳು. ಪರಾರಿ ಆಗುವುದೊಂದೇ ಈಗ ಆಕೆಗೆ ಉಳಿದಿರುವ ಮಾರ್ಗವಾಗಿತ್ತು. ಒಂದು ರಾತ್ರಿ ಪೊಲೀಸರು ಚೀನೀ ಹೊಸ ವರ್ಷಾ ಚರಣೆಯಲ್ಲಿ ತೊಡಗಿದ್ದಾಗ ಅವಳು ದೋಣಿ ಯೊಂದರಲ್ಲಿ ಅಲ್ಲಿಂದ ತಪ್ಪಿಸಿಕೊಂಡು ಎರಡು ದಿನಗಳ ನಂತರ ಹಳ್ಳಿಯೊಂದನ್ನು ಸೇರಿದಳು. ನಾನ್‌ಜಿಂಗ್ ಪ್ರವೇಶಿಸಿದರೆ ಅವ ಳನ್ನು ಪುನಃ ಬಂಧಿಸುವ ಸಾಧ್ಯತೆಯಿದ್ದುದ ರಿಂದ ಅವಳು ಕೆಲವು ವಾರ ಹಳ್ಳಿಯಿಂದ ಹಳ್ಳಿಗೆ ಅಲೆಯಬೇಕಾಯಿತು. ಕೊನೆಗೆ ಬಂದ ದ್ದನ್ನೆಲ್ಲ ಎದುರಿಸಲು ನಿಶ್ಚಯಿಸಿ ಆಕೆ ಬೈಜಿಂಗ್‌ಗೆ ಹೋಗುವ ರೈಲನ್ನೇರಿದಳು. ೧೮ ಗಂಟೆಗಳ ಪ್ರಯಾಣದ ನಂತರ ಆಕೆ ಏಂಜಲ್‌ಮನ್ ಅವರಿಗೆ ಫೋನ್ ಮಾಡಿ

ದಾಗ ಆಚೆ ಬದಿಯಿಂದ ಉತ್ತರ ಬರಲಿಲ್ಲ. ಕೆಲವು ಗೆಳತಿಯರಿಂದ ಏಂಜಲ್‌ಮನ್ ಕೆಲವು ತಿಂಗಳುಗಳ ಹಿಂದೆಯೇ ದೇಶ ಬಿಟ್ಟಿರುವರೆಂಬುದನ್ನು ತಿಳಿದಾಗ ಅವಳಿಗೆ ಆಘಾತವೇ ಆಯಿತು. ಕೊನೆಗೂ ಪ್ರಿಯಕರ ಕೈಕೊಟ್ಟ ಎಂದೇ ಭಾವಿಸಿದಳು.

೧೯೮೮ರ ಆಗಸ್ಟ್ ತಿಂಗಳ ಮಧ್ಯಭಾಗದಲ್ಲಿ ಮೆಹೆಂಗ್ ವಿದ್ಯಾಭ್ಯಾಸಕ್ಕಾಗಿ ಅಮೆರಿಕಕ್ಕೆ ಹೋಗುತ್ತಿದ್ದ ಒಬ್ಬ ವಿದ್ಯಾರ್ಥಿಯನ್ನು ಸಂಧಿಸಿ ಅವನಿಗೆ ಸ್ಯಾನ್ ಜೋಸ್ ಸ್ಟೇಟ್ ಯೂನಿವರ್ಸಿಟಿಗೆ ಫೋನ್ ಮಾಡಿ ಏಂಜಲ್‌ಮನ್ ಅವರ ಪತ್ತೆ ಮಾಡುವಂತೆ ಕೇಳಿಕೊಂಡಳಲ್ಲದೆ ತನ್ನ ಫೋನ್ ನಂಬರನ್ನು ಕೊಟ್ಟಳು.

ಆಗಸ್ಟ್ ತಿಂಗಳು ಕೊನೆಗೊಳ್ಳುತ್ತಿದ್ದ ಹಾಗೆ ಒಂದು ದಿನ ಏಂಜಲ್‌ಮನ್ ಪಾಠ ಮುಗಿಸಿಕೊಂಡು ಮರಳುತ್ತಿರುವಾಗ ಕಾಲೇಜಿನ ಕಾರ್ಯದರ್ಶಿಯೊಬ್ಬರು ತಡೆದು, "ನಿಮಗಾಗಿ ಒಬ್ಬ ಚೀನೀ ವಿದ್ಯಾರ್ಥಿಯಿಂದ ಫೋನ್ ಕರೆಯಿದೆ. ತೆಗೆದುಕೊಳ್ಳಿ. ಇಗೋ ಇಲ್ಲಿದೆ ಆತನ ಫೋನ್ ನಂಬರ್," ಎಂದರು.

ತಕ್ಷಣವೇ ತಮ್ಮ ಕೊಠಡಿಗೆ ತೆರಳಿದ ಏಂಜಲ್‌ಮನ್ ಆ ನಂಬರ್ ತಿರುಗಿಸಿದರು. ಆದರೆ ಅತ್ತ ಕಡೆಯಿಂದ ಉತ್ತರವಿರಲಿಲ್ಲ. ಅವರು ಉದ್ವಿಗ್ನರಾಗಿದ್ದರು. ಸತತವಾಗಿ ನಾಲ್ಕು ಗಂಟೆಗಳವರೆಗೆ ಪ್ರಯತ್ನಿಸಿದ ನಂತರ ಆಚೆ ಬದಿಯಿಂದ ಬಂದಿತು. ಈಗ ಅವರ ಬಳಿ ಮೆಹೆಂಗ್‌ಳ ಫೋನ್ ನಂಬರ್ ಇತ್ತು. ಅಂದು ರಾತ್ರಿ ಅವರು ನಿದ್ರಿಸಲೇ ಇಲ್ಲ.

ಬೈಜಿಂಗ್‌ನಲ್ಲಿ ಅಂದು ಬೆಳಗಾಗುತ್ತಿತ್ತು. ಏಂಜಲ್‌ಮನ್ ಅವರ ಫೋನ್ ಕರೆ ಮೆಹೆಂಗ್‌ಳನ್ನು ಹುಡುಕಿಕೊಂಡು ಬಂದಿತು.

"ಮೆಹೆಂಗ್, ಮಾತನಾಡುತ್ತಿರುವೆ ಏನು?" ಏಂಜಲ್‌ಮನ್ ಅತ್ತ ಕಡೆಯಿಂದ ಉದ್ವೇಗದಿಂದ ಕೂಗಿದರು.

"ಹೌದು!" ಮೆಹೆಂಗ್‌ಳ ದನಿ ಕೇಳಿಸಿತು.

"ನಾನು ನಿನ್ನನ್ನು ಪ್ರೀತಿಸುತ್ತೇನೆ ಮೆಹೆಂಗ್," ಅವಳ ಕಣ್ಣುಗಳಲ್ಲಿ ಆನಂದ ಬಾಷ್ಪ ಕಾಣಿಸಿಕೊಂಡಿತು.

ಮುಂದಿನ ವಾರಗಳಲ್ಲಿ ಅವರು ಒಬ್ಬರನ್ನೊಬ್ಬರು ಫೋನ್ ಮುಖಾಂತರ ಸಂಪರ್ಕಿಸಿದರು. ಮೆಹೆಂಗ್‌ಳಿಗೆ ಸ್ಯಾನ್ ಜೋಸ್ ಸ್ಟೇಟ್ ಯೂನಿವರ್ಸಿಟಿಯಲ್ಲಿ ಪ್ರವೇಶ ದೊರೆಯುವಂತೆ ಮಾಡಿಕೊಟ್ಟರು. ತಿಂಗಳುಗಳು ಉರುಳಿದವೇ ವಿನಾ ಯಾವ ಪ್ರಯೋಜನವೂ ಆಗಲಿಲ್ಲ. ಅಧಿಕಾರಿಗಳು ಮೆಹೆಂಗ್‌ಳಿಗೆ ವಿದ್ಯಾರ್ಥಿ ವೀಸಾ ನೀಡಲು ನಿರಾಕರಿಸಿದರು.

ಅವಳಿಗಾಗಿ ಕಾಯ್ದು ಕಾಯ್ದು ಬೇಸತ್ತು ಏಂಜಲ್‌ಮನ್ ಷಾಂಘಾಯ್‌ಗೆ ತೆರಳಿ, ಅಲ್ಲಿಂದ ಗುಪ್ತವಾಗಿ ಚೀನಾ ಪ್ರವೇಶಿಸಿ, ಮೆಹೆಂಗ್‌ಳನ್ನು ವಿವಾಹವಾಗಲು ಹಂಚಿಕೆ ಹಾಕಿದರು. ವಿವಾಹಿತ ಮಹಿಳೆಯರಿಗೆ ಸುಲಭದಲ್ಲಿ ವೀಸಾ ಸಿಗಬಹುದಿತ್ತು. ಆದರೆ ಅವರ ಸ್ನೇಹಿತರೆಲ್ಲ ಇದೆಲ್ಲ ಅವರನ್ನು ಮತ್ತೆ ಪಿ.ಎಲ್.ಎ ಬಲೆಯೊಳಗೆ ಬೀಳಿಸಲು ಹೂಡಿದ ಉಪಾಯ; ಬಂಧಿಸಲ್ಪಟ್ಟರೆ ಅವರು ಜೀವನವಿಡೀ ಚೀನಾದ ಸೆರೆಮನೆಯಲ್ಲಿ ಕೊಳೆಯಬೇಕಾಗುವುದು ಎಂದು ಎಚ್ಚರಿಸಿದರು.

೧೯೯೦ರ ಜನವರಿ ೭ರಂದು ಏಂಜಲ್‌ಮನ್ ಷಾಂಘಾಯ್‌ಗೆ ಬಂದಿಳಿದರು. ಅಲ್ಲಿ ಇತರ ಪ್ರವಾಸಿಗರೊಡನೆ ಗುಂಪಿನಲ್ಲಿ ಸಾಗುತ್ತಿರುವಂತೆಯೇ ಅನಿರೀಕ್ಷಿತವಾಗಿ ಮೆಹೆಂಗ್ ಕಣ್ಣಿಗೆ ಬಿದ್ದಳು. ಅವಳ ಪಕ್ಕದಲ್ಲಿ ಮಿಲಿಟರಿ ವಸ್ತ್ರ ಧರಿಸಿದವನೊಬ್ಬನನ್ನು ನೋಡುತ್ತಿರುವಂತೆಯೇ ಅವರ ಹೃದಯ ಬಾಯಿಗೆ ಬಂತು. ಹಾಗಾದರೆ ಸ್ನೇಹಿತರ ಊಹೆ ಸರಿಯೆ? ಮೆಹೆಂಗ್ ತನ್ನ ನಿಜವಾದ ಬಣ್ಣ ತೋರಿಸಿದಳೆ? ಎಂಬ ಸಂಶಯ ಸುಳಿದು ಹೋಯಿತು. "ಯಾರೀತ?" ಅವರು ಪ್ರಶ್ನಿಸಿದರು. "ಹೀಗೆಯೆ ಗೆಳೆಯ. ನಮ್ಮ ವಾಹನದ ಚಾಲಕ. ಹೆದರುವ ಅಗತ್ಯವಿಲ್ಲ," ಮೆಹೆಂಗ್ ಭರವಸೆ ನೀಡಿದಳು.

ಅಂದೇ ಅವರಿಬ್ಬರೂ ವಿವಾಹವಾಗಿ ದೃಢೀಕರಣ ಪತ್ರದೊಂದಿಗೆ ಅಮೆರಿಕಕ್ಕೆ ಪಾರಾಗಿ ಹೋಗಬೇಕಿತ್ತು. ಅಲ್ಲದೆ ಒಂದು ವೇಳೆ ಇದು ಪಿ.ಎಲ್.ಎ. ಅಧಿಕಾರಿಗಳಿಗೆ ಗೊತ್ತಾದರೆ ವಿವಾಹ ದೃಢೀಕರಣ ಪತ್ರವನ್ನು ನಾಶಗೊಳಿಸಿ ಅವರಿಬ್ಬರನ್ನೂ ಜೈಲಿಗೆ ತಳ್ಳುವ ಸಾಧ್ಯತೆಯಿತ್ತು. ಆದರೆ ಇನ್ನೂ ಕೆಲವು ಅಗತ್ಯ ದಾಖಲೆಗಳಿಗಾಗಿ ಮೆಹೆಂಗ್ ಷಾಂಘಾಯ್‌ನಿಂದ ಏಳು ಗಂಟೆಗಳ ರೈಲು ಪ್ರಯಾಣ ಮಾಡಿ ತನ್ನ ಹುಟ್ಟೂರಿಗೆ ತೆರಳಬೇಕಾಯಿತು. ಇಬ್ಬರೂ ಒಂದು ವಾರ ದಾಖಲೆಗಳಿಗಾಗಿ ಅಲೆದಾಡಿದರು. ಈಗ ಅವರ ವಿವಾಹಕ್ಕೆ ಅಂತಹ ಅಡ್ಡಿ ಏನೂ ಇರಲಿಲ್ಲ. ವಿವಾಹ ದೃಢೀಕರಣ ಪತ್ರದೊಂದಿಗೆ ಏಂಜಲ್‌ಮನ್ ಮತ್ತೆ ಅಮೆರಿಕಕ್ಕೆ ತೆರಳುವ ವಿಮಾನದಲ್ಲಿ ಕುಳಿತಿದ್ದಳು.

ಅಮೆರಿಕನ್ನರೊಬ್ಬರನ್ನು ವಿವಾಹವಾದ ಮೆಹೆಂಗ್‌ಗಳಿಗೆ ಅಮೆರಿಕಕ್ಕೆ ವಲಸೆ ಹೋಗುವ ಅವಕಾಶವನ್ನು ಚೀನೀ ಅಧಿಕಾರಿಗಳು ನಿರಾಕರಿಸುವಂತಿರಲಿಲ್ಲವಾದ್ದರಿಂದ ಅವರಿಬ್ಬರೂ ತಮ್ಮ ತೊಂದರೆಗಳೆಲ್ಲ ದೂರವಾದುವೆಂದೇ ಭಾವಿಸಿದ್ದರು. ಆದರೆ ಅವರ ಕಲ್ಪನೆ ಸಾಕಾರಗೊಳ್ಳುವ ಲಕ್ಷಣ ಕಾಣಲಿಲ್ಲ. ಚೀನೀ ಅಧಿಕಾರಿಗಳು ಮೆಹೆಂಗ್‌ಳ ಕೋರಿಕೆಯನ್ನು ಮನ್ನಿಸಲಿಲ್ಲ.

ಇತ್ತ ಏಂಜಲ್‌ಮನ್ ಅವರೂ ಸರ್ಕಾರ, ಶ್ವೇತಭವನ ಹಾಗೂ ಚೀನಿ ರಾಯಭಾರಿ ಕಚೇರಿಗಳಿಗೆ ಮನವಿಯ ಮಹಾಪೂರವನ್ನೇ ಹರಿಸಿದರು. ಚೀನಿ ಸರ್ಕಾರದೊಂದಿಗೆ ಸಂಬಂಧವಿದ್ದ ಅಧ್ಯಕ್ಷ ಜಾರ್ಜ್ ಬುಷ್ ಅವರ ಪತ್ನಿ, ಹೆನ್ರಿ ಕಿಸಿಂಜರ್ ಇವರುಗಳ ಪತ್ನಿಯರಿಗೂ ತಮ್ಮ ಸಮಸ್ಯೆಯನ್ನು ಹೇಳಿಕೊಂಡು ಪತ್ರ ಬರೆದರು.

ತಿಂಗಳುಗಳು ಕಳೆದವೇ ವಿನಾ ಮೆಹೆಂಗ್ ಬರಲೇ ಇಲ್ಲ. ಈಗಂತೂ ಏಂಜಲ್‌ಮನ್ ಚೀನೀ ಅಧಿಕಾರಿಗಳ ಕಣ್ಣಿಗೆ ಮಣ್ಣೆರಚಿ ಮೆಹೆಂಗಳನ್ನು ಕದ್ದುತರುವ ಆಲೋಚನೆಯನ್ನೇ ಮಾಡತೊಡಗಿದರು. ೧೯೮೦ರ ಡಿಸೆಂಬರ್‌ನ ಆದಿ ಭಾಗದಲ್ಲಿ ಅಮೆರಿಕದ ರಾಜ್ಯ ಖಾತೆಯಿಂದ, "ಮೆಹೆಂಗ್ ಬಗ್ಗೆ ಚೀನೀ ಅಧಿಕಾರಿಗಳು ಕಾರ್ಯಪ್ರವೃತ್ತರಾಗಿದ್ದಾರೆ. ಏನಾಗಬಹುದೆಂದು ಸುಮ್ಮನೆ ಗಮನಿಸು," ಎಂಬರ್ಥದ ಫೋನ್ ಬಂತು.

ಕೆಲವು ದಿನಗಳ ನಂತರ ಏಂಜಲ್‌ಮನ್ನರಿಗೆ ಪಾಸ್‌ಪೋರ್ಟ್ ಸಿದ್ಧವಾಗಿದೆ ಎಂದು ಮೆಹೆಂಗ್‌ಳಿಂದ ಫೋನ್ ಬಂದಿತು. ಕೊನೆಗೂ ಆಕೆ ಚೀನದ ಕಪಿಮುಷ್ಟಿಯಿಂದ ಬಿಡುಗಡೆ ಆಗುವ ಕ್ಷಣ ಸಮೀಪಿಸಿತು.

ಇಂದು ಮೆಹೆಂಗ್ ಏಂಜಲ್‌ಮನ್ನರೊಡನೆ ಸ್ಯಾನ್ ಜೋಸ್ ಸ್ಟೇಟ್ ಯೂನಿವರ್ಸಿಟಿಯಲ್ಲಿ ಅಮೆರಿಕನ್ ಬ್ಯಾಂಕಿಂಗ್, ಷಾಪಿಂಗ್ ಮುಂತಾಗಿ ಏಶಿಯದಿಂದ ಬಂದ ನಿರಾಶ್ರಿತರಿಗಾಗಿ ಪಾಠ ಹೇಳುತ್ತಿದ್ದಾಳೆ. ಆದರೆ ಚೀನೀ ಅಧಿಕಾರಿಗಳು ಹೇಗೆ ಮಣಿದರೆಂಬುದೇ ಎಲ್ಲರನ್ನೂ ಕಾಡುವ ಪ್ರಶ್ನೆ. ಕಾಲವೇ ಉತ್ತರ ಹೇಳಬೇಕು. ★

## ಎಷ್ಟು ದೊಡ್ಡ ದಿನಚರಿ!

ಮಾನವನಿಗಿರುವ ಹವ್ಯಾಸಗಳು ಹಲವಾರು. ಓದುವುದು ಹಲವರದಾದರೆ ಬರೆಯುವುದು ಕೆಲವರದು. ದಿನನಿತ್ಯದ ಅನುಭವಗಳನ್ನೆಲ್ಲ ಬರಹಕ್ಕಿಳಿಸುತ್ತಿದ್ದ ಠಾಕೂರ್ ಅಮರಸಿಂಗ್ ಜಯಪುರದ ಆಸ್ಥಾನದಲ್ಲಿ ಮಹತ್ವದ ಸ್ಥಾನ ಪಡೆದಿದ್ದ. ೧೮೯೮ ರಿಂದ ೧೯೪೨ ರವರೆಗೆ ಒಂದೂ ದಿನ ತಪ್ಪದಂತೆ ೪೪ ವರ್ಷಗಳವರೆಗೆ ಬರೆದ ಅವನ ಅನುಭವಗಳು ೪೦೦ ಪುಟಗಳ ೯೦ ಸಂಪುಟಗಳಲ್ಲಿವೆ. ಜಗತ್ತಿನಲ್ಲೇ ಅತಿ ದೊಡ್ಡದಾದ ಆ ದಿನಚರಿಯನ್ನು ಜಯಪುರದಿಂದ ೮ ಮೈಲು ದೂರದಲ್ಲಿರುವ ಕನೋಟಾದಲ್ಲಿರಿಸಲಾಗಿದೆ.

• ಟಿ.ಎಸ್. ಲಲಿತ

ವೇದಿಕೆಯಾಗಬೇಕಾಗಿದೆ. ಆಗ ಮಾತ್ರ ಅದು ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಲು ಸಾಧ್ಯ; ತನ್ನ ಕಾರ್ಯಸೂಚಿ, ಕಾರ್ಯವಿಧಾನಗಳನ್ನು ಪುನರ್ ನಿರೂಪಿಸಿಕೊಳ್ಳಲು ಸಾಧ್ಯ. ಈ ಹಿಂದೆ ಪರಿಷತ್ತು ಕನ್ನಡನಾಡಿನ ನೆಲ, ಜಲ ಸಮಸ್ಯೆಗಳನ್ನು ತನ್ನ ಚಟುವಟಿಕೆಗಳ ಪರಿಧಿಗೆ ತಂದುಕೊಂಡಿರಲಿಲ್ಲವೆಂದಲ್ಲ. ಆದರೆ ಕನ್ನಡ ನಾಡಿನ ನೆಲ-ಜಲಗಳಿಗೆ ನಿಜಕ್ಕೂ ಕುತ್ತು ಬಂದಿರುವುದು ನೆರೆಯ ತಮಿಳ್ನಾಡು, ಮಹಾರಾಷ್ಟ್ರ, ಆಂಧ್ರ, ಕೇರಳಗಳಿಂದಲ್ಲ ಅಥವಾ ಅವುಗಳಿಂದ ಮಾತ್ರ ಅಲ್ಲ. ಹೆಚ್ಚೆಂದರೆ ಅದು ಹಂಚಿಕೆಯ ಪ್ರಶ್ನೆ ಮಾತ್ರ; ಕೇವಲ ಹಂಚಿಕೆಯ ಪ್ರಶ್ನೆಯಾದ ಕಾವೇರಿ ನೀರಿನ ವಿವಾದವನ್ನು ನಾವು ದೊಡ್ಡದು ಮಾಡಿದ್ದೇವೆ. ಆದರೆ ತುಂಗಾ ಮೂಲವೇ ಬತ್ತಿ ಹೋಗುವ ಅಪಾಯಕಾರಿ ವಿದ್ಯಮಾನದ ಬಗ್ಗೆ ನಾವು ಆಗಬೇಕಾದಷ್ಟು ಜಾಗೃತರಾಗಿಲ್ಲ. ಎಂ.ಆರ್.ಪಿ.ಎಲ್.ನಿಂದ ದಕ್ಷಿಣ ಕನ್ನಡದ ಕಡಲು ತೀವ್ರವಾದ ಮಾಲಿನ್ಯಕ್ಕೆ ಒಳಗಾಗುತ್ತಿರುವುದು ನಮ್ಮಲ್ಲಿ ಎಷ್ಟೋ ಜನ ಗಮನಕ್ಕೇ ಬಂದಿಲ್ಲ. ನೆಲದ ಪ್ರಶ್ನೆಯೂ ಅಷ್ಟೆ. ಭೂಸುಧಾರಣೆಯ ಮೂಲತತ್ವಕ್ಕೇ ನಾವಿಂದು ಕೊಡಲಿ ಇಡುತ್ತಿದ್ದೇವೆ. ನೆರೆ ಭಾಷಿಕರು ಕನ್ನಡದ ನೆಲವನ್ನು ಕೊಳ್ಳುತ್ತಿರುವ ಬಗ್ಗೆ ಹುಯಿಲೆಬ್ಬಿಸುತ್ತಿರುವ ನಮಗೆ ಇಡೀ ದೇಶ ಮತ್ತೆ ಅಮೆರಿಕ-ಯುರೋಪುಗಳ ವಸಾಹತಾಗಿ ಪರಿವರ್ತಿತವಾಗುತ್ತಿರುವ ಭೀಕರ ಸತ್ಯದ ಪರಿವೆಯೆ ಇದ್ದಂತಿಲ್ಲ. ಉದಾಹರಣೆಗಳನ್ನು ಬೆಳೆಸದೆ ಒಟ್ಟಿನಲ್ಲಿ ಸೂತ್ರೀಕರಿಸುವುದಾದರೆ ಒಂದು ನವಸಾಮ್ರಾಜ್ಯಶಾಹಿ, ನವವಸಾಹತುಶಾಹಿ ಸಂದರ್ಭದಲ್ಲಿ ಕನ್ನಡ ನೆಲ-ಜಲಗಳ ಸಂರಕ್ಷಣೆಯ ಪ್ರಶ್ನೆಗಳನ್ನೂ ಸಂಸ್ಕೃತಿ, ಪರಿಸರ ಮಾಲಿನ್ಯದ ಪ್ರಶ್ನೆಗಳನ್ನೂ ನಾವು ಆಳವಾಗಿ, ಸೂಕ್ಷ್ಮವಾಗಿ, ಸಮಗ್ರವಾಗಿ ಚಿಂತಿಸಿ ಕಾರ್ಯಪ್ರವೃತ್ತರಾಗಬೇಕಾಗಿದೆ. ವ್ಯಾಪಾರಕ್ಕಾಗಿ ಬಂದ ಬ್ರಿಟಿಷರು ಇಂಡಿಯಾದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯನ್ನು ಸ್ಥಾಪಿಸಿದರು. ಅದರ ಮುಂದಿನ




"ಜನತಂತ್ರ ವ್ಯವಸ್ಥೆಯಲ್ಲಿ ಎಲ್ಲವೂ ಮುಕ್ತವಾಗಿರಬೇಕು ಅನ್ನೋದೇ ನನ್ನ ಆಶಯ."

ಇತಿಹಾಸವನ್ನು ನಾವು ಬಲ್ಲೆವು. ವಸಾಹತುಶಾಹಿ ಆಳ್ವಿಕೆ ಮುಂದೆ ಈ ಉಪಖಂಡದ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ವಿದ್ಯಮಾನಗಳನ್ನು ನಿಯಂತ್ರಿಸಿದ ಬಗ್ಗೆಯೂ ಚರಿತ್ರೆಯಲ್ಲಿ ದಾಖಲಾಗಿಹೋಗಿದೆ. ಆದರೆ ನಾವು ಇತಿಹಾಸದಿಂದ ಕಲಿಯಬೇಕಾದ ಪಾಠಗಳನ್ನು ಇನ್ನೂ ಕಲಿತಿಲ್ಲ. ಬದಲಾಗಿ ನವವಸಾಹತುಶಾಹಿ, ನವಸಾಮ್ರಾಜ್ಯಶಾಹಿ ರಾಜಕಾರಣಕ್ಕೆ ನಮ್ಮನ್ನು ಒಪ್ಪಿಸಿಕೊಳ್ಳುತ್ತಿದ್ದೇವೆ. ಆದ್ದರಿಂದಲೇ ಇಂದು 'ಕನ್ನಡ ಪ್ರಜ್ಞೆ' ಎಂದರೆ ಇವೆಲ್ಲ ಸಂಕೀರ್ಣ ಸತ್ಯಗಳಿಗೆ ಜಾಗೃತರಾಗಿ ನಮ್ಮ ಬಾಳನ್ನು ಹೊಸದಾಗಿ ರೂಪಿಸಿಕೊಳ್ಳುವತ್ತ ಸನ್ನದ್ಧರಾಗುವುದೇ ಆಗಿದೆ. ವಸಾಹತುಶಾಹಿ ಪೂರ್ವದ ಭಾರತದಲ್ಲಿ ಎಲ್ಲವೂ ಸರಿಯಾಗಿತ್ತು ಎಂಬುದು ಈ ಮಾತಿನ ಅರ್ಥವಲ್ಲ. ನಾವು ಭೂತಕಾಲಕ್ಕೆ ಮರಳುವುದು ಸಾಧ್ಯವೂ ಇಲ್ಲ, ಅಪೇಕ್ಷಣೀಯವೂ ಅಲ್ಲ. ಆದರೆ ಅಲ್ಲಮ ಹೇಳುವಂತೆ ಹಿಂದಣ ಹೆಜ್ಜೆಯನ್ನರಿಯದೆ ಮುಂದಣ ಹೆಜ್ಜೆಯನ್ನಿಡಲಾಗದು.

ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದ

ಅಭ್ಯಾಸವನ್ನು ಹೊಸ ರೀತಿಗಳಲ್ಲಿ ಮಾಡಬೇಕಾದದ್ದು ಇಂದಿನ ಸಾಂಸ್ಕೃತಿಕ ಅನಿವಾರ್ಯತೆಯಾಗಿದೆ. ಇತಿಹಾಸದ ಪ್ರತಿಯೊಂದು ಘಟ್ಟವೂ ಚರಿತ್ರೆಯನ್ನು ಪರಿಭಾವಿಸಿಕೊಳ್ಳುವ ಹೊಸ ನೆಲೆಗಳನ್ನು ಒತ್ತಾಯಿಸುತ್ತಿರುತ್ತದೆ. ಈ ನವವಸಾಹತುಶಾಹಿ ಸಂದರ್ಭದಲ್ಲಿ ಆಧುನಿಕತೆ ಮತ್ತು ವಸಾಹತುಶಾಹಿ ಪ್ರಶ್ನೆಗಳು ವೈಚಾರಿಕ ಜಿಜ್ಞಾಸೆಯ ಕೇಂದ್ರಕ್ಕೆ ಬಂದು ನಿಂತಿವೆ. ಹಾಗಾಗಿ ಕೇವಲ ಕಾಲಾನುಕ್ರಮಣಿಕೆಯ ನೆಲೆಯಲ್ಲಿ ನಡೆಸುವ ಅಧ್ಯಯನಗಳು ತಮ್ಮ ಪರಿಮಿತಿಯನ್ನು ತೋರಿಬಿಟ್ಟಿವೆ. ಜೈನ ಸಾಹಿತ್ಯ, ವೀರಶೈವ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯ ಎಂಬ ವರ್ಗೀಕರಣ ಇಲ್ಲವೇ ಸಾಹಿತ್ಯ ಪ್ರಕಾರಗಳ ನೆಲೆಯ ವರ್ಗೀಕರಣಗಳೂ ಇಂದಿನ ಸಾಂಸ್ಕೃತಿಕ ಅಗತ್ಯಗಳನ್ನು ಪೂರೈಸಲಾರವು. ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭಕ್ಕೆ ಬಂದರೂ ನವೋದಯ, ಪ್ರಗತಿಶೀಲ, ನವ್ಯ, ನವೋತ್ತರ, ದಲಿತ, ಬಂಡಾಯ ಎಂಬ ವರ್ಗೀಕರಣಗಳ ಸೀಮಿತತೆಯ ಬಗ್ಗೆಯೂ ಅತೃಪ್ತಿ ಬೆಳೆಯುತ್ತಿದೆ. ವಸಾಹತುಶಾಹಿ ಪೂರ್ವ, ವಸಾಹತುಶಾಹಿ ಸಂದರ್ಭ ಮತ್ತು ನವವಸಾಹತುಶಾಹಿ ಸಂದರ್ಭಗಳ ಹಿನ್ನೆಲೆಯಲ್ಲಿ ನಡೆಸುವ ಅಧ್ಯಯನಗಳು ಹೆಚ್ಚು ಪ್ರಸ್ತುತವೂ ವ್ಯಾಪಕವೂ ಆಗಬಲ್ಲವು. ಇಂಥ ಅಧ್ಯಯನಗಳು ಕೇವಲ ಸಾಹಿತ್ಯಕ ಅಧ್ಯಯನಗಳಾಗಿರದೆ ವಿಶಾಲವಾದ ಅರ್ಥದಲ್ಲಿ ಸಂಸ್ಕೃತಿಯ ಅಧ್ಯಯನಗಳೇ ಆಗಿರುತ್ತವೆ ಎಂಬ ಮಾತನ್ನು ಒತ್ತಿ ಹೇಳಬೇಕಾಗಿಲ್ಲ.

ಕನ್ನಡ ಸಾಹಿತ್ಯವು ಮೊದಲಿನಿಂದಲೂ ಪ್ರಖರವಾದ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯನ್ನು ಒಳಗೊಂಡಿದೆ. ನಮ್ಮ ಆದಿಕವಿಯಾದ ಪಂಪನಲ್ಲೇ ಜಾತಿಯ ಪ್ರಶ್ನೆ, ಪ್ರಭುತ್ವದ ಪ್ರಶ್ನೆಗಳು ಕಾವ್ಯದ ಕೇಂದ್ರದಲ್ಲಿವೆ. ಸಾಮಾಜಿಕ, ರಾಜಕೀಯ ವಿಷಮ ಸ್ಥಿತಿಗಳ ಮಂಡನೆ ಮತ್ತು ಅವುಗಳನ್ನು ದಾಟಬಹುದಾದ ಸಾಧ್ಯತೆಗಳ ಬಗ್ಗೆ ಪಂಪನ ಕಾವ್ಯ ಗಾಢವಾಗಿ ಚಿಂತಿಸಿದೆ. ಅದು ಕೇವಲ ಹಿಂದಿನ ಮಹಾಭಾರತದ ಕನ್ನಡ ರೂಪವಲ್ಲ ಅಥವಾ ಜೈನಮತದ ಸರಳ ಮಂಡನೆಯಲ್ಲ. ಮನುಷ್ಯನ ಸ್ಥಿತಿ-ಸಾಧ್ಯತೆಗಳನ್ನು ಆಳವಾಗಿ ಧ್ಯಾನಿಸುವ, ಆ ಕಾಲದ ಸಾಮಾಜಿಕ, ರಾಜಕೀಯ, ಧಾರ್ಮಿಕ ಆಕೃತಿಗಳನ್ನು ವಿಮರ್ಶೆಗೆ ಒಡ್ಡುವ ಪಂಪನ ಪ್ರತಿಭೆಯ ಮರು ಪರಿಶೀಲನೆಯಿಂದ ಅವನನ್ನು ಹೆಚ್ಚು ಪ್ರಸ್ತುತಗೊಳಿಸಿಕೊಳ್ಳಬಹುದಾಗಿದೆ. ಅಂದಿನಿಂದ ಇಂದಿನವರೆಗೆ ಕನ್ನಡ ಲೇಖಕ ಎಲ್ಲ ಸಾಂಸ್ಥಿಕ ಮೌಲ್ಯಗಳನ್ನು, ಆಕೃತಿಗಳನ್ನು ಪ್ರಶ್ನಿಸಿಕೊಂಡೇ ಬಂದಿದ್ದಾನೆ. ತನ್ನ ಕಾಲದ ವಾಸ್ತವಗಳಿಗೆ ಕುರುಡಾಗದೆ, ಆದರೆ ಕೇವಲ ವರದಿಗಾರ ಅಥವಾ ನಿರೂಪಕನಾಗದೆ ಕನ್ನಡ ಲೇಖಕ ಉದ್ದಕ್ಕೂ ಗಾಢವಾದ ವಾಸ್ತವ ಪ್ರಜ್ಞೆ, ಪ್ರತಿಭಟನೆ, ಪ್ರಗತಿಶೀಲತೆಗಳನ್ನು ತನ್ನ ಬರವಣಿಗೆಗಳಲ್ಲಿ ತೋರುತ್ತ ಬಂದಿದ್ದಾನೆ. ಧಾರ್ಮಿಕ ಪರಿಭಾಷೆಯಲ್ಲಿ ಮಾತನಾಡಿದರೂ ಸಾಂಸ್ಥಿಕ ಧರ್ಮವನ್ನು ಎತ್ತಿ ಹಿಡಿಯದ, ಪರಂಪರೆಯೊಂದಿಗೆ ಅನುಸಂಧಾನ ನಡೆಸಿಯೂ ಅದಕ್ಕೆ ಜೋತುಬೀಳದ, ಆಧ್ಯಾತ್ಮಿಕ ಎತ್ತರಗಳಿಗೆ ತಲುಪಿದಾಗಲೂ ಪಲಾಯನವಾದಿಯಾಗದ, ನಿರಂತರತೆಯನ್ನು ಗಮನಿಸಿಯೂ ಯಥಾಸ್ಥಿತಿಯಾಗದ ಸಂಕೀರ್ಣ ರೀತಿ ಇದು. ಕುಮಾರವ್ಯಾಸನು ಕೃಷ್ಣಕಥೆಯನ್ನು ಹೇಳಹೊರಟಿದ್ದರೂ ಅಂತಿಮವಾಗಿ ಒಂದು ಶ್ರೇಷ್ಠ ರಾಜಕೀಯ ಕಾವ್ಯವನ್ನೇ ಬರೆದಿದ್ದಾನೆ. ಸಂಸರು ಮೈಸೂರು ಮಹಾರಾಜರ ವಂಶಾವಳಿಗಳ ಬಗ್ಗೆ ಬರೆದರೂ ಅದು ರಾಜರ ಕೀರ್ತನೆಯಾಗದೆ ರಾಜಪ್ರಭುತ್ವದ ತೀಕ್ಷ್ಣ ವಿಮರ್ಶೆಯೇ ಆಗುತ್ತದೆ. ಪಂಪ-ಕುಮಾರವ್ಯಾಸರು ಮಹಾಭಾರತದ ಕಥೆಯನ್ನೇ ತಮ್ಮ ಕಾವ್ಯದ ಮೂಲಭಿತ್ತಿಯನ್ನಾಗಿ ಮಾಡಿಕೊಂಡರೂ ಅದನ್ನು ತಮ್ಮ ಸಮಕಾಲೀನ ತುರ್ತು ತುಡಿತಗಳನ್ನು ಹೇಳಿಕೊಳ್ಳಲು ಸೃಜನಶೀಲ ರೂಪಾಂತರಗಳನ್ನು ಮಾಡಿಕೊಂಡರು. ಕುವೆಂಪು ರಾಮಾಯಣದ ಕಥೆಯನ್ನು ತೆಗೆದುಕೊಂಡಾಗ ತಮ್ಮ 'ಶ್ರೀ ರಾಮಾಯಣ ದರ್ಶನಂ'ಅನ್ನು ಇಪ್ಪತ್ತನೆಯ ಶತಮಾನದ

ಮಹಾಕಾವ್ಯವನ್ನಾಗಿ ಮಾಡಿದರು. ಅಂದರೆ ತಮ್ಮ ವೈಯಕ್ತಿಕ ಅಗತ್ಯಗಳಿಗೆ, ತಮ್ಮ ಕಾಲದ ಅಗತ್ಯಗಳಿಗೆ ಒದಗಿಬರುವಂತೆಯೇ ಕನ್ನಡ ಲೇಖಕರು ತಮ್ಮ ಪರಂಪರೆಯನ್ನು ಪ್ರಸ್ತುತ ಗೊಳಿಸಿಕೊಂಡರು. ಇಂಥ ಹದ ಇಂದಿನ ವಿಮರ್ಶೆಗೂ ಬರಬೇಕಾಗಿದೆ. ಪ್ರಭುತ್ವಕ್ಕೆ ಇದಿರಾಗಿ ಅದರ ಸ್ವರೂಪ ಮತ್ತು ಮಿತಿಗಳನ್ನು ನಿರ್ದಯವಾಗಿ ಬಯಲಿಗೆಳೆದ ಕನ್ನಡ ಲೇಖಕ ತನ್ಮೂಲಕ ನಮ್ಮೆಲ್ಲರ ವೈಯಕ್ತಿಕ ಮತ್ತು ಸಾಮೂಹಿಕ ಜವಾಬ್ದಾರಿಗಳನ್ನೇ ಪರೋಕ್ಷವಾಗಿ ಸೂಚಿಸಿದ್ದಾರೆ.

**ಅರಸು ರಾಕ್ಷಸ, ಮಂತ್ರಿಯೆಂಬುವ ಮೊರೆವ ಹುಲಿ**
**ಪರಿವಾರ ಹದ್ದಿನ ನೆರವಿ**
**ಬಡವರ ಬಿನ್ನಪವನಿನ್ನಾರು ಕೇಳುವರು?**
**ಉರಿವುರಿವುತಿದೆ ದೇಶ**
**ನಾವಿನ್ನಿರಲುಬಾರದೆನುತ್ತ-ಜನ**
**ಬೇಸರಿನ ಬೇಗೆಯಲಿರದಲೇ ಭೂಪಾಲ ಕೇಳೆಂದ.**

(ಸಭಾಪರ್ವ ... ೧-೬೨)

ಎಂದು ಕುಮಾರವ್ಯಾಸ ಬರೆದಾಗ ಅವನು ಮಹಾಭಾರತದ ಕಥೆಯಷ್ಟನ್ನೇ ಹೇಳುತ್ತಿದ್ದಾನೆಯೆ? ಅವನು ತನ್ನ ಕಾಲದ ದುಗುಡಗಳನ್ನು ಹೇಳುತ್ತಿದ್ದಾನೋ 'ನಮ್ಮ' ಕಾಲದ ದುಗುಡಗಳನ್ನು ಹೇಳುತ್ತಿದ್ದಾನೋ? ಇನ್ನು ವಚನಕಾರರಂತೂ ನಮ್ಮ ಸಂಸ್ಕೃತಿಯ ಮೂಲಭೂತ ಸಂರಚನೆಗಳನ್ನೇ ಪ್ರಶ್ನಿಸಿದರು. ಎಲ್ಲ ಬಗೆಯ ಯಾಜಮಾನ್ಯವನ್ನು ಧಿಕ್ಕರಿಸಿದರು. ಸಂದೇಹದ, ಪ್ರತಿಭಟನೆಯ ಭಿನ್ನಮತದ ನೆಲೆಗಳಲ್ಲಿ ಎಲ್ಲ ಬಗೆಯ ಪ್ರಭುತ್ವಗಳನ್ನು ವಿಮರ್ಶಿಸಿದರು. ಅಷ್ಟೇ ಅಲ್ಲ, ಹೊಸ ಸಾಮಾಜಿಕ ವ್ಯವಸ್ಥೆಯ, ಆಧ್ಯಾತ್ಮಿಕತೆಯ, ನೈತಿಕತೆಯ ಕನಸುಗಳನ್ನು ಕಂಡರು. ಅವುಗಳನ್ನು ಈಡೇರಿಸಿಕೊಳ್ಳಲು ಬೌದ್ಧಿಕ ಚಿಂತನೆಯ ಜೊತೆಜೊತೆಗೆ ಸಾಂಘಿಕ ಹೋರಾಟದ ನೆಲೆಗಳನ್ನೂ ರೂಢಿಸಿಕೊಂಡರು. ಹನ್ನೆರಡನೆಯ ಶತಮಾನದ ಈ ಚಳವಳಿ ಏಕಕಾಲದಲ್ಲಿ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ಆಧ್ಯಾತ್ಮಿಕ ಪ್ರಶ್ನೆಗಳನ್ನು ಒಳಗೊಂಡಿತ್ತು. ನಮ್ಮ




ಕಾಲದ ಕನ್ನಡ ಚಳವಳಿಗೆ ಇಂಥ ವ್ಯಾಪಕವಾದ, ಸಮಗ್ರವಾದ ಕಲ್ಪನೆ ಇರದಿದ್ದರೆ ಅದು ಸಾಂದರ್ಭಿಕ ಘೋಷಣೆಗಳಲ್ಲಿ, ವೋಟಿನ ರಾಜಕಾರಣದಲ್ಲಿ, ಅರ್ಥಹೀನ ಅಬ್ಬರಗಳಲ್ಲಿ ಒಂದು ಚಳವಳಿಯ ಕ್ರೂರ ಅಪಹಾಸ್ಯವಾಗಿ ಉಳಿದುಕೊಳ್ಳುವುದು. ಹನ್ನೆರಡನೆಯ ಶತಮಾನದ ನೆನಪು ಹಿಂದೆಂದಿಗಿಂತ ಈಗ ಹೆಚ್ಚು ಪ್ರಸ್ತುತವಾಗಿದೆ. ಸಮಾಜದ ಎಲ್ಲ ಸ್ತರಗಳಿಂದ ಬಂದವರು ಚಳವಳಿಯಲ್ಲಿ ಪಾಲ್ಗೊಂಡಂತೆ, ವಚನಗಳನ್ನು ರಚಿಸಿದಂತೆ ಇಂದು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಒಂದು ಹೊಸ ಉತ್ಕರ್ಷವನ್ನೇ ಕಾಣುತ್ತಿದ್ದೇವೆ. ಹಲವು ಬಗೆಯ ಸಾಮಾಜಿಕ-ಸಾಂಸ್ಕೃತಿಕ ಹಿನ್ನೆಲೆಯಿಂದ ಬಂದ ನೂರಾರು ತರುಣ- ತರುಣಿಯರು ಇಂದು ಸಾಹಿತ್ಯರಚನೆಯಲ್ಲಿ ತೊಡಗಿಕೊಂಡಿದ್ದಾರೆ. ಈ ಪ್ರಮಾಣದಲ್ಲಿ ದಲಿತರು, ಹಿಂದುಳಿದ ಜಾತಿ-ವರ್ಗಗಳಿಗೆ ಸೇರಿದವರು ಮತ್ತು ಮಹಿಳೆಯರು ಸಾಹಿತ್ಯರಚನೆಗೆ ತೊಡಗಿಕೊಂಡಿರುವುದು ಹನ್ನೆರಡನೆಯ ಶತಮಾನವನ್ನು ಬಿಟ್ಟರೆ ಈಗಲೇ. ಈ ನವೋತ್ಸಾಹವು ಕನ್ನಡ ವಚನಕಾರರಿಂದ ಅನೇಕ ಪಾಠಗಳನ್ನು ಕಲಿಯಬಹುದಾಗಿದೆ, ಕಲಿಯಬೇಕಾ

ಗಿದೆ; ಅಂದರೆ ವಚನಸಾಹಿತ್ಯವನ್ನು ಕೇವಲ ಹನ್ನೆರಡನೆಯ ಶತಮಾನದ ವಿದ್ಯಮಾನ ವೆಂದು ಬಗೆಯದೆ ಇಂದಿನ ಅಗತ್ಯಗಳಿಗೂ ಪ್ರಸ್ತುತಗೊಳಿಸಿಕೊಳ್ಳಬೇಕಾಗಿದೆ. ಇಂದಿನ ಅಗತ್ಯಗಳಿಗೆ ಪ್ರಸ್ತುತಗೊಳಿಸಿಕೊಳ್ಳುವುದೆಂದರೆ ಕೆಲವು ಬಿಡಿ ಪದಗಳು, ಸಾಲುಗಳು, ಯೋಚನೆಗಳನ್ನು ಹೆಕ್ಕಿಕೊಳ್ಳುವುದಿಲ್ಲ. ನಮ್ಮ ಒಟ್ಟಾರೆ ಓದಿನ, ಗ್ರಹಿಕೆಯ ಕ್ರಮಗಳನ್ನು ಬದಲಾಯಿಸಿಕೊಳ್ಳುವುದು; ಹೊಸದಾಗಿ ರೂಪಿಸಿಕೊಳ್ಳುವುದು.

ನವ ವಸಾಹತುಶಾಹಿ ಸಂದರ್ಭದಲ್ಲಿ ಸಾಹಿತ್ಯದ ಅಧ್ಯಯನವೆಂದರೆ ನವ ವಸಾಹತುಶಾಹಿ ಅನುಭವ ನಮ್ಮ ಸಾಹಿತ್ಯದಲ್ಲಿ ಪ್ರತಿಫಲಿತವಾಗಿರುವ ನೆಲೆಯ ಅಧ್ಯಯನವಷ್ಟೇ ಅಲ್ಲ. ಅದು ದೇಶೀಯ ಗ್ರಹಿಕೆಯ ಕ್ರಮಗಳ, ಅಭಿವ್ಯಕ್ತಿ ಆಕ್ರಮಗಳ, ಆಶೋತ್ತರಗಳ ಸ್ವರೂಪದ ಅಧ್ಯಯನವೂ ಹೌದು. ನಮ್ಮ ಸಂಸ್ಕೃತಿಯನ್ನು ವಸಾಹತುಶಾಹಿ-ನವವಸಾಹತುಶಾಹಿ ಕಣ್ಣುಗಳಿಂದ ನೋಡದೆ ಒಳಗಿನವರಾಗಿ ನೋಡುವುದು, ಪ್ರಶ್ನಿಸುವುದು, ಪರಿಶೀಲಿಸುವುದು. ಆಧುನಿಕತೆ ಎಂಬುದು, ವೈಚಾರಿಕತೆ ಎಂಬುದು ಅಥವಾ ಜ್ಞಾನ ಎನ್ನುವುದು ಪಾಶ್ಚಾತ್ಯ ಮೂಲದಿಂದ ಮಾತ್ರ ಬಂದದ್ದಲ್ಲ. ಕರ್ನಾಟಕದ ಸಂದರ್ಭವನ್ನೇ ನೋಡಿದರೂ ಹನ್ನೆರಡನೆಯ ಶತಮಾನದ ಚಳವಳಿ ಹೇಗೆ ತನ್ನ ಕಾಲದ ಬಿಕ್ಕಟ್ಟುಗಳಿಗೆ ಒಳಗಿನಿಂದಲೇ ಪ್ರತಿಕ್ರಿಯಿಸಿತು ಎಂಬುದು ಮನವರಿಕೆಯಾಗುತ್ತದೆ. ಅಷ್ಟೇ ಅಲ್ಲ, ಒಂದು ವಿಶ್ವಕಲ್ಪನೆಯನ್ನೇ ತನ್ನ ಒಳಗಿನಿಂದ ರೂಪಿಸಿಕೊಳ್ಳಲು ಅದು ಶಕ್ತವಾಯಿತು. ಅದು ರೂಪಿಸಿಕೊಂಡ ವೈಚಾರಿಕ ಆಸಕ್ತಿಗಳು ಮುಂದೆ ಹತ್ತೊಂಭತ್ತು-ಇಪ್ಪತ್ತನೆಯ ಶತಮಾನದಲ್ಲಿ ನಾವು ಪಾಶ್ಚಾತ್ಯ ಮೂಲಗಳಿಂದ ಗ್ರಹಿಸಿದ ಉದಾರವಾದೀ ಮತ್ತು ಸಮಾಜವಾದೀ ವೈಚಾರಿಕ ಆಕೃತಿಗಳಷ್ಟೇ ಅರ್ಥಪೂರ್ಣವಾಗಿದ್ದವು. ಒಂದು ಸಂಸ್ಕೃತಿಯು ತನ್ನ ದೌರ್ಬಲ್ಯ, ವೈರುಧ್ಯಗಳನ್ನು ತಾನೇ ಗುರುತಿಸಿಕೊಂಡು ಅವುಗಳನ್ನು ದಾಟಲು ತನ್ನ ಒಳಗಿನಿಂದಲೇ ಮಾರ್ಗಗಳನ್ನು ರೂಪಿಸಿಕೊಂಡ ಒಂದು ಮಹತ್ವಪೂರ್ಣ ಮಾದರಿ ಅದು. ಹೀಗೆ ತಮ್ಮ ಕಾಲದ ಬಿಕ್ಕಟ್ಟುಗಳನ್ನು ವಸಾಹತುಶಾಹಿ ಪೂರ್ವದ ನಮ್ಮ ಪೂರ್ವಿಕರು ಪರಿಭಾವಿಸಿಕೊಂಡ ಮತ್ತು ಅವುಗಳಿಗೆ ಮುಖಾಮುಖಿಯಾದ ಕ್ರಮಗಳನ್ನು ಅರ್ಥಮಾಡಿಕೊಳ್ಳುವುದು ಸದ್ಯದ ನಮ್ಮ ಹುಡುಕಾಟಗಳಿಗೆ ಹೊಸ ಆಯಾಮಗಳನ್ನು ತಂದುಕೊಳ್ಳುವ ಕ್ರಿಯೆಯೇ ಆಗುತ್ತದೆ. ಇದು ಪುನರುತ್ಥಾನವಾದೀ ಚಟುವಟಿಕೆಯೇನೂ ಆಗಬೇಕಿಲ್ಲ. ಈ ಹಿಂದೆಯೇ ಸೂಚಿಸಿದಂತೆ ಭೂತವನ್ನು ಅರ್ಥ ಮಾಡಿಕೊಳ್ಳುವುದೆಂದರೆ ಭೂತಕ್ಕೆ ಮರಳುವುದು, ಅದಕ್ಕಾಗಿ ಹಪಹಪಿಸುವುದು ಎಂದೇನೂ ಅಲ್ಲ. ಬದಲಾಗಿ ಒಂದು ಸಂಸ್ಕೃತಿಯನ್ನು ಅದರ ಎಲ್ಲ ತಲ್ಲಣ, ಬಿಕ್ಕಟ್ಟು, ದೌರ್ಬಲ್ಯ ಮತ್ತು ಚೈತನ್ಯಗಳೊಂದಿಗೆ ಒಳಗಿನಿಂದ ಅರಿಯುವ ಪ್ರಯತ್ನ. ಸಾಹಿತ್ಯ ವಿಮರ್ಶೆಗೆ, ಹೊಸ ಸೃಜನಶೀಲ ಅಭಿವ್ಯಕ್ತಿಗಳಿಗೆ ದೇಶೀಯ ಮಾದರಿಗಳನ್ನು ಪುನಾರೂಪಿಸಿಕೊಳ್ಳುವಂತೆ ನಮ್ಮದೇ ಆದ ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಚರಿತ್ರೆಗಳನ್ನು ರಚಿಸಿಕೊಳ್ಳಬೇಕೆಂಬ ನಮ್ಮ ಇಂದಿನ ಹಂಬಲಗಳಿಗೂ ಇಂಥ ಅಧ್ಯಯನಗಳಿಂದ ಹೊಸ ಪ್ರೇರಣೆಗಳನ್ನು ಪಡೆಯಲು ಸಾಧ್ಯ. ಪಾಶ್ಚಾತ್ಯ ವಿಚಾರಗಳನ್ನಾಗಲೀ, ಸಾಧನೆಗಳನ್ನಾಗಲೀ ಏಕಮುಖವಾಗಿ ಅಲ್ಲಗಳೆಯಬೇಕೆಂದೇನೂ ಅಲ್ಲ. ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ ಮತ್ತು ನಮ್ಮ ಇಂದಿನ ಒಟ್ಟಾರೆ ಜೀವನ ಸಂದರ್ಭದಲ್ಲೂ ಪಶ್ಚಿಮಕ್ಕೆ ಸಂಪೂರ್ಣವಾಗಿ ಮುಖ ತಿರುಗಿಸಿಕೊಳ್ಳಲು ಸಾಧ್ಯವಿಲ್ಲ. ಆಧುನಿಕ ಕನ್ನಡ ಸಾಹಿತ್ಯದಲ್ಲೇ ಪೂರ್ವ ಪಶ್ಚಿಮಗಳ ನಡುವೆ ನಮಗೆ ಬೇಕಾದ ಪಾಕವೊಂದನ್ನು ಸೃಷ್ಟಿಸಿಕೊಳ್ಳುವ ಮಹತ್ವದ ಮಾದರಿಗಳು ಕುವೆಂಪು-ಕಾರಂತರ ಜೀವನಶೈಲಿಗಳಲ್ಲಿಯೂ ಸಾಹಿತ್ಯ ರಚನೆಗಳಲ್ಲೂ ಕಂಡುಬರುತ್ತವೆ. ಇವರ ಮುಂದಿನ ಪೀಳಿಗೆಯ ಪೂರ್ಣಚಂದ್ರತೇಜಸ್ವಿ, ಕೆ.ವಿ. ಸುಬ್ಬಣ್ಣನವರ ಬಹುಮುಖಿ ಚಟುವಟಿಕೆಗ

ಳಲ್ಲೂ ಅವು ಸೂಚಿತವಾಗುತ್ತವೆ. ಅಡಿಗ, ಅನಂತಮೂರ್ತಿ, ಲಂಕೇಶರ ಬರವಣಿಗೆಗಳಲ್ಲೂ ಇಂಥ ಮಾದರಿಗಳು ವ್ಯಕ್ತವಾಗಿವೆ. ಅನಂತಮೂರ್ತಿಯವರ 'ಕ್ಲಿಪ್‌ಜಾಯಿಂಟ್' ಕಥೆಯಲ್ಲಿ ಸೂಚಿತವಾಗುವಂತೆ ಭಾರತದ ಕೇಶವನಿಗೆ ಬಿಕ್ಕಟ್ಟುಗಳು ಇರುವಂತೆ ಇಂಗ್ಲೆಂಡಿನ ಸ್ಟೂಅರ್ಟ್‌ಗೂ ಇವೆ. ಅವರ ಸಮಸ್ಯೆಗಳಿಗೆ ಪೂರ್ವವೂ ಸಿದ್ಧ ಉತ್ತರವಲ್ಲ, ಪಶ್ಚಿಮವೂ ಸಿದ್ಧ ಉತ್ತರವಲ್ಲ. ಪ್ರಾಯಶಃ ಅವರಿಬ್ಬರೂ ಕೂಡಿ ಇವೆರಡಕ್ಕಿಂತ ಭಿನ್ನವಾದ ಇನ್ನೊಂದು ಹೊಸ ಜೀವನಕ್ರಮವನ್ನೇ ಶೋಧಿಸಬೇಕಾಗಿದೆ. ಅಥವಾ ತೇಜಸ್ವಿಯವರ 'ಕರ್ವಾಲೋ' ಕಾದಂಬರಿಯಲ್ಲಿ ಸೂಚಿತವಾಗುವಂತೆ ಮಂದಣ್ಣನಿಲ್ಲದೆ ಕರ್ವಾಲೋನ ಯಾತ್ರೆ ಪೂರ್ಣಗೊಳ್ಳುವುದಿಲ್ಲ. ಹಾಗೆಯೇ ಮಂದಣ್ಣನ ಸತ್ವ ಹೊರಬರುವುದೂ ಕರ್ವಾಲೋನ ಸ್ಪರ್ಶದಿಂದ. ಪೂರ್ವದಿಂದ ಏನನ್ನು ಪಡೆಯಬೇಕು; ಪಶ್ಚಿಮದಿಂದ ಏನನ್ನು ಪಡೆಯಬೇಕು ಎಂದು ನಿರ್ಧರಿಸುವ ಹಕ್ಕು ನಮ್ಮದೇ. ಇತರರು ನಮ್ಮ ಪರವಾಗಿ ಆದ್ಯತೆಗಳನ್ನು ಸೂಚಿಸಬೇಕಾಗಿಲ್ಲ. ಅಂದರೆ ಒಂದು ಸಮಾನ ನೆಲೆಯಲ್ಲಿ ಮಾತ್ರ ಇತರರೊಂದಿಗೆ ವ್ಯವಹರಿಸುವ ದೃಢತೆ, ಆತ್ಮವಿಶ್ವಾಸಗಳನ್ನು ನಾವು ರೂಢಿಸಿಕೊಳ್ಳಬೇಕಾಗಿದೆ. ಪುನರುತ್ಥಾನವಾದಿಗಳೂ ಆಗದೆ ಪಶ್ಚಿಮದ ಕುರುಡು ಹಿಂಬಾಲಕರೂ ಆಗದೆ ತೃತೀಯ ಪರ್ಯಾಯವನ್ನು ಹುಡುಕಿಕೊಳ್ಳುವ ಬಗೆ ಇದು.

**ಹಡಗ ಹಾಗಿಸು ಪ್ರತೀ ಬಂದರಿಗು, ಯಾವೊಂದು**
**ತಿಮಿಂಗಲ ತೊಡೆಯು ಕೂಡ ನಿಂಗಿ ಕೊಳಸದ ಹಾಗೆ**
**ನಡೆಸು ಬಂದರಿನಿಂದ ಬಂದರಿಗೆ. ಆಮದು ರಫ್ತು**
**ಸಾಗುತ್ತಲಿರಲಿ ಕೊನೆವರೆಗೆ. ಆದರು**
**ಫರಂಗಿರೋಗ ತಗಲದ ಹಾಗೆ**
**ಉಳಿಸು ಪೂರ್ವಾರ್ಜಿತದ ರತಿವಿವೇಕದ ಶಿಖಿಯು.**

ಇದು ಅಡಿಗರ 'ಪ್ರಾರ್ಥನೆ' ಹಾಗೆಯೇ ಸ್ವಾತಂತ್ರ್ಯ: ೧೯೫೫ರ ಪಾಠ ಕೂಡ ಇಷ್ಟೇ ಮಹತ್ವಪೂರ್ಣ:

ಮನೆಯ ಮಕ್ಕಳ ಕೂಡೆ ಆಡ ಬಂದರೆ ಊರ
ಹುಡುಗ ಪಾಳಯ, ತಿಂದಿ ಕೊಟ್ಟು ನಗಿಸು;

ಅಲ್ಲಿ ತಳವೂರಿಸಲು ಬಯಸಿ ತೆಕ್ಕೆಗೆ ಪೂತ
ಬೇಡ ಇರುವಷ್ಟು ತಂಭಾಲು ಗುಟುಕು.

ಕಟ್ಟೆಯೊಳಗಡೆ ನೀರ ಹಣಿಸಿದರೆ ಬೆಳೆವ ಮರ
ತಲೆಮೇಲೆ ತಳೆಯುವುದು ಗೂಡ ಮಾಲೆ.
ಆದರೊಳಗೆ ಬಂದಳಿಕೆ ಬೆಳೆವ ವಿಶ್ವವಿಶಾಲ
ಭಾವವೇ ಬದುಗಡೆಗೆ ಬಟ್ಟ ಕೊಳೆ.

ಇಲ್ಲದಿದ್ದರು ಸರಿಯೆ ಮನೆಗೆ ತೊದಲಿನ ರಕ್ಷೆ;
ತರಬೇಡ ದತ್ತುಗಳ ಜಗಣೆಯೊಲುಮೆ.
ನಿನ್ನ ಬೀಜದ ಫಲಕೆ ಕಾದು ಕುಳಿತಿರು ಬರುವ
ವರೆಗೆ ಹಣ್ಣನ್ನುಣ್ಣದ ಆಮರ ಪಕ್ಷಿ

ಇದೇ ರೀತಿ ಮಾಸ್ತಿಯವರ ಹಲವು ಕತೆಗಳು, 'ಚಿಕವೀರರಾಜೇಂದ್ರ' ಕಾದಂಬರಿ, ಕುವೆಂಪುರವರ ಎರಡೂ ಕಾದಂಬರಿಗಳು; ಕಾರಂತರ 'ಚೋಮನದುಡಿ', 'ಮರಳಿ ಮಣ್ಣಿಗೆ' ಮುಂತಾಗಿ ಆಧುನಿಕ ಕನ್ನಡದ ಹಲವು ಕೃತಿಗಳು ವಸಾಹತುಶಾಹೀ ಅನುಭವವನ್ನು ಅದರ ಎಲ್ಲ ಸಂಕೀರ್ಣತೆಯನ್ನು ಆಳವಾಗಿ ಗ್ರಹಿಸಿವೆ. ನವ ವಸಾಹತುಶಾಹಿ ಸಂದರ್ಭದಲ್ಲಿ ಇಂಥ ಕೃತಿಗಳ ಹೊಸ ಓದು ನಮ್ಮ ಇಂದಿನ ಬಿಕ್ಕಟ್ಟುಗಳನ್ನು ಅರ್ಥಮಾಡಿಕೊಳ್ಳಲು ನಮ್ಮ ಸಾಹಿತ್ಯ ಪರಂಪರೆಯ ಒಳಗಿನಿಂದಲೇ ಅಗತ್ಯವಾದ ಪರಿಕರಗಳನ್ನು ಒದಗಿಸುವಂತಿದೆ. ತೇಜಸ್ವಿಯವರ 'ಪರಿಸರದ ಕತೆ', 'ಜುಗಾರಿ ಕ್ರಾಸ್,' 'ಚಿದಂಬರ ರಹಸ್ಯ' ಮೊದಲಾದ ಕೃತಿಗಳು; ಅನಂತಮೂರ್ತಿಯವರ 'ಸೂರ್ಯನ ಕುದುರೆ', 'ಅಕ್ಕಯ್ಯ' ತರಹದ ಕತೆಗಳು, ವಿವೇಕ ಶಾನಭಾಗ ಅವರ ತೀರಾ ಇತ್ತೀಚಿನ 'ಹುಲಿಯ ಸವಾರಿ' ಕಥಾ ಸಂಕಲನ; ಲಂಕೇಶರ ಹಲವು ಸಂಪಾದಕೀಯ ಲೇಖನಗಳು; ಡಿ.ಆರ್. ನಾಗರಾಜ, ಕೀರ್ತಿನಾಥ ಕುರ್ತಕೋಟಿ, ಜಿ. ರಾಜಶೇಖರ, ಕೆ.ವಿ. ಸುಬ್ಬಣ್ಣ, ಅನಂತಮೂರ್ತಿ ಮುಂತಾದವರ ಹಲವು ವಿಮರ್ಶಾ ಬರಹಗಳು ನವವಸಾಹತುಶಾಹಿ ಸಂದರ್ಭಕ್ಕೆ ನೇರವಾಗಿಯೇ ಮುಖಾ

ಮುಖಿಯಾಗಿವೆ. ಚಂದ್ರಶೇಖರ ಕಂಬಾರ, ದೇವನೂರ ಮಹಾದೇವ, ಎಚ್.ಎಸ್. ಶಿವ ಪ್ರಕಾಶ ಮುಂತಾದವರ ಸೃಜನಶೀಲ ಪ್ರಯೋಗಗಳು ಅವುಗಳ ಸತ್ವದಲ್ಲಿ ಇದೇ ಬಗೆಯವು. ಇಂಥ ಕೃತಿಗಳನ್ನೂ ನಾವು ಹೊಸಬಗೆಯ, ಓದುಗಳಲ್ಲಿ ನಮ್ಮದಾಗಿಸಿಕೊಳ್ಳಬೇಕು. ಆಗ ನವವಸಾಹತುಶಾಹಿ, ನವ ಸಾಮ್ರಾಜ್ಯಶಾಹೀ ಸಂದರ್ಭದ ಸಂಕೀರ್ಣ ಒಳಸುಳಿಗಳ ಸ್ವರೂಪ ನಿಧಾನವಾಗಿ ಬಿಚ್ಚಿಕೊಳ್ಳುತ್ತದೆ. ಅಷ್ಟೇ ಅಲ್ಲ, ಅದು ನಮ್ಮ ಮೇಲುನೋಟಕ್ಕೆ ಭಿನ್ನ ಭಿನ್ನವೆನ್ನಿಸುವ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಚಟುವಟಿಕೆಗಳಿಗೆ ಒಂದು ಬಗೆಯ ಒಟ್ಟಂದವನ್ನೂ ಸಮಗ್ರತೆಯನ್ನೂ ತಂದುಕೊಡುತ್ತದೆ. ★

## ಟ್ಯಾಂಕರ್ ಜನಕ

ಕೆಸರು ಮಣ್ಣಿನಲ್ಲಿ ಸಲೀಸಾಗಿ ಚಲಿಸುತ್ತಿದ್ದ ಟ್ರಾಕ್ಟರೊಂದನ್ನು ೧೯೧೪ರಲ್ಲಿ ಕಂಡ ಬ್ರಿಟಿಷ್ ಸೈನ್ಯಾಧಿಕಾರಿ ಇ.ಡಿ. ಸ್ವಿಂಟನ್ನರಿಗೆ, ಇಂಥ ವಾಹನವನ್ನು ಗುಂಡುನಿರೋಧಕವಾಗಿಸಿ ಅದಕ್ಕೊಂದು ಮಶಿನ್ ಗನ್ನನ್ನು ಅಳವಡಿಸಿದರೆ ಯುದ್ಧದಲ್ಲಿ ಪ್ರಯೋಜನಕ್ಕೆ ಬರುವುದೆಂಬ ಭಾವನೆ ಬಂತು. ಮೇಲಧಿಕಾರಿಗಳ ಮುಂದೆ ಅವರು ಆ ಕುರಿತು ಪ್ರಸ್ತಾಪಿಸಿದಾಗ ಅವ್ಯವಹಾರಿಕವೆಂದು ಆ ವಿಚಾರವನ್ನವರು ತಿರಸ್ಕರಿಸಿದರು.

ದೂರದೃಷ್ಟಿಯ ವಿನ್‌ಸ್ಟನ್ ಚರ್ಚಿಲ್ ಮಾತ್ರ ಆ ವಿಚಾರವನ್ನು ಅನುಮೋದಿಸಿ ಅದನ್ನು ಕಾರ್ಯಗತಗೊಳಿಸಲು ಹಣದ ವ್ಯವಸ್ಥೆಯನ್ನೂ ಮಾಡಿದರು. ೧೯೧೫ರಲ್ಲಿ ರಹಸ್ಯವಾಗಿ 'ಲಿಟಲ್ ವಿಲ್ಲಿ' ಎಂಬ ಈ ಯಂತ್ರವನ್ನು ತಯಾರಿಸಿ ಅದಕ್ಕೆ ಟ್ಯಾಂಕ್ ಎಂಬ ಸಾಂಕೇತಿಕ ಹೆಸರನ್ನು ಕೊಡಲಾಯಿತು. ಅನಂತರ ಇದರ ಕಾರ್ಯವಿಧಾನವನ್ನು ಇನ್ನಷ್ಟು ಉತ್ತಮಪಡಿಸಿ 'ಬಿಗ್ ವಿಲ್ಲಿ' ಎಂಬ ಮಾದರಿಯನ್ನು ತಯಾರಿಸಲಾಯಿತು. ಪ್ರಥಮ ಮಹಾಯುದ್ಧದ ಸಮಯದಲ್ಲಿ ಬ್ರಿಟನ್ ಇದನ್ನು ಜರ್ಮನ್ನರ ವಿರುದ್ಧ ಪ್ರಯೋಗಿಸಿತು. ಟ್ಯಾಂಕುಗಳೆಂದರೆ ಏನೆಂಬುದೇ ಗೊತ್ತಿರದ ಜರ್ಮನ್ನರು ದಿಕ್ಕೆಟ್ಟು ಓಡಿದರು, ಇಲ್ಲವೇ ಶರಣಾಗತರಾದರು. ಹೀಗೆ ಈ ಟ್ಯಾಂಕುಗಳ ಬಳಕೆ ಯುದ್ಧದ ಗತಿಯನ್ನೇ ಬದಲಿಸಿತು.

• ಟಿ.ಎಸ್. ಲಲಿತ

## ಆಧುನಿಕ ಧರ್ಮಜ?

ಧರ್ಮರಾಯ ದುರ್ಯೋಧನನೊಂದಿಗೆ ಯುದ್ಧವಾಡಿದ; ಸರ್ವಸ್ವವನ್ನೂ ಕಳೆದುಕೊಂಡ ಧರ್ಮಜ ಕೊನೆಗೆ ಹೆಂಡತಿಯನ್ನೂ ಪಗಡೆಯಾಟದಲ್ಲಿ ಸೋತುಹೋದ ಎನ್ನುವುದು ಮಹಾಭಾರತದ ಕಥೆ.

ಬಾಂಗ್ಲಾದೇಶದ ಮೆಹಾಷ್ಕಾಲಿ ಎಂಬ ಗ್ರಾಮದಲ್ಲಿಯೂ ಇದೇ ರೀತಿಯ ಘಟನೆ ನಡೆಯಿತು. ಅಲ್ಲಿ ಕುಸ್ತಿಯ ಪಂದ್ಯವನ್ನು ಏರ್ಪಡಿಸಲಾಗಿತ್ತು. ಸೋತವನು ಗೆದ್ದವನಿಗೆ ಹೆಂಡತಿಯನ್ನು ಒಪ್ಪಿಸಬೇಕು ಎನ್ನುವುದು ಪಂದ್ಯದ ಶರತ್ತು.

ಕುಸ್ತಿಯಲ್ಲಿ ಗೆದ್ದ ಮೀರ್ ಕಾಸಿಂ ಸೋತ ಅಬ್ದುಲ್ ಕಲಾಂನ ಹೆಂಡತಿಯನ್ನು ಕರೆತರಲು ಪಲ್ಲಕ್ಕಿಯೊಡನೆ ಹೋದ. ಅಬ್ದುಲ್ ಕಲಾಂನ ಹೆಂಡತಿ-ಐದುಮಕ್ಕಳ ತಾಯಿ-ವಿಷಯ ತಿಳಿದು ನಾಚಿಕೆ ಹಾಗೂ ಅವಮಾನದಿಂದ ಕುಸಿದು ಕುಳಿತಳು. ವಿಷಯ ತಿಳಿದ ಜನ ಕಾಸಿಂನನ್ನು ಹೊಡೆದು ಅಟ್ಟಿದರು. ಪಲ್ಲಕ್ಕಿಯನ್ನು ನುಚ್ಚುನೂರಾಗಿಸಿದರು. ಅಬ್ದುಲ್ ಕಲಾಂನನ್ನು ಹುಡುಕಿಕೊಂಡು ಹೋಗಿ ಮೈಕೈ ಹಣ್ಣು ಮಾಡಿದರು.

ಮಹಾಭಾರತ ಕಾಲದಲ್ಲೂ ಹೀಗೆಯೇ ನಡೆದಿದ್ದರೆ ಕುರುಕ್ಷೇತ್ರ ಯುದ್ಧ ನಡೆಯುತ್ತಿರಲೇ ಇಲ್ಲ, ಅಲ್ಲವೆ?

• ಜೆ.ವಿ. ತಿಪ್ಪೇಸ್ವಾಮಿ

## ನೆನಪು ನೆರಳಿನಲ್ಲಿ

೧೯೬೪ನೆಯ ಇಸ್ವಿ ಶ್ರಾವಣ ಮಾಸದ ಸೋಮವಾರ, ವಿಜಾಪುರಕ್ಕೆ ಕೆಲಸದ ನಿಮಿತ್ತವಾಗಿ ಹೋಗಬೇಕಾಗಿತ್ತು, ಸರಿಯಾಗಿ ಮುಂಜಾನೆ ೮-೩೦ ಗಂಟೆಗೆ ಹುನಗುಂದದಲ್ಲಿ ಬಸ್ಸೇರಿ ನಿಡಗುಂದಿಯನ್ನು ತಲುಪಿದಾಗ ೯-೩೦ ಆಗಿತ್ತು; ೧೦ ನಿಮಿಷ ಸಮಯವಿದೆ, ಚಹಕುಡಿಯಬಹುದು ಎಂದು ಬಸ್ ಕಂಡಕ್ಟರ್ ಕೂಗಿ ಪ್ರಯಾಣಿಕರಿಗೆ ಹೇಳಿದ. ಎಲ್ಲ ಪ್ರಯಾಣಿಕರು ಇಳಿದು ಹೋದರು. ಅದೇಕೋ ನಾನು ಮಾತ್ರ ಹೋಗದೆ ಹಾಗೆಯೇ ಕುಳಿತುಕೊಂಡೆ. ಅಲ್ಲಿ ಒಬ್ಬ ಮುಪ್ಪಾದ ಮುದುಕಿ ಹಾಗೂ ಪಾರ್ಶ್ವ ವಾಯುಪೀಡಿತ ಮುದುಕ ಒಂದು ಹುಡುಗಿಯನ್ನು ಕರೆದುಕೊಂಡು ಬಂದು, ನನ್ನ ಬದಿಯಲ್ಲೆ ಕೂಡಿಸಿ, ತಾನು ಆಕೆಯ ಇನ್ನೊಂದು ಬದಿಯಲ್ಲಿ ಕುಳಿತುಕೊಂಡ.

ಆಗ ನಾನು, "ಅಮ್ಮಾ ಈ ಸೀಟಿನಲ್ಲಿ ಯಾರೋ ಕುಳಿತುಕೊಂಡಿದ್ದಾರೆ, ಬೇರೆ ಸೀಟಿನಲ್ಲಿ ಕುಳಿತುಕೊಳ್ಳಬಾರದೆ?" ಎಂದೆ. ಆಗ ಆ ಮುದುಕಿ.

"ಮಗಳಿಗೆ ಅಜಾರಿಯಾಗಿದೆ; ವಿಜಾಪುರಕ್ಕೆ ತೋರಿಸಲು ಹೊರಟಿದ್ದೇವೆ. ದಯವಿಟ್ಟು ಹಾಗೆ ಮಾಡಬೇಡಿ. ನಿಮ್ಮ ಕಾಲಿಗೆ ಬೀಳುತ್ತೇನೆ" ಎಂದು ಹೇಳಿದಾಗ; ನನ್ನ ಮಗ್ಗುಲಿದ್ದ ಹುಡುಗಿಯನ್ನು ನೋಡಿ,

"ಏನಾಗಿದೆ?" ಎಂದೆ. ಆಗ ಮುದುಕಿ, "ಹಡೆದು-ಹೀಗಾಗಿದೆ ನೋಡಿ" ಎಂದಳು. ಕಂಡಕ್ಟರ್ ಬೆಲ್ ಬಾರಿಸಿ ಬಸ್ ಹೊರಡಲಿದೆ ಎಂಬ ಎಚ್ಚರಿಕೆಯನ್ನು ಕೊಟ್ಟ. ನನ್ನ ಮಗ್ಗಲಿದ್ದವರು ಬಂದರು. ಅವರು ನನಗೆ ತುಂಬಾ ಬೇಕಾದವರು ಅವರಿಗೆ ನಾನು, "ಹುಡುಗಿಗೆ ಅಜಾರಿಯಾಗಿದೆ, ನೀವು ನಿಂತೇ ಪ್ರಯಾಣಿಸಿರಿ" ಎಂದು ಹೇಳಿದೆ. ಅವರು ಹಾಗೆಯೇ ಮಾಡಿದರು. ಬಸ್ ಚಲಿಸುತ್ತ ೩-೪ ಕಿಲೋಮೀಟರ್ ಹೋಗಿರಬೇಕು; ನನ್ನ ಬದಿಇದ್ದ ಹುಡುಗಿ ತನ್ನ ಬಲಗೈಯನ್ನು ನನ್ನ ತೊಡೆಯ ಮೇಲೆ ಚೆಲ್ಲಿದಳು. ನನಗೆ ಸಂಶಯ ಬಂದು ಹುಡುಗಿಯ ಕೈ ಹಿಡಿದು ನಾಡಿಯನ್ನು ನೋಡಿದೆ. ನಾಡಿ ಮಿಡಿಯುವ ಯಾವ ಲಕ್ಷಣ ಕಾಣಲಿಲ್ಲ. ಆಗ ಮುದುಕಿ, "ಅಪ್ಪಾ, ನನ್ನ ಮಗಳಿಗೆ ಹೇಗಿದೆ?" ಎಂದು ಕೇಳಿದಳು.

"ಅಮ್ಮಾ ನಿನ್ನ ಮಗಳ ಪ್ರಾಣ ಹೋಗಿದೆ; ಹೇಗೆ ಮಾಡುವೆ?" ಎಂದಾಗ, ದುಃಖ ತುಂಬಿ, ಕಂಠ ಬಿಗಿದು, ಮಾತೇ' ಹೊರಡಲಿಲ್ಲ. ಮುಂದೆ ಗೊಳಸಂಗಿ ಗ್ರಾಮ ಬಂತು.

"ಅಪ್ಪ ನನ್ನ ಮಗಳನ್ನು ಇಲ್ಲೇ ಇಳಿಸಿಬಿಡಿರಿ; ಇಲ್ಲಿ ನನ್ನ ಸಂಬಂಧಿಕರಿದ್ದಾರೆ," ಎಂದಳು. ನಾನು ಆಗ ಸಹಕರಿಸಲು ಎಲ್ಲರನ್ನೂ ಕರೆದೆ. ಆದರೆ ಯಾರೂ ಬರಲಿಲ್ಲ. ನನ್ನ ಶಕ್ತಿಯನ್ನು ಉಪಯೋಗಿಸಿ, ಹೆಗಲ ಮೇಲೆ ಹಾಕಿಕೊಂಡು, ಕೆಳಗೆ ಇಳಿದು, ಮರದ ಕೆಳಗೆ ಮಲಗಿಸಿ, ಮರಳಿ ಬಂದು ಸೀಟಿನಲ್ಲಿ ಕುಳಿತೆ. ಪ್ರಯಾಣಿಕರಲ್ಲಿ ಒಬ್ಬ,

"ಏನ್ರಿ, ಶ್ರಾವಣ ಮಾಸ; ನೀವು ಹೆಣ ಮುಟ್ಟಬಾರದಾಗಿತ್ತು," ಅಂದ.

ಅದಕ್ಕೆ ನಾನು ಮಾರುತ್ತರ ಕೊಡಲಿಲ್ಲ. ಮುಂದೆ ಮುತ್ತಗಿ ಗ್ರಾಮ ಬಂತು. ಆ ಊರ ಗೌಡರು ನನಗೆ ತುಂಬಾ ಪರಿಚಿತರು. ನನ್ನ ಹತ್ತಿರ ಬಂದಾಗ ಜನ,

"ಗೌಡ್ರೆ, ಇದೇ ಸೀಟಿನ ಒಬ್ಬ ಹುಡುಗಿ ಈಗ ಸತ್ತಳು. ಅವರೇ ಇಳಿಸಿದ್ದಾರೆ. ಮತ್ತಾರೂ ಅದನ್ನು ಮುಟ್ಟಿಲ್ಲ," ಅಂದರು.

"ಮುಟ್ಟಿದ್ದರೆ ಏನಾಗುತ್ತಿತ್ತು? ನಿಮ್ಮ ಮನೆಯವರಿಗೆ ಹೀಗಾಗಿದ್ದರೆ?" ಎಂದು ಅವರು ಅಂದು, ನನ್ನತ್ತ ಬಂದು ಕುಳಿತು, "ಒಬ್ಬರಿಗೇ ಭಾರವಾಗಿರಬೇಕು ಎಂತಹ ಜನಗಳಿವರು?' ಎಂದರು.

-ಬಸವರಾಜ ತೆಗ್ಗಿನಮಠ.

ನಮ್ಮವರ ಭಾವ ಉಳ್ಳಾಲದ ಲಕ್ಷ್ಮೀವೆಂಕಟೇಶನ ಅರ್ಚಕರು. ಅವರು ದೇವಳದಲ್ಲಿ ಸುದರ್ಶನ ಹವನ ಇಟ್ಟುಕೊಂಡಿದ್ದ ಪ್ರಯುಕ್ತ ಒಮ್ಮೆ ನಾವು ನಮ್ಮ ಪುಟ್ಟ ಮಗು ರಮ್ಯಾಳೊಂದಿಗೆ ಅವರಲ್ಲಿ ಹೋಗಿದ್ದೆವು.

ನಾದಿನಿಯ ಮನೆ ಮುಖ್ಯ ರಸ್ತೆಗೆ ಹೊಂದಿಕೊಂಡೇ ಇದೆ. ಅಗತ್ಯದ ವಸ್ತುಗಳೇನಾದರೂ ಬೇಕಾದರೆ ನಮ್ಮ ನಾದಿನಿ ತನ್ನ ಮಕ್ಕಳನ್ನು ಅಂಗಡಿಗೆ ಕಳುಹಿಸುವ ಪರಿಪಾಠ. ನಿತ್ಯದ ರೂಢಿಯ ಮೂಲಕ ಯಾವ ಆಂತಕವೂ ಇಲ್ಲದೇ ಮಕ್ಕಳು ರಸ್ತೆದಾಟಿ ಅತ್ತಕಡೆಯ ಅಂಗಡಿಗೆ ಹೋಗಿ ಜಿನಸಿಗಳನ್ನು ತರುತ್ತವೆ. ಜೊತೆಗೆ ಅಂಗಡಿಯಾತನಿಂದ ಪೇಪರಮಿಂಟೋ ಚಾಕಲೇಟೋ ದೊರೆಯುತ್ತವೆ. ಬಸ್ಸು, ಲಾರಿಗಳ ಓಡಾಟ ಅವರಿಗೆ ಮಾಮೂಲಾಗಿದೆ.

ಹೀಗೆ ಅಂಗಡಿಗೆ ಹೊರಟ ನಾದಿನಿಯ ಮಗಳೊಂದಿಗೆ ನಮ್ಮ ರಮ್ಯಾ ಹೊರಟು ನಿಂತಾಗ ಅವಳನ್ನು ಎತ್ತಿಕೊಳ್ಳಲೂ ಆಗದೆ ಬಿಟ್ಟು ಹೋಗಲೂ ಆಗದೆ, "ಈಗ ಬಂದು ಬಿಡುತ್ತೇನೆ. ಇಲ್ಲೇ ಇರು ಮರಿ," ಎಂದು ರಮ್ಯಾಳ ಉತ್ತರಕ್ಕೂ ಕಾಯದೇ ಓಡಿದ್ದಳು ಹುಡುಗಿ. ನಾವು ಕಾರ್ಯ ಬಾಹುಳ್ಯದಲ್ಲಿದ್ದವರಿಗೂ ಮಗುವಿನ ಕಡೆಗೆ ಗಮನ ಹರಿಸಲಾಗಲಿಲ್ಲ. ಆದರೂ ಒಂದೆರಡು ಬಾರಿ ಅತ್ತಿತ್ತಲ ಬಾಗಿಲಕಡೆ, ರಸ್ತೆಯ ಕಡೆ ಇಣುಕಿ ನೋಡಿ, ಮಗು ಇನ್ನುಳಿದ ಮಕ್ಕಳೊಂದಿಗೆ ಆಡುತ್ತಿರಬಹುದೆಂದು ಎಣಿಕೆ ಹಾಕಿದ್ದೆ. ಆದರೆ ನನ್ನ ಎಣಿಕೆ ತಪ್ಪಾಗಿತ್ತು.

ಕ್ಷಣದಲ್ಲಿ 'ಮಗು ಇಲ್ಲ, ಮಗು ಇಲ್ಲ' ಎಂಬ ಹಾಹಾಕಾರ. ಅಂಗಡಿಗೆ ಹೋದ ನಾದಿನಿಯ ಮಗಳು ಮರಳುತ್ತಿದ್ದಂತೆಯೆ ಅವಳಲ್ಲಿ ಕೇಳಿದರೆ, 'ನಾನು ಹೋಗುವಾಗ ಇಲ್ಲೇ ಇದ್ದಳು,' ಎಂಬ ಉತ್ತರ. ರಸ್ತೆಯುದ್ದಕ್ಕೂ ಅತ್ತ ಇತ್ತ ನೋಡಿದ್ದಾಯಿತು. ಹೆದ್ದಾರಿಯಲ್ಲಿ ಓಡಾಡುವ ವಾಹನಗಳ ನಡುವೆ...! ನೆನೆದಾಗ ಭಯದಿಂದ ಎದೆ ಡವಡವ ಹೊಡೆದುಕೊಳ್ಳಲಾರಂಭಿಸಿತು.

ಅರ್ಧಗಂಟೆ ಸರಿಯುತ್ತಿದ್ದಂತೆ ಯಾರೋ ಪುಣ್ಯಾತ್ಮರು ಮುದುಕರು ನಮ್ಮತ್ತ ಮಗುವನ್ನೆತ್ತಿಕೊಂಡು ಬರುತ್ತಿದ್ದರು. ದೂರದಿಂದಲೇ ಮಗುವನ್ನು ಕಂಡಾಗ ಹೋದ ಜೀವ ಬಂದ ಹಾಗಾಯ್ತು. ಓಡಿಹೋಗಿ ಮಗುವನ್ನು ಬಾಚಿಕೊಂಡು, ಮಗು, ಎಲ್ಲಿ ಹೋಗಿದ್ದೆ," ಎಂದೆ. ಆ ಪುಣ್ಯಾತ್ಮ "ಏನ್ರಿ, ಎಂಥಾ ಜನಾ ನೀವು? ಇಂಥಾ ಜನಜಂಗುಳಿ, ವಾಹನಗಳ ಓಡಾಟದ ನಡುವೆಯೂ ಮಗುವನ್ನು ಬಿಡುವುದೆ? ಮಗು ರೋದಿಸುತ್ತ ಸಾಗಿತ್ತು. ತಪ್ಪು ತಪ್ಪು ಹೆಜ್ಜೆ ಬೇರೆ ಹಾಕುತ್ತಿತ್ತು. ತಾಯಿತಂದೆಗಳಿಂದ ತಪ್ಪಿಸಿಕೊಂಡಿರಬೇಕು; ಪೊಲೀಸ್ ಠಾಣೆಯಲ್ಲಿ ಒಪ್ಪಿಸೋಣ ಅನ್ನಿಸಿತು; ಹೊರಟಿದ್ದೆ," ಅಂದನಾತ. 'ಪುಣ್ಯಾತ್ಮನಪ್ಪ ನೀನೂ,' ಎಂದು ಆತನನ್ನು ಆಗ್ರಹಪೂರ್ವಕವಾಗಿ ಮನೆತನಕ ಕರೆತಂದು, ತಿಂಡಿ ತೀರ್ಥ ಕೊಟ್ಟು, ಮೇಲೆ ಐವತ್ತರ ನೋಟೊಂದನ್ನು ಕೊಡಹೋದಾಗ ಹಣ ಮಾತ್ರ ಸುತರಾಂ ಮುಟ್ಟಲಿಲ್ಲ. "ದುಡ್ಡು ಎಷ್ಟು ದಿನದ್ದು ತಾಯಿ? ಪ್ರೀತಿ, ವಿಶ್ವಾಸ ಮುಖ್ಯ. ಸದ್ಯ ನಿಮ್ಮ ಮಗು ನಿಮ್ಮ ಕೈ ಸೇರಿತಲ್ಲ ಅದೇ ಸಂತೋಷ," ಎಂದ ಆತ. ಅಂದಿನಿಂದ ಅವನ ಬಗ್ಗೆ ಏನೋ ಒಂದು ಬಗೆಯ ಆತ್ಮೀಯತೆ, ಯಾವುದೋ ಒಂದು ಬಗೆಯ ಋಣಾನುಬಂಧ ನಮಗೆಲ್ಲ. ಈ ಮಾತಿಗೆ ಎರಡು ಸಂವತ್ಸರಗಳೇ ಕಳೆದರೂ ಆ ವೃದ್ಧನ ಚಿತ್ರ ಇಂದಿಗೂ ನನ್ನ ಕಣ್ಣಮುಂದೆ ನಿಂತಿದೆ. ಉಳ್ಳಾಲಿಗೆ ಹೋದಾಗಲೆಲ್ಲ ನಾನೂ ನಮ್ಮವರೂ ಆತನ ಬಗ್ಗೆ ವಿಚಾರಿಸುತ್ತೇವೆ. ಮೊನ್ನೆ ಹೋದಾಗ, "ಆ ಮುದುಕನೇನಾದರೂ ಬಂದಿದ್ದನಾ?"ಎಂದು ಲೋಕಾಭಿರಾಮವಾಗಿ ಕೇಳಿದೆ. "ಯಾವ ಮುದುಕ?" ಎಂಬ ನಾದಿನಿಯ ಪ್ರಶ್ನೆಗೆ, "ನಮ್ಮ ರಮ್ಯಾಳನ್ನು ಕರೆತಂದಾತ," ಅಂದೆ. "ಓ... ಆತನಾ? ಪಾಪ, ಮೊನ್ನೆ ಮೊನ್ನೆ ರಸ್ತೆ ಅಪಘಾತದಲ್ಲಿ ತೀರಿಕೊಂಡ. ನಾವೆಲ್ಲ ಹೋಗಿ ನೋಡಿ ಬಂದೆವು," ಎಂದಾಗ ನನ್ನ ಕಣ್ಣುಗಳು ಹನಿಗೂಡಿದ್ದವು.

ಕಲ್ಪನಾ ರೋಹಿದಾಸ ಆಚಾರ್ಯ



● ಆದಿಕೇಶವ

## ಅಂದಿನ ಆಟ !
## ಇಂದಿನ ನೋಟ !

**ಮ**ದ್ರಾಸಿನ ಚಿದಂಬರಂ ಕ್ರೀಡಾಂಗಣದಲ್ಲಿ ನಡೆದ ಈ ಟೆಸ್ಟ್ ಪಂದ್ಯ ಕ್ರಿಕೆಟ್ ಇತಿಹಾಸದಲ್ಲಿ ಮತ್ತೊಂದು ಐತಿಹಾಸಿಕ ದಾಖಲೆಯನ್ನು ಬರೆಯಿತು. ಇದಕ್ಕೂ ಮೊದಲು ೪೯೮ ಪಂದ್ಯಗಳ ಹಿಂದೆ ಅಂದರೆ ೧೯೬೦-೬೧ರಲ್ಲಿ ಆಸ್ಟ್ರೇಲಿಯ-ವೆಸ್ಟ್‌ಇಂಡೀಸ್ ನಡುವೆ ಈ ರೀತಿಯ ಐತಿಹಾಸಿಕ ದಾಖಲೆ ಸೃಷ್ಟಿಯಾಗಿತ್ತು.

ವಿಚಿತ್ರವೆಂದರೆ ಈ ಎರಡೂ ದಾಖಲೆಗಳು ಸ್ಥಾಪಿತವಾಗಿದ್ದು ಪ್ರಥಮ ಟೆಸ್ಟ್ ಪಂದ್ಯದಲ್ಲಿ. ಬ್ರಿಸ್ಬೇನದಲ್ಲಿ ಸ್ಥಾಪಿತವಾದ ಮೊದಲನೆ ದಾಖಲೆಯ ಸಾಲಿಗೆ ಸೇರಲು ಈ ಪಂದ್ಯ ೫೫೪ ನಿಮಿಷ ತೆಗೆದುಕೊಂಡಿತು.

ಮದ್ರಾಸಿನ ಈ ಪಂದ್ಯದಲ್ಲಿ ಎರಡೂ ತಂಡಗಳ ಆಟಗಾರರು ನಿಜವಾದ ಕ್ರೀಡಾ ಮನೋಭಾವ, ತಮ್ಮ ಸಾಮರ್ಥ್ಯ ಪರಿಚಯಿಸಿದರು. ಅದರಲ್ಲಿಯೂ ಮುಖ್ಯವಾಗಿ ಪಂದ್ಯದ ಐದನೇ ದಿನ ತೀವ್ರ ಒತ್ತಡದಲ್ಲಿದ್ದ ಆಟಗಾರರು ನಿರಾತಂಕವಾಗಿ ಆಟಮುಗಿದಾಗ ನಿಶ್ಚಿಂತೆಯ ಉಸಿರುಬಿಟ್ಟಿದ್ದರು.

### ಮೈದಾನದಲ್ಲಿ

ಬ್ಯಾಟಿಂಗ್‌ಗೆ ಹೇಳಿಮಾಡಿಸಿದಂತಿದ್ದ ಪಿಚ್‌ನಲ್ಲಿ ಟಾಸ್‌ಗೆದ್ದು ಮೊದಲು ಬ್ಯಾಟಿಂಗ್ ಆಯ್ದುಕೊಂಡ ಆಸ್ಟ್ರೇಲಿಯ ನಾಯಕ ಅಲನ್ ಬಾರ್ಡರ್ ಆರಂಭದಲ್ಲಿ ತಪ್ಪು ಮಾಡಿದೆನೇನೋ ಎಂದು ಹಳಹಳಿಸಿದರೂ ನಂತರದ ಬ್ಯಾಟ್ಸ್‌ಮನ್‌ಗಳ ಅತ್ಯುತ್ತಮ ಪ್ರದರ್ಶನದಿಂದ ಸಂತಸದ ನಿಟ್ಟುಸಿರು ಬಿಟ್ಟಿದ್ದ. ಮಾರ್ಷ್ (೨೨) ರೂಪದಲ್ಲಿ ಮೊದಲ ವಿಕೆಟ್ ಬಿದ್ದಾಗ ಆಸ್ಟ್ರೇಲಿಯ ಸ್ಕೋರು ಕೇವಲ ೪೮ ರನ್ ತೋರಿಸುತ್ತಿತ್ತು. ಆದರೆ ಆರಂಭಿಕ ಬ್ಯಾಟ್ಸ್‌ಮನ್ ಡೇವಿಡ್ ಬೂನ್‌ರನ್ನು ಕೂಡಿಕೊಂಡ ಡೀನ್‌ಜೋನ್ಸ್ ಆಟದ ಗತಿಯನ್ನೇ ಬದಲಾಯಿಸಿಬಿಟ್ಟ.

ಜೆಫ್ ಮಾರ್ಷ್ ವಿಕೆಟ್‌ನ್ನು ಬೇಗನೇ ಕಬಳಿಸಿದ ಉತ್ಸಾಹದಲ್ಲಿದ್ದ ಭಾರತೀಯ

**ಭಾರತ-ಆಸ್ಟ್ರೇಲಿಯ ಪ್ರಥಮ ಟೆಸ್ಟ್**

ಸ್ಥಳ: ಚಿದಂಬರಂ ಕ್ರೀಡಾಂಗಣ ಮದ್ರಾಸ್

ದಿನಾಂಕ: ೧೯೮೬-೮೭, ಸೆಪ್ಟಂಬರ್ ೧೮, ೧೯, ೨೦, ೨೧, ೨೨

ಬೌಲರ್‌ಗಳನ್ನು ಬೂನ್ ಹಾಗೂ ಜೋನ್ಸ್ ದಂಗುಬಡಿಸಿದರು. ಬೌಲಿಂಗ್‌ನಲ್ಲಿ ಏನೂ ಸತ್ವವೇ ಇಲ್ಲ ಎನ್ನುವಂತೆ ಆಡಿದ ಈ ಜೋಡಿ ಎರಡನೇ ವಿಕೆಟ್ ಪಾಲುಗಾರಿಕೆಯಲ್ಲಿ ೧೫೮ ರನ್ ಸೇರಿಸಿದ್ದಾಗ ಆತಿಥೇಯರ ಶಿಬಿರದಲ್ಲಿ ಆತಂಕ ಶುರುವಾಗಿತ್ತು. ಐದು ದಿನಗಳ ಪಂದ್ಯದಲ್ಲಿ ವೇಗದ ಆಟ ಬೇಡ ಎಂಬಂತೆ ತಾಳ್ಮೆಯ ಆಟ ನೀಡಿದ ಉಪನಾಯಕ ಬೂನ್ ೧೨೨ ರನ್ ಬಾರಿಸಿದ್ದಾಗ ಶರ್ಮಾ ಈ ವಿಕೆಟ್ ಕೆಡವಿದ.

ಬೂನ್ ನಿರ್ಗಮನದ ನಂತರ ಕಾಂಗ್ರೂ ಗಳ ಅರ್ಭಟ ಮತ್ತಷ್ಟು ಜೋರಾಯಿತು. ಡೀನ್‌ಜೋನ್ಸ್ ೫೦೩ ನಿಮಿಷಗಳ ಕಾಲ ಪಿಚ್‌ನಲ್ಲಿದ್ದು ೩೩೦ ಎಸೆತಗಳನ್ನು ಎದುರಿಸಿ ೨೭ ಬೌಂಡರಿ ಎರಡು ಸಿಕ್ಸರ್ ಸಹಿತ ೨೧೦ ರನ್ ಗಳಿಸಿ ಪೆವಿಲಿಯನ್‌ಗೆ ಮರಳಿದಾಗ ಮದ್ರಾಸಿನ ಅಭಿಮಾನಿಗಳು ಭಾರೀ ಕರತಾಡನದಿಂದ ಅಭಿನಂದನೆ ವ್ಯಕ್ತಪಡಿಸಿದರು.

ಎರಡು ದಿನ ಹಾಗೂ ಮೂರನೇ ದಿನದ ೩೭ ನಿಮಿಷಗಳ ಆಟವನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡಿದ್ದ ಆಸ್ಟ್ರೇಲಿಯ ಏಳು ವಿಕೆಟ್ ಕಳೆದುಕೊಂಡು ೫೭೪ ರನ್ ಗಳಿಸಿದ್ದಾಗ ಬಾರ್ಡರ್ ಇನಿಂಗ್ಸ್ ಡಿಕ್ಲೇರ್ ಮಾಡಿಕೊಂಡ.

# ಬಾಗಿಲವರೆಗೂ ಬಂದು ಮರಳಿದ ವಿಜಯಲಕ್ಷ್ಮಿ

ಒಂದು ತುದಿಯಲ್ಲಿ ಗಟ್ಟಿಯಾಗಿ ನೆಲೆಯೂರಿದ್ದ ಜೋನ್ಸ್‌ಗೆ ಉತ್ತಮ ಕಂಪನಿ ನೀಡಿದ ನಾಯಕ ಬಾರ್ಡರ್ (೧೦೬) ಶತಕ ಬಾರಿಸಿದ್ದಲ್ಲದೆ ನಾಲ್ಕನೆ ವಿಕೆಟ್ ಜೊತೆಯಾಟದಲ್ಲಿ ೧೭೮ ರನ್ ಬರುವಂತೆ ಮಾಡಿದ. ತಾನೆದುರಿಸಿದ ಮೊದಲ ಚೆಂಡಿನಲ್ಲೇ ಜೀವದಾನ ಪಡೆದಿದ್ದ ಬಾರ್ಡರ್ ಈ ಅವಕಾಶವನ್ನು ಚೆನ್ನಾಗಿ ಉಪಯೋಗಿಸಿಕೊಂಡು ಭಾರತೀಯ ಬೌಲರ್‌ಗಳಿಗೆ ಸಾಕಷ್ಟು ಬೆವರಿಳಿಸಿದ. ಏಳನೇ ವಿಕೆಟ್ ರೂಪದಲ್ಲಿ ಬಂದ ಜಿ. ಮ್ಯಾಥ್ಯೂಸ್ ಒಂದು ದಿನದ ಪಂದ್ಯದಲ್ಲಿ ಆಡುವಂತೆ ಪಟಪಟನೆ ೪೪ ರನ್ ಗಳಿಸಿದ್ದಾಗ ಯಾದವ್ ಈ ವಿಕೆಟ್ ಕೆಡವಿ ದಣಿದಿದ್ದ ತಮ್ಮ ಫೀಲ್ಡರ್‌ಗಳಿಗೆ ವಿಶ್ರಾಮ ನೀಡಿದ.

ಆಸ್ಟ್ರೇಲಿಯದ ಬೃಹತ್ ಸ್ಕೋರಿಗೆ ಪ್ರಮುಖ ಕಾರಣಕರ್ತನೆನಿಸಿದ ಭಾರತದ ಪರ ತಕ್ಕಮಟ್ಟಿಗೆ ಉತ್ತಮ ಬೌಲಿಂಗ್ ಪ್ರದರ್ಶನ ನೀಡಿದ ಯಾದವ ೧೪೨ ರನ್ ನೀಡಿ ನಾಲ್ವರನ್ನು ಬಲಿಹಾಕಿದ.

ಆಸ್ಟ್ರೇಲಿಯದ ಇನ್ನಿಂಗ್ಸ್ ಮುಗಿದಾಗ ಭಾರತೀಯ ಬೌಲರ್‌ಗಳು ಭಾರೀ ದಣಿದಿದ್ದರು. ಆದರೆ ಬ್ಯಾಟ್ಸ್‌ಮನ್‌ಗಳು ಇದಕ್ಕೆ ತದ್ವಿರುದ್ಧ ಎನ್ನುವ ರೀತಿಯಲ್ಲಿ ಸರದಿಯ ಆರಂಭದಿಂದಲೇ ಬಿರುಸಿನ ಆಟ ಪ್ರದರ್ಶಿಸಿದ್ದು ಆಸ್ಟ್ರೇಲಿಯ ಶಿಬಿರದಲ್ಲಿ ಚಡಪಡಿಕೆ ಉಂಟುಮಾಡಿತು. ಅಂಪೈರ್‌ನಿಂದ ಗಾರ್ಡ್ ತೆಗೆದುಕೊಂಡ ತಕ್ಷಣವೇ ಕಾಂಗ್ರೂ ಬೌಲಿಂಗನ್ನು ಚಚ್ಚತೊಡಗಿದ. ಶ್ರೀಕಾಂತ ಕೇವಲ ೫೫ ನಿಮಿಷಗಳಲ್ಲಿ ೫೦ ರನ್ ಗಳಿಸಿ ಎದುರಾಳಿಗೆ ದಿಗಿಲು ಹುಟ್ಟಿಸಿದ. ಇದಕ್ಕೂ ಮುನ್ನ ಶ್ರೀಕಾಂತನೊಂದಿಗೆ ಸರದಿ ಆರಂಭಿಸಲು ಬಂದ ಸುನೀಲ ಗವಾಸ್ಕರ್ (೮) ಮ್ಯಾಥ್ಯೂಸ್

ಬೌಲಿಂಗ್‌ನಲ್ಲಿ ಮರು ಕ್ಯಾಚ್ ನೀಡಿದ್ದು ಭಾರತ ಪಾಲಿಗೆ ಆಘಾತವಾಗಿತ್ತು.

ನಂತರ ಸ್ಕೋರಿನ ವೇಗ ಒಂದೇ ಸಮನೆ ಏರತೊಡಗಿದ್ದರೂ, ಒಂದರ ಹಿಂದೆ ಒಂದರಂತೆ ವಿಕೆಟ್‌ಗಳು ಬಿದ್ದು ಆಸ್ಟ್ರೇಲಿಯಕ್ಕೆ ಮೇಲುಗೈ ಒದಗಿಸಿತು. ಗವಾಸ್ಕರ್ ಪತನದ ನಂತರ ಬಂದ ಅಮರನಾಥ, ಎದುರಿಸಿದ ಒಂದೇ ಎಸೆತದಲ್ಲಿಯೇ ನಿರ್ಗಮಿಸಿದ. ಇದರ ಹಿಂದೆಯೇ ಶ್ರೀಕಾಂತ (೫೩) ಮ್ಯಾಥ್ಯೂಸ್‌ಗೆ ವಿಕೆಟ್ ಒಪ್ಪಿಸಿದ.

ಈ ಹಂತದಲ್ಲಿ ತಂಡದ ಕುಸಿತವನ್ನು ತಡೆಯುವ ಹೊಣೆಹೊತ್ತ ಮಹಮ್ಮದ್ ಅಝರುದ್ದೀನ್ (೫೦) ಮತ್ತು ರವಿಶಾಸ್ತ್ರಿ (೬೨) ನಾಲ್ಕನೆ ವಿಕೆಟ್ ಜೊತೆಯಾಟದಲ್ಲಿ ೭೭ ರನ್ ಸೇರಿಸಿದರು. ನಂತರ ಬಂದ ನಾಯಕ ಕಪಿಲದೇವ್ ಹೊಣೆಗಾರಿಕೆಯ ಆಟ ಪ್ರದರ್ಶಿಸಿ ಚಿದಂಬರಂ ಕ್ರೀಡಾಂಗಣದಲ್ಲಿ ನೆರೆದಿದ್ದ ಸಾವಿರಾರು ಕ್ರೀಡಾಭಿಮಾನಿಗಳ ಪ್ರಶಂಸೆಯ ಸುರಿಮಳೆಯನ್ನೇ ಗಿಟ್ಟಿಸಿದ. ಏಳನೇ ಕ್ರಮಾಂಕದಲ್ಲಿ ಆಡಲು ಬಂದ ಕಪಿಲದೇವ್ ಅತ್ಯಮೂಲ್ಯ ಶತಕ (೧೧೯) ಬಾರಿಸಿದ್ದಲ್ಲದೆ ತಂಡವನ್ನು 'ಫಾಲೋಆನ್' ಪಡೆಯುವದರಿಂದ ಬಚಾವ್ ಮಾಡಿದ. ಚಂದ್ರಕಾಂತ ಪಂಡಿತ (೩೫) ಮತ್ತು ಚೇತನ ಶರ್ಮಾ (೩೦) ಅವರಿಂದ ಉಪಯುಕ್ತ ಬೆಂಬಲ ಪಡೆದ ಕಪಿಲ್ ಆಡಿದ ಆಟ ಅಮೋಘವಾಗಿತ್ತು.

ಆತಿಥೇಯರಿಗೆ ಮಾರಕವಾಗಿ ಕಂಡ ಮ್ಯಾಥ್ಯೂಸ್ ೧೦೩ ರನ್ ನೀಡಿ ಐವರನ್ನು ತನ್ನ ಬುಟ್ಟಿಗೆ ಹಾಕಿಕೊಂಡ. ಹೀಗಾಗಿ ಭಾರತದ ಆಟ ೩೯೭ ರನ್‌ಗಳಿಗೆ ಮುಕ್ತಾಯವಾಗಿ ಆಸ್ಟ್ರೇಲಿಯಕ್ಕೆ ೧೭೭ ರನ್‌ಗಳ ಲೀಡ್ ಸಿಕ್ಕಿತು.

ಪಂದ್ಯದ ನಾಲ್ಕನೆ ದಿನ. ಆದಷ್ಟು ಬೇಗ ರನ್ ಸೇರಿಸಿ ಭಾರತವನ್ನು ಸೋಲಿಸಬೇಕೆಂಬ ಗುರಿಯಿಂದ ಬಾರ್ಡರ್ ತಂಡದ ಸ್ಕೋರು ಐದು ವಿಕೆಟ್‌ಗಳಿಗೆ ೧೭೦ ರನ್ ಆಗಿದ್ದಾಗ ಇನ್ನಿಂಗ್ಸ್ ಡಿಕ್ಲೇರ್ ಮಾಡಿಕೊಂಡು ಎಲ್ಲರಿಗೂ ಅಚ್ಚರಿ ಮೂಡಿಸಿದ. ಮೊದಲ ಸರದಿಯಲ್ಲಿ ವಿಫಲನಾಗಿದ್ದ ಆರಂಭಿಕ ಬ್ಯಾಟ್ಸ್‌ಮನ್ ಜೆಫ್ ಮಾರ್ಷ್ (೧೧) ಮತ್ತೊಮ್ಮೆ ಬೇಗನೇ ಔಟಾಗಿ ಭಾರತಕ್ಕೆ ಮೊದಲ ವಿಕೆಟ್ ಗಳಿಸಿ ಕೊಟ್ಟಿದ್ದ.

ಪಂದ್ಯದ ಕಡೆಯ ದಿನ ನಿಚ್ಚಳ ಜಯ ಸಂಪಾದಿಸಲು ೩೪೮ ರನ್ ಗಳಿಸಬೇಕಿದ್ದ ಭಾರತಕ್ಕೆ ಸುನೀಲ ಗವಾಸ್ಕರ್ (೯೦) ಹಾಗೂ ಕೆ. ಶ್ರೀಕಾಂತ್ (೩೯) ಉತ್ತಮ ಆರಂಭ ನೀಡಿದರು. ಭೋಜನ ವಿರಾಮದ ವೇಳೆಗೆ ಭಾರತದ ಸ್ಕೋರು ಒಂದು ವಿಕೆಟ್‌ಗೆ ೯೦. ನಂತರ ಗವಾಸ್ಕರ್ ಜೊತೆಗೂಡಿದ ಮೊಹಿಂದರ್ ಅಮರನಾಥ (೫೧) ಎಚ್ಚರಿಕೆಯ ಆಟ ಪ್ರದರ್ಶಿಸಿ ತಮ್ಮ ಪಾಲುಗಾರಿಕೆಯಲ್ಲಿ ೧೦೩ ರನ್ ಬರುವಂತೆ ಮಾಡಿದ.

ಆಸ್ಟ್ರೇಲಿಯದ ಬೌಲರ್‌ಗಳಿಗೆ ವಿಕೆಟ್ ಕಬಳಿಸಲು ತಿಣುಕಾಡುವಂತೆ ಮಾಡಿದ ಈ ಜೋಡಿಯನ್ನು ಮ್ಯಾಥ್ಯೂಸ್ ಮುರಿದಾಗ ನಾಯಕ ಬಾರ್ಡರ್ ಸಂತಸದ ಉಸಿರುಬಿಟ್ಟ. ಚಹಾ ವಿರಾಮದ ವೇಳೆಗೆ ಎರಡು ವಿಕೆಟ್‌ಗಳಿಗೆ ೧೯೩ ರನ್ ಸೇರಿಸಿದ್ದ ಭಾರತ ಬಹುತೇಕ ಸೋಲಿನ ಭಯದಿಂದ ಹೊರಬಂದಿತ್ತು.

ಪಂದ್ಯದ ಕಡೆಯ ೩೦ ಓವರುಗಳು ಆರಂಭವಾದಾಗ ಭಾರತಕ್ಕೆ ಜಯಗಳಿಸಲು ೧೫೫ ರನ್ ಬೇಕಿತ್ತು. ಈ ಹಂತದಲ್ಲಿ ಬಿರುಸಿನ ಆಟಕ್ಕಿಳಿದ ಅಝರುದ್ದೀನ್ (೪೨) ಹಾಗೂ ಶಾಸ್ತ್ರಿ (ಔಟಾಗದೆ ೪೮) ಆಸ್ಟ್ರೇಲಿಯ ಸ್ಪಿನ್ ಆಕ್ರಮಣವನ್ನು ಸಮರ್ಥವಾಗಿ ಎದುರಿಸುತ್ತ ಬೌಂಡರಿ ಬಾರಿಸತೊಡಗಿದಾಗ ಕಾಂಗ್ರೂ ಶಿಬಿರದಲ್ಲಿ ಗೊಂದಲ ಶುರುವಾಗತೊಡಗಿತು.

ಈ ಜೋಡಿಯ ರಭಸದ ಆಟದಿಂದ ಗೆಲುವಿ ಗುರಿಯತ್ತ ಸಾಗುತ್ತಿದ್ದ ಭಾರತಕ್ಕೆ ಬ್ರೈಟ್ ಭಾರೀ ಹೊಡೆತ ನೀಡಿದ. ೪೨ ರನ್ ಗಳಿಸಿದ್ದ ಅಝರ್ ಬ್ರೈಟ್‌ನ ಎಸೆತವನ್ನು ಜೋರಾಗಿ ಬಾರಿಸಲು ವಿಫಲನಾದಾಗ ರಿಚಿ

ಕ್ಯಾಚ್ ಹಿಡಿದು ಆಸ್ಟ್ರೇಲಿಯಕ್ಕೆ ಮಹತ್ವದ ವಿಕೆಟ್ ಗಳಿಸಿಕೊಟ್ಟ.

ಮುಂದೆ ೩೯ ರನ್ ಗಳಿಸಿದ್ದ ಚಂದ್ರಕಾಂತ ಪಂಡಿತ ಆರನೇ ವಿಕೆಟ್ ರೂಪದಲ್ಲಿ ಮ್ಯಾಥ್ಯೂಸ್‌ಗೆ ಬಲಿಯಾದಾಗ ಭಾರತಕ್ಕೆ ಗೆಲ್ಲಲು ಕೇವಲ ೧೭ ರನ್‌ಗಳು ಬೇಕಿದ್ದವು. ಈ ಸಮಯದಲ್ಲಿ ಅನಿರೀಕ್ಷಿತ ಎಂಬಂತೆ ಭಾರತದ ಪಾಲಿಗೆ ಭೂತದಂತೆ ಕಂಡ ಬ್ರೈಟ್ ಮೂರು ವಿಕೆಟ್ ನುಂಗಿಹಾಕಿದಾಗ ಆತಿಥೇಯ ತಂಡ ಮರ್ಯಾದೆ ಉಳಿಸಿಕೊಳ್ಳಲು ಕಡೆಯ ಆಟಗಾರನ ಮೇಲೆ ಅವಲಂಬಿಸಬೇಕಾಯಿತು.

ಕಡೆಯ ವಿಕೆಟ್ ರೂಪದಲ್ಲಿ ಮೈದಾನಕ್ಕಿಳಿಯುವ ಮುನ್ನ ನಾಯಕ ಕಪಿಲದೇವ್‌ನಿಂದ ಕೆಲವು ಸಲಹೆ ಸೂಚನೆಗಳನ್ನು ಪಡೆದು ಬಂದ ಮಣಿಂದರ್ ರವಿಶಾಸ್ತ್ರಿಯನ್ನು ಸೇರಿಕೊಂಡಾಗ ಕ್ರೀಡಾಂಗಣದಲ್ಲಿ ತುಂಬಿದ್ದ ಅಭಿಮಾನಿಗಳೆಲ್ಲ ಕಾತರದಿಂದ ಮುಂದೇನಾಗುವದೆಂದು ನೋಡುತ್ತಿದ್ದರು.

ಎರಡನೇ ಇನಿಂಗ್ಸ್‌ನಲ್ಲಿ ಸತತ ೪೦ ಓವರುಗಳನ್ನು ಮಾಡಿ ದಣಿದವನಂತೆ ಕಾಣುತ್ತಿದ್ದ ಮ್ಯಾಥ್ಯೂಸ್ ಕಡೆಯ ಓವರು ಮಾಡಲು ಸಿದ್ಧಗೊಂಡಿದ್ದ. ಭಾರತಕ್ಕೆ ಓವರಿನಲ್ಲಿ ಗೆಲ್ಲಲು ಬರೀ ನಾಲ್ಕು ರನ್‌ಗಳು ಬೇಕು. ಮೊದಲ ಮೂರು ಎಸೆತಗಳಲ್ಲಿ ಎರಡು ಹಾಗೂ ಒಂದು ರನ್ ಗಳಿಸಿದ ಶಾಸ್ತ್ರಿ ಸ್ಕೋರನ್ನು ಸಮಸ್ಥಿತಿಗೆ ತಂದು (೩೪೭) ಕಡೆಯ ಮೂರು ಎಸೆತಗಳನ್ನು ಆಡಲು ಮಣಿಂದರ್‌ಸಿಂಗ್‌ಗೆ ಬಿಟ್ಟುಕೊಟ್ಟ.

ಅಂಪೈರ್‌ನಿಂದ "ಗಾರ್ಡ್" ತೆಗೆದುಕೊಂಡ ಮಣಿಂದರ್ ಮೇಲೆ ಎಲ್ಲರ ಕಣ್ಣು. ಸುಮಾರು ೩೦ ಸಾವಿರ ಪ್ರೇಕ್ಷಕರು ಒಂದು ಕ್ಷಣ ಉಸಿರು ಬಿಗಿ ಹಿಡಿದುಕೊಂಡಿದ್ದರು. ಮ್ಯಾಥ್ಯೂಸ್ ಓಡಿಬಂದು ನಾಲ್ಕನೆ ಬಾಲ್ ಎಸೆದ ಅರೆ! ಮಣಿಂದರ್ ಈ ಎಸೆತದಲ್ಲಿ ರನ್ ತೆಗೆಯಲೇ ಇಲ್ಲ. ಸ್ಟಂಪ್ ಹಾರಿಸುವ ಗುರಿಯಿಂದ ಮ್ಯಾಥ್ಯೂಸ್ ಐದನೇ ಬಾಲ್





ಮಾಡಿದಾಗ ಚೆಂಡು ಬ್ಯಾಟಿಗೆ ತಾಗದೆ ಪ್ಯಾಡಿಗೆ ಬಡಿದಾಗ ಆಸ್ಟ್ರೇಲಿಯದವರಿಂದ ಜೋರಾಗಿ ಔಟ್‌ಗೆ ಮನವಿ.

ಅಂಪೈರ್ ನಿಧಾನವಾಗಿ ತನ್ನ ಕೈಬೆರಳನ್ನು ಮೇಲೆತ್ತಿ ಎಲ್.ಬಿ. ಔಟೆಂದು ತೀರ್ಪು ನೀಡಿದಾಗ ಆಸ್ಟ್ರೇಲಿಯದ ಫೀಲ್ಡರುಗಳಲ್ಲಿ ಏನೋ ಸಾಧಿಸಿದ ತೃಪ್ತಿ. ಬಾರ್ಡರ್ ಬಳಗ ಮ್ಯಾಥ್ಯೂಸ್‌ನನ್ನು ಮೇಲೆತ್ತಿ ಮೈದಾನದ ತುಂಬೆಲ್ಲ ಕುಣಿದಾಡಿತು. ಭಾರೀ ಕುತೂಹಲದಿಂದ ಆಟದ ಮೇಲೆ ಗಮನ ಹರಿಸಿದ್ದ ಪ್ರೇಕ್ಷಕ ಸಮೂಹಕ್ಕೆ ಕಾಂಗರೂಗಳ ಕುಣಿದಾಟದಲ್ಲಿ ಒಂದು ನಿಮಿಷ ಏನಾಯಿತೆಂದು ತಿಳಿಯಲೇ ಇಲ್ಲ.

ಮ್ಯಾಥ್ಯೂಸ್ ಈ ಪಂದ್ಯದಲ್ಲಿ ೧೦ ವಿಕೆಟ್ ಪಡೆದ ಸಾಧನೆ ಮಾಡಿದ. ಟೆಸ್ಟ್ ಇತಿಹಾಸದಲ್ಲಿ ಎರಡನೆ ಬಾರಿ ಟೈ ಆದ ಸಾಲಿಗೆ ಈ ಪಂದ್ಯ ಸೇರಿಕೊಂಡಿತು.

ಬಾಗಿಲಿಗೆ ಬಂದಿದ್ದ ವಿಜಯಲಕ್ಷ್ಮಿ ಸ್ವಲ್ಪದರಲ್ಲೇ ಮರಳಿ ಹೋದಳಲ್ಲ ಎಂಬ ಹತಾಶ ಭಾವನೆ ಭಾರತೀಯರದ್ದಾಯಿತು.

"ಮ್ಯಾಥ್ಯೂಸ್ ಕೊನೆಯ ಓವರು ಎಸೆಯಲು ಸಿದ್ಧವಾದಾಗ ಆತನಿಗೆ ಕೆಲವು ನಿರ್ದಿಷ್ಟ ಸೂಚನೆ ನೀಡಿದ್ದೆ. ಆದರಂತೆ ಆತ ಪ್ರತಿ ಚೆಂಡನ್ನು ಸ್ಟಂಪ್ ಮೇಲೆ ಎಸೆದು ಆಸ್ಟ್ರೇಲಿಯದ ಮಾನ ಕಾಪಾಡಿದ. ನಿಜಕ್ಕೂ ಮ್ಯಾಥ್ಯೂಸ್‌ನ ಪ್ರದರ್ಶನ ಅಮೋಘ. ನಾವು ಮೊದಲ ಇನ್ನಿಂಗ್ಸ್‌ದಲ್ಲಿ ೫೭೪ ರನ್ ಮಾಡಿದ್ದಾಗ ಪಂದ್ಯ ನೀರಸ ಡ್ರಾದಲ್ಲಿ ಮುಗಿಯುವದೆಂದು ಎಣಿಸಿದ್ದೆ. ಆದರೆ ಕಡೆ ಕಡೆಗೆ ಆಟದಲ್ಲಿ ಅನಿರೀಕ್ಷಿತ ಫಲಿತಾಂಶ ಬರತೊಡಗಿದ್ದರಿಂದ ಪಂದ್ಯಕ್ಕೆ ರೋಚಕ ಕಳೆ ಬಂದಿತ್ತು. ಪಂದ್ಯ 'ಟೈ' ಆದರೂ ಜಯ ಸಾಧಿಸಿದ್ದಕ್ಕಿಂತ ಉತ್ತಮ ಆಟ ಇಲ್ಲಿ ಬಂದಿತ್ತು," ಎಂದು ಅಲನ್ ಬಾರ್ಡರ್ ಹೆಮ್ಮೆಪಟ್ಟುಕೊಂಡ.

"ಪಂದ್ಯದ ಕಡೆಯ ದಿನ ನಮ್ಮ ಮೇಲೆ ನಿರೀಕ್ಷಿಸಲಾರದಂತಹ ಒತ್ತಡ ಬಿದ್ದಿತ್ತು. ಇದರಲ್ಲಿ ಕಡೆಯ ಎಸೆತ ಬೀಳುವ ತನಕ ಗೆಲುವು ನಮಗೆ ಎಂದು ಹೇಳುವದು ಕಠಿಣವಾಗಿತ್ತು. ಪಂದ್ಯ ಮುಗಿದ ನಂತರ ಪ್ರೇಕ್ಷಕರು ರೋಚಕ ಆಟ ವೀಕ್ಷಿಸಿದರೆ, ನಾವು ಅಮೋಘ ಗೆಲುವಿನಿಂದ ವಂಚಿತಗೊಂಡೆವು," ಎಂಬುದಾಗಿತ್ತು ಕಪಿಲ್‌ದೇವ್‌ನ ಅಭಿಪ್ರಾಯ.

"ಬ್ರಿಸ್ಬೇನದಲ್ಲಿ ತಾವು ಆಡಿದ ಪ್ರಥಮ ಟೈ ಪಂದ್ಯದಷ್ಟು ತುರಿಸಿನಿಂದ ಈ ಟೆಸ್ಟ್ ಪಂದ್ಯ ನಡೆಯಲಿಲ್ಲ. ನನ್ನ ಮಟ್ಟಿಗೆ ಗ್ರೇಗ್ ಮ್ಯಾಥ್ಯೂಸ್ ಈ ಪಂದ್ಯದ ನಿಜವಾದ ಹಿರೋ ಆದರೆ ಡೀನ್ ಜೋನ್ಸ್ ತನ್ನ ಆಕರ್ಷಕ ಆಟದಿಂದ ಜನಮನಗೆದ್ದ," ಎಂದು ಮ್ಯಾಥ್ಯೂಸ್‌ನನ್ನು ಆಸ್ಸಿಗಳ ತಂಡದ ಮ್ಯಾನೇಜರ್ ಬಾಬಿ ಸಿಂಪ್ಸನ್ ಅಭಿನಂದಿಸಿದ.

**ದಾಖಲೆಯಲ್ಲಿ:** ಮೊದಲ ಮೂರು ದಿನಗಳು ಮಳೆರಾಯನಿಗೆ ಸಮರ್ಪಣೆಯಾಗಿದ್ದರಿಂದ ಎರಡನೆ ಟೆಸ್ಟ್ ಯಾವುದೇ ಫಲಿತಾಂಶ ಕಾಣದೆ 'ಡ್ರಾ' ದಲ್ಲಿ ಕೊನೆಗೊಂಡಿತು. ಮೂರನೇ ಹಾಗೂ ಅಂತಿಮ ಟೆಸ್ಟ್ ಸಹ 'ಡ್ರಾ' ದಿಂದ ಹೊರತಾಗಲಿಲ್ಲ, ಗವಾಸ್ಕರ್ (೧೦೩) ಶತಕದ ನಂತರ ರವಿಶಾಸ್ತ್ರಿ (೧೨೧) ಮತ್ತು ದಿಲೀಪ್ ವೆಂಗ್‌ಸರ್ಕಾರ್ (೧೬೪) ಮುರಿಯದ ಆರನೇ ವಿಕೆಟ್ ಜೊತೆಯಾಟದಲ್ಲಿ ೨೯೮ ರನ್ ಸೇರಿಸಿದರು. ಆಸ್ಟ್ರೇಲಿಯ ಪರ ಮಾರ್ಷ್ ೧೦೧ ರನ್ ಹೊಡೆದ ಗೌರವಪಡೆದ.

## ಕೀಟಮಯ ಜಗತ್ತು

ಜಗತ್ತಿನಲ್ಲಿ ಎಷ್ಟು ಬಗೆಯ ಕೀಟಗಳಿರಬಹುದು? ೩ ಕೋಟಿ ಎಂದೊಂದು ಅಂದಾಜು. ಅಂದರೆ ಜಗತ್ತಿನ ಎಲ್ಲ ಪ್ರಾಣಿ, ಸಸ್ಯಗಳ ಪ್ರಭೇದಗಳಿಗಿಂತ ಇದು ಹಲವು ಪಟ್ಟು ಹೆಚ್ಚು. ಹಾಗಾದರೆ ಕೀಟಗಳ ಒಟ್ಟು ಸಂಖ್ಯೆ ಎಷ್ಟಿರಬಹುದು? ೧ ರ ಮುಂದೆ ಹದಿನೆಂಟು ಸೊನ್ನೆಗಳನ್ನು ಹಾಕಿದರೆ ಎಷ್ಟೋ ಅಷ್ಟು!

# ನಿರ್ವಂಶ

ಧಾರವಾಡವನ್ನು ತಮ್ಮ ಕರ್ಮಕ್ಷೇತ್ರವಾಗಿಸಿಕೊಂಡು ಮಹಾರಾಷ್ಟ್ರದಲ್ಲೆಲ್ಲ ಹೆಸರು ಮಾಡಿದ್ದ ಅನುಪಮ ಕಥೆಗಾರ ಪ್ರೊ. ಜಿ.ಎ. ಕುಲಕರ್ಣಿಯವರ ಒಂದು ನೀಳ್ಗತೆ.

ಸಿದ್ದನಹಳ್ಳಿಯ ಹಿಂಬದಿಯ ಬಯಲಿನಲ್ಲಿದ್ದ ನೂರ್ಮನೆ ನಟ್ಟನಡುವೆ ಅರಳಿದಂತೆ ಕಾಣಿಸುತ್ತಿತ್ತು. ಒಂದು ಕಾಲಕ್ಕೆ ಹೆಸರೇ ಸೂಚಿಸುವಂತೆ ನೂರು ಮನೆಗಳು ಅಲ್ಲಿದ್ದಿರಬಹುದು. ಆದರೆ ಇಂದು ಜೋಪಡಿಗಳ ಮೂವತ್ತು-ನಾಲ್ವತ್ತು ಮನೆಗಳು ಮಾತ್ರ ಅಲ್ಲಿದ್ದವು. ಅಲ್ಲದೆ ಈಗ ಗೊಲ್ಲ, ಗಾರುಡಿಗರು ಮತ್ತು ಮಾದಿಗರಷ್ಟೇ ಅಲ್ಲಿ ವಾಸಿಸುತ್ತಿದ್ದರು. ಅವರಲ್ಲಿ ಪರಸ್ಪರ ವ್ಯವಹಾರ ನಡೆಯುತ್ತಿತ್ತು. ಈ ವಸತಿಯಲ್ಲಿ ತಯಾರಾಗುವ ಸೆರೆ-ಗಾಂಜಾ ಆ ವಸತಿಯ ಗಡಿದಾಟಿ ಹೋಗುತ್ತಿತ್ತು. ಹುಚ್ಚು ಮುದುಕಿ ರಸ್ತೆ ಪಕ್ಕದಲ್ಲಿಟ್ಟ ಅರಿಶಿಣ-ಕುಂಕುಮ ಹಚ್ಚಿದ ಮೂರುಕಲ್ಲಿನ ಮೇಲೆ ಎರಡೂ ಪಂಗಡದ ಜನರಿಂದ ಆಗಾಗ ಚಿಲ್ಲರೆ ಹಣ, ಜೋಳ, ಅಕ್ಕಿ ಬಂದು ಬೀಳುತ್ತಿತ್ತು. ಒಮ್ಮೊಮ್ಮೆ ಮೈಲಾರಲಿಂಗನ ಅಥವಾ ಯಲ್ಲಮ್ಮನ ಚುರುಮುರಿ, ಪುಠಾಣಿ, ಹಸಿ ಕೊಬ್ಬರಿ, ಸಕ್ಕರೆಯ ಪ್ರಸಾದ ಇಬ್ಬರ ನಡುವೆ ವಿನಿಮಯವಾಗುತ್ತಿತ್ತು. ಆದರೆ ಊಟದಂಥ ಸಮಾರಾಧನೆಗೆ ಮಾತ್ರ ಅವಕಾಶವಿರಲಿಲ್ಲ. ಕುಂಬಯ್ಯನ ಮಗಳು ಮೈ-ಕೈ ತುಂಬಿಕೊಂಡು ಬಿನ್ನಾಣದಿಂದ ಆ ವಸತಿಯಲ್ಲಿ ಓಡಾಡುತ್ತಿದ್ದಾಗ ಅಲ್ಲಿಯ ಗಂಡಸರಿಗೆ ಆಕೆ ತಮ್ಮ ಕಣ್ಣ ಮುಂದೆ ಸದಾ ಹೀಗೆಯೇ ಓಡಾಡುತ್ತಿರಲಿ ಎಂದೆನ್ನಿಸತೊಡಗಿತು. ಆಗ ಕುಂಬಯ್ಯ ತನ್ನ ಗುಡಚಾಪೆಯನ್ನೆಲ್ಲ ಕಿತ್ತು ಗುಡ್ಡದಾಚೆಗೆ ಹೋಗಿ ನೆಲೆಸಿದ. ಕೊಳೆತ ಪ್ರಾಣಿಗಳ ಗಬ್ಬು ವಾಸನೆಯಿಂದ ಮಾದಿಗರ ವಸತಿ ತುಂಬಿಕೊಂಡಿದ್ದರೆ ಸ್ವಂತಕ್ಕೆ ಅಭಿಮಾನದಿಂದ ಕೃಷ್ಣಗೊಲ್ಲರೆಂದು ಕರೆದುಕೊಳ್ಳುತ್ತಿದ್ದ ಆ ಗಾರುಡಿಗರಿಗೆ ಹೊಟ್ಟೆಪಾಡಿಗೆ ಹಗ್ಗ ಹೆಣೆಯುವ ಕೆಲಸವೇ ಮುಖ್ಯ ಕಸುಬಾಗಿತ್ತು.

ಇದು ರಸ್ತೆಯ ಮೇಲೆ ಹೊಟ್ಟೆಯೊಡೆದು ಚೆಲ್ಲಾಪಿಲ್ಲಿಯಾಗಿ ಬಿದ್ದ ನಾಯಿಯ ಕರುಳಿನಂತೆ ಕಾಣಿಸುತ್ತಿತ್ತು. ಮೇಲಾಗಿ ಹಾವು-ಹುಳು-ಹುಪ್ಪಡಿ ಪ್ರದರ್ಶಿಸುತ್ತ ಅಲೆದಾಡುವುದಕ್ಕಿಂತ ಜಗತ್ತಿನಲ್ಲಿ ಬೇರಿನ್ನಾವ ಒಳ್ಳೆಯ ಕೆಲಸವಿದೆ ಎಂದು ಆ ಮಾದಿಗರ ಹೆಂಗಸರೂ ಸ್ಪಷ್ಟವಾಗಿ ಮಾತಾಡಿ ತೋರಿಸುತ್ತಿದ್ದರು ಮತ್ತು ಯಾವುದಕ್ಕೂ ನಾಚದ ದಷ್ಟಪುಷ್ಟವಾದ ಹೆಂಗ

ಸರು ತಮ್ಮ ಸರಕು ಬದುಕು ನೋಡಿ ನಾಚುತ್ತಿದ್ದರು. ಗೊಲ್ಲ ಹೆಂಗಸರು ಚಿಗರೆಯ ಚರ್ಮ ಸುತ್ತಿದ ಬುಟ್ಟಿಯನ್ನು ಹೊತ್ತು, "ಔಸ್ದಿ ಔಸ್ದಿ", ಎಂದು ಕೂಗುತ್ತ ತಿರುಗುತ್ತಾರೆ. ಭೋಳೆ ಸ್ವಭಾವದ ಹೆಂಗಸರಾರಾದರೂ ಕಣ್ಣಿಗೆ ಬಿದ್ದರೆ ಸಾಕು, ತಕ್ಷಣ ಅವರ ಮುಂದೆ ಕುಳಿತು, "ಏಳೇ ತಿಂಗಳಲ್ಲಿ ಎಮ್ಮೆ ಕರು ಹಾಕುತ್ತದೆ, ಮಗಳಿಗೆ ಒಳ್ಳೆ ಗಂಡ ಸಿಗುತ್ತಾನೆ, ನೀವು ಗಂಡಾಂತರದಿಂದ ಪಾರಾಗುತ್ತೀರಿ, ಗಂಡ ನೀವು ಹೇಳಿದ ಹಾಗೆ ಕೇಳುವ ನಾಯಿಯಾಗುತ್ತಾನೆ" ಎಂದೆಲ್ಲ ಕಣಿ ಹೇಳಿ, "ಎಲ್ಲಮ್ಮನಿಗೆ ಹತ್ತುಪೈಸೆ ಕಾಣಿಕೆ ಹಾಕಿ, ತೆಂಗಿನಕಾಯಿ ಕೊಡಿ, ಖಣಕೊಡಿ ನಿಮಗೆ ಒಳ್ಳೆಯದಾಗಲೆಂದು ದೇವರಲ್ಲಿ ಬೇಡಿಕೊಳ್ಳುತ್ತೇನೆ. ಸ್ವತಃ ಎಲ್ಲಮ್ಮ ಗುಡ್ಡಕ್ಕೆ ಹೋಗುತ್ತೇನೆ, ಅದಕ್ಕೂ ಒಂದು ರೂಪಾಯಿ ಕೊಡಿ" ಎಂದೆಲ್ಲ ಹೊಗಳತೊಡಗುತ್ತಾರೆ. ಆದರೆ ಅವರಲ್ಲಿ ಬಹಳಷ್ಟು ಹೆಂಗಸರಿಗೆ ಎಲ್ಲಮ್ಮನ ಗುಡ್ಡ ಎಲ್ಲಿದೆ ಎನ್ನುವದೇ ಗೊತ್ತಿರುವುದಿಲ್ಲ. ಆದರೂ ಅವರು ಅನೇಕ ಸಲ ಗಂಡಸರಿಗಿಂತ ಹೆಚ್ಚು ಹಣ ಗಳಿಸುತ್ತಾರೆ.

ಆದರೆ ಈ ಎರಡೂ ಪಂಗಡದವರು ಸಾಕಿದ ನಾಯಿಗಳಿಗೆ ಮಾತ್ರ ಯಾವ ಭೇದ ಭಾವವೂ ಇರಲಿಲ್ಲ. ರಾತ್ರಿ ರಸ್ತೆಯ ಮೇಲೆ ಯಾವುದೇ ಚಕ್ಕಡಿ ಹೊರಟರೆ ಸಾಕು. ಅವುಗಳೆಲ್ಲ ಒಂದಾಗಿ ಬೊಗಳುತ್ತ ಹಿಂಬಾಲಿಸುತ್ತಿದ್ದವು. ಕೆರೆಯಾಚೆಗಿರುವ ರಾಮನಳ್ಳಿಯ ನಾಯಿಗಳ ಬೊಗಳುವಿಕೆಗೆ ಆವೇಶದಿಂದ ಉತ್ತರಿಸುತ್ತಿದ್ದವು ಮತ್ತು ಪಂಗಡದ ಭೇದವನ್ನೂ ಪರಿಗಣಿಸದೇ ಪ್ರತಿವರ್ಷ ಮರಿಗಳನ್ನು ತಪ್ಪದೇ ಹುಟ್ಟಿಸುತ್ತಿದ್ದವು.

ವಸತಿ ಬಿಟ್ಟು ನಾಲ್ಕೈದು ಮೈಲುಗಳವರೆಗೆ ನಡೆಯಬೇಕಾಗುತ್ತಿದ್ದುದರಿಂದ ರವಿವಾರ ದಿನ ದಾನಯ್ಯ ಊರ ಸನಿಹದಲ್ಲಿದ್ದ ಕೆರೆ ಕಂಚಿನಂತೆ ಹೊಳೆಯುವ ಕಾಲಕ್ಕೆ ಸರಿಯಾಗಿ ನಗರಕ್ಕೆ ಹೊರಡುತ್ತಿದ್ದ. ಅಷ್ಟರಲ್ಲಿ ಬಿಸಿಲೂ ಏರುತ್ತಿತ್ತು. ಕೆದರಿದ ತಲೆಯಂತೆ ಕಾಣುವ ರುಮಾಲು, ಮೊಣಕಾಲಿನವರೆಗೆ ಚಾಚಿಕೊಂಡ ಕೋಟು, ಲಂಗೋಟಿ ಬಿಟ್ಟರೆ ಬೇರೆ ಯಾವ ಬಟ್ಟೆಯೂ ಅವನ ದೇಹದ ಮೇಲಿ



ರುಷ್ರವನ್ನು ಯಾರೂ ಕಂಡಿಲ್ಲ. ಇವನಿಗೆ ಇಂಥದೇ ಹಳೆಯ ಕೋಟು ಕೊಡುವ ವಕೀಲ ಯಾರು ಎನ್ನುವುದೂ ತಿಳಿದಿಲ್ಲ. ಆದರೆ 'ನಾಗಪ್ಪ, ನಾಗಪ್ಪ' ಎಂದು ಚೀರು ಧ್ವನಿಯಲ್ಲಿ ಕೂಗುತ್ತ ಗಲ್ಲಿ ಹೊಕ್ಕನೆಂದರೆ ಸಾಕು, ಆತನ ಹಿಂದೆ ಮಕ್ಕಳ ಹಿಂಡೇ ನೆರೆಯುತ್ತಿತ್ತು. ಇದೆಂಥ ಮಕ್ಕಳ ಗದ್ದಲ! ಎನ್ನುತ್ತ ಹಿರಿಯರೂ ಬಂದು ಸೇರುತ್ತಿದ್ದರು. ನಂತರ ಹೆಂಗಸರೂ ಬಂದು ಹೊಸ್ತಿಲಲ್ಲಿ ನಿಲ್ಲುತ್ತಿದ್ದರು. ದಾನಯ್ಯ ಆಗಾಗ ಮಕ್ಕಳಿಗೆ ಜೇನುಗೂಡು, ಹಾವಿನ ಚರ್ಮ ಕೊಡುತ್ತಿದ್ದ. ಹೆಣ್ಣುಮಕ್ಕಳಂತೂ ಗುಂಜಿ ಅಥವಾ ಗಜಗಿನಕಾಯಿ ಸಿಕ್ಕಿದರೆ ಸಾಕು, ಕುಣಿದು ಕುಪ್ಪಳಿಸುತ್ತಿದ್ದರು. ಒಂದೆರಡು ಕಡೆ ಸೀಗೇಕಾಯಿ ಅಥವಾ ಅಂಟವಾಳಕಾಯಿ ಕೊಟ್ಟರೆ ಅವನಿಗೆ ಹಳೇ ಬಟ್ಟೆ ಮತ್ತು ಹೊಟ್ಟೆ ತುಂಬ ಅನ್ನ ಸಿಗುತ್ತಿತ್ತು.

ಕೇವಲ ಇದಕ್ಕಷ್ಟೇ ಮಕ್ಕಳು ದಾನಯ್ಯ ನನ್ನು ಹಿಂಬಾಲಿಸುತ್ತಿರಲಿಲ್ಲ. ಹಾಗೆ ನೋಡಿ ದರೆ ಬುಟ್ಟಿ ತರುವವರ ಸಂಖ್ಯೆಯೇನೂ ಕಡಿಮೆಯಾಗಿರಲಿಲ್ಲ. ಆದರೆ ದಾನಯ್ಯನ ಹಾವೆಂದರೆ ಸಾಕು, ಏನೋ ಭಯ, ಅಷ್ಟೇ ಆಕರ್ಷಣೆ. ಏಕೆಂದರೆ ಅವನು ಕೇವಲ ನಾಗ ರಹಾವನ್ನಷ್ಟೇ ತೋರಿಸುತ್ತಿರಲಿಲ್ಲ. ಅವನ ಹತ್ತಿರ ಮತ್ತೆ ಬೇರೆ ಬೇರೆ ಬುಟ್ಟಿಗಳೂ ಇದ್ದವು. ಒಮ್ಮೊಮ್ಮೆ ಬಾಯಿಕಟ್ಟಿದ ಗೋಣಿ ಚೀಲವೂ ಇರುತ್ತಿತ್ತು. ಇಂದೇನೂ ಹೊರಗೆ ತೆಗೆಯುತ್ತಾನೆ ಎಂದು ಮಕ್ಕಳು ಉಸಿರು ಬಿಗಿ ಹಿಡಿದು ದಿಟ್ಟಿಸುತ್ತಿದ್ದರು. ಒಮ್ಮೆ ದಾನಯ್ಯ ಚೌಕೋನಾಕಾರದ ಮಚ್ಚೆಯುಳ್ಳ ಅತಿದೊಡ್ಡ ನೀರು ಹಾವನ್ನು ಹೊರಗೆ ತೆಗೆದು ಅವರ ಮುಂದೆ ಚೆಲ್ಲಿದ. ಅದನ್ನು ನೋಡಿ ಹಿಂಜರಿದ ನಾಲ್ಕಾರು ಮಕ್ಕಳು ಒಬ್ಬರ ಮೇಲೊಬ್ಬರು ಬಿದ್ದವು. ಹಾವು ತಲೆಯೆತ್ತಿ ಅತ್ತಿತ್ತ ನೋಡಿ ಮತ್ತೆ ಸುಮ್ಮನೆ ಬಿದ್ದುಕೊಂಡಿತು. ದಾನಯ್ಯ ಮೂರುನಾಲ್ಕು ಸಲ ಕಾಲಿನಿಂದ ಅದನ್ನು ನೂಕಿದ. ಮಾಸ್ತರನಂತೂ ಕೋಲಿನಿಂದಲೇ ಚುಚ್ಚಿದ. ಒಬ್ಬ ಹುಡುಗ ಧೈರ್ಯದಿಂದ ಕಾಗದಮುಂಡೆ ಮಾಡಿ ಅದರ ಬಾಲದ ಮೇಲೆ ಒಗೆದ. ಆದರೆ ಅದು ಮಾತ್ರ ನಿರ್ವಿಕಾರವಾಗಿಯೇ ಬಿದ್ದುಕೊಂಡಿತ್ತು.

ಆನಂತರ ಮಕ್ಕಳ ಲಕ್ಷ್ಯ ಕೋನಾಕಾರದ ತಲೆಯುಳ್ಳ, ಚುರುಕಾಗಿ ಚಲಿಸುವ ಹಾವಿನ ಕಡೆಗೆ ಹೋಯಿತು. ಸ್ವಲ್ಪ ಹೊತ್ತಿನ ಬಳಿಕ ನೋಡಿದರೆ ನೀರುಹಾವು ನಾಪತ್ತೆಯಾಗಿತ್ತು! ಮಕ್ಕಳು ಪೌಹಾರಿ ಚದುರಿದರೆ, ಅಕ್ಕಪಕ್ಕದಲ್ಲಿದ್ದ ಹೆಂಗಸರು ಮಕ್ಕಳನ್ನೆತ್ತಿಕೊಂಡು ಶಾಲೆಯ ಕಟ್ಟೆಯನ್ನೇರಿದರು. ಆದರೆ ದಾನಯ್ಯ ಮಾತ್ರ ಶಾಂತಚಿತ್ತನಾಗಿ ಗಿಡುಗದ ರೆಕ್ಕೆಯಂತಹ ಕೋಟು ಅಲುಗಾಡಿಸುತ್ತ ಸುತ್ತಲೂ ಸುತ್ತಾಡಿ, ಕೊನೆಗೆ ಸೀತಾರಾಮನ ಅಂಗಡಿಯ ಹಲಗೆಯ ಕೆಳಗೆ ಕೈಹಾಕಿ, ಹಾವನ್ನು ಹೊರ ತೆಗೆದು ಅದನ್ನು ಚೀಲದಲ್ಲಿ ತುರುಕಿದ. ಒಮ್ಮೆ ಆತ ಬಲಿಷ್ಠವಾದ ಉಡವನ್ನು ಹಿಡಿದು ತಂದು ಅದು ನಾಗರಹಾವಿನ ತಾಯಿಯೆಂದು ಹೇಳುತ್ತ ಎಲ್ಲರಿಂದ ಏರಡರಷ್ಟು ಹಣ ಸಂಗ್ರಹಿಸಿದ. ಆದರೆ ಜನ ಮಾತ್ರ ಅವನ ನಾಗವನ್ನು ನೋಡುವುದಕ್ಕಾಗಿಯೇ ಗುಂಪುಗೂಡುತ್ತಿದ್ದರು. ಅವನು ಅರಿಶಿಣ ಕುಂಕುಮ ಮತ್ತು ಸುಣ್ಣದಗೆರೆ ಎಳೆದು ಶೃಂಗರಿಸಿದ ಬುಟ್ಟಿ ತೆರೆದರೆ ಸಾಕು, ಅದರೊಳಗಿನಿಂದ ಮಿರಿ ಮಿರಿ ಮಿಂಚುವ ಕಪ್ಪು ಅಥವಾ ಕೇಸರಿ ಬಣ್ಣದ ನಾಗರಹಾವು ಸರಕ್ಕನೆ ಹೊರಬರುತ್ತಿತ್ತು. ಅದರ ಮುಂದೆ ಉಳಿದ ಹಾವುಗಳು ಎರೆಹುಳದಂತೆ ಕಾಣಸುತ್ತಿದ್ದವು.

ಅನಂತರ ದಾನಯ್ಯನ ಬಾಯಿ ಬಡಬಡಿಸುತ್ತಿದ್ದರೂ ಆತನ ಒಂದು ಕೈ ಮಾತ್ರ ಸತತವಾಗಿ ನಾಗರಹಾವನ್ನು ನಿಯಂತ್ರಿಸುವುದರಲ್ಲಿ ತೊಡಗಿರುತ್ತಿತ್ತು. ಇಂಥ ಕಾಲಕ್ಕೆ ಆತನ

ಬೆರಳು ಸ್ವತಂತ್ರವಾಗಿದ್ದಂತೆ ಚಲಿಸುತ್ತಿತ್ತು. ಇಡೀ ಕೈ ಒಂದು ನಾಗರ ಹಾವಿನ ಹೆಡೆಯಂತೆ ಎರಗುತ್ತಿತ್ತು. ಬಾಲಹಿಡಿದು ಎಳೆದಾಗ ಅದು ದಾನಯ್ಯನ ಕೋಲಿಗಿಂತಲೂ ಉದ್ದವಾಗಿರುವುದನ್ನು ಕಾಣಬಹುದಾಗಿತ್ತು. ತಕ್ಷಣ ಅದು ಹೊರಳಿ ಬಿಚ್ಚಿದ ಹೆಡೆಯಲ್ಲಿ ಒಂದು ಮರದಷ್ಟು ಜೋಳ ಸಹಜವಾಗಿ ಹಿಡಿಸುತ್ತಿತ್ತು. ಮಾಸ್ತರನೊಬ್ಬ ವಿನೋದದಿಂದ, "ಅಲ್ಲಯ್ಯ ನೀನು ಈ ನಾಗವನ್ನು ವಿದೇಶದಿಂದ ತರಿಸುತ್ತಿಯೋ ಹೇಗೆ? ಪಕ್ಕಾ ಐಸಿಯೆಸ್‌ನಂತೆ ಕಾಣಿಸುತ್ತದಲ್ಲ, ಉಳಿದವರ ಹಾವು ಮಾತ್ರ ಕ್ಷುದ್ರ ಜಂತುವಿನಂತಿವೆ," ಎಂದಾಗ ಹಾವಿನೊಂದಿಗೆ ಆಟವಾಡುತ್ತಿದ್ದ ಕೈ ನಿಲ್ಲಿಸದೆ ದಾನಯ್ಯ ನಕ್ಕ. ಆತ ಬಹಳೇ ಖುಷಿಗೊಂಡಿರಬೇಕು. ಯಾಕೆಂದರೆ ಹಾವನ್ನೆತ್ತಿ ಕೊರಳಲ್ಲಿ ಧರಿಸಿದ ಆತ ಹೇಳಿದ, "ರಾಯರೆ ಅದಕ್ಕೇನು ಮುತ್ತು ರತ್ನ ತಿನ್ನಿಸಬೇಕೆ? ಆದರೆ ಪ್ರಾಣಿಗಳು ಕೇವಲ ತಿನ್ನೋದರಿಂದಲೇ ಬದುಕೋದಿಲ್ಲ. ಅವನ್ನು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತಲೂ ಹೆಚ್ಚಾಗಿ ಪ್ರೀತಿಸಬೇಕು. ನಾಗರಹಾವು ನಮ್ಮ ಹೊಟ್ಟೆ, ನಮ್ಮ ದೇವರು. ಒಂದು ಮಗುವನ್ನು ಬೆಳೆಸೋದು ಸುಲಭ, ಆದರೆ ಪ್ರಾಣಿಯನ್ನು ಸಾಕೋದು ಮಾತ್ರ ತುಂಬ ಕಠಿಣ. ನಾನು ನಾಗರಹಾವು ಹಿಡಿದೇ ಹುಟ್ಟಿದ್ದೇನೆ ಅದನ್ನು ಕೈಲಿ ಹಿಡಿದೇ ಸಾಯುತ್ತೇನೆ." ಕೊರಳಿನಿಂದ ಇಳಿದು ಕೋಟಿನೊಳಗೆ ಸೇರಿ ಹೊಟ್ಟೆಯ ಮೇಲೆ ಬರುತ್ತಿರುವ ಹಾವನ್ನು ಮಕ್ಕಳು ಕಣ್ಣು ಅಗಲಿಸಿ ನೋಡುತ್ತಿದ್ದವು. ಆದರೆ ಆ ರಾತ್ರಿ ಮಾತ್ರ ಒಂದೆರಡು ಮಕ್ಕಳು ಕಿರಿಚುತ್ತ ಏಳುತ್ತಿದ್ದವು.

ಇಂದು ಬರೀ ರವಿವಾರ ಅಷ್ಟೇ ಅಲ್ಲ, ಜೊತೆಗೆ ನಾಗಪಂಚಮಿಯೂ ಇತ್ತು. ಈ ದಿನ ಹೆಂಗಸರು ಹಾವಿನ ಪೂಜೆ ಮಾಡುತ್ತಾರೆ. ದಾನಯ್ಯನ ಅಲ್ಯುಮಿನಿಯಂ ಪಾತ್ರೆಯಲ್ಲಿ ಹಾಲು ಸುರಿಯುತ್ತಾರೆ. ಅನಂತರ ಅವನ ಎರಡೂ ಜೋಳಿಗೆಯು ತುಂಬ ಅನ್ನ ಸಂಗ್ರಹವಾಗುತ್ತದೆ. ಈ ಎರಡು ದಿನಗಳ ಗಳಿಕೆ ಮೂರುನಾಲ್ಕು ತಿಂಗಳು ಸಾಲುವಷ್ಟಿರುತ್ತವೆ. ಹಾಗೆ ನೋಡಿದರೆ ಗಂಡಸರಿಗಿಂತ ಹೆಂಗಸರೇ ಹೆಚ್ಚು ದಯಾಳುಗಳು. ಅವರು ಬಟ್ಟೆ-ಬರೆಯಷ್ಟೇ ಅಲ್ಲ, ಹಣವನ್ನು ಸುಲಭವಾಗಿ ದಾನ ಮಾಡುತ್ತಾರೆ. ಹಿಂಡು-ಹಿಂಡಾಗಿ ಬೆನ್ನು ಹತ್ತುತ್ತಿದ್ದ ಮಕ್ಕಳಿಂದ ಮಾತ್ರ ಯಾವ ಲಾಭವೂ ಇಲ್ಲ...

ಏಕೋ, ಇಂದು ದಾನಯ್ಯ ಬಹಳ ಬೇಗ ಹೊರಟ. ಆದರೆ ಸೇತುವೆಯ ಬಳಿಗೆ ಬಂದಾಗ ಆತನಿಗೆ ಜೋಳಿಗೆ ತುಂಬ ಭಾರವಾದಂತೆನಿಸಿತು. ಕಾಲು ಸೆಟೆದು ತೇಕು ಹತ್ತಿತು. ಆತ ಒಂದು ಮಾವಿನ ಮರದ ಕೆಳಗೆ ನಿಂತ. ಮೊದಲು ಇದೇ ಅಂತರವನ್ನು ಆತಸುಲಭವಾಗಿ ಕ್ರಮಿಸುತ್ತಿದ್ದ. ಒಮ್ಮೆ ದಾಪುಗಾಲು ಹಾಕುತ್ತ ಹೊರಟನೆಂದರೆ ಮುಕ್ಕಾಲುಗಂಟೆಯೊಳಗೆ ನಗರ ಸೇರುತ್ತಿದ್ದ. ಆನಂತರ ಸರಸರ ಏಳೆಂಟು ಗಲ್ಲಿಗಳಲ್ಲಿ ಹೊಕ್ಕು ಪ್ರತಿ ಮನೆಗೂ ಭೆಟ್ಟಿಕೊಟ್ಟು ತೃಪ್ತಿಯಿಂದ ಹಿಂತಿರುಗುತ್ತಿದ್ದ. ಆಗಿನ್ನೂ ಕೆರೆಯ ಮೇಲೆ ಸಂಜೆಯ ಹಳದಿ ನೀರು ಫಳಫಳಿಸುತ್ತಿತ್ತು. ಆದರೆ ಆ ಪರಿಸ್ಥಿತಿ ಇಂದು ಉಳಿದಿರಲಿಲ್ಲ. ಹಾವು ಪೊರೆ ಕಳಚಿದ ಮರುಕ್ಷಣ ಮತ್ತೆ ತಾರುಣ್ಯದಿಂದ ಓಡಾಡುತ್ತದೆ. ಆದರೆ ತಾನು ಚರ್ಮ ಸುಕ್ಕುಗಟ್ಟಿ ವರ್ಷದಿಂದ ವರ್ಷಕ್ಕೆ ಮುದುಕನಾಗುತ್ತಿದ್ದೇನೆ ಎಂದು ಅವನಿಗೆ ಅನಿಸಿತು. ಕಳೆದಕೆಲವು ವರ್ಷಗಳಿಂದ ಆತ ನಾಲ್ಕೈದು ಗಲ್ಲಿಗೆ ಹೋಗುವುದನ್ನೇ ಬಿಟ್ಟಿದ್ದ. ಜೋಪಡಿಗೆ ಹಿಂದಿರುಗುವಾಗ ಎಲುಬು ಚೂರುಚೂರಾದಂತೆ ಅನಿಸುತ್ತಿತ್ತು. ಆಗ ಆತ ಇಂದು ಜೋಪಡಿಗೆ ಹಿಂದಿರುಗಲೇಬಾರದು. ಇಲ್ಲೇ ಎಲ್ಲಾದರೂ ಕಾಲು ಚಾಚಿ ಬಿದ್ದುಕೊಳ್ಳಬೇಕು ಅಂದುಕೊಳ್ಳುತ್ತಿದ್ದ. ಆದರೆ ಸಂಜೆಯಾಗುತ್ತಲೇ ಕಳವಳಗೊಳ್ಳು

ತ್ತಿದ್ದ. ಸಮಾಕಾಲ ಗಾಳಿಯಾಡುತ್ತಿದ್ದ, ಎಲ್ಲಕ್ಕಿಂತಲೂ ಕೊನೆಯಲ್ಲಿದ್ದ ತನ್ನ ಜೋಪಡಿಯ ನೆನಪಾಗುತ್ತಿತ್ತು.ಅಲ್ಲಿ ಕಾಲಿಟ್ಟಾಗ ಕರಿಸಾಯಿಯ ಬೊಗಳುವಿಕೆ ಕಿವಿಗೆ ಬಿದ್ದರೆ ಸಾಕು, ಮನೆ ತಲುಪಿದ ಸಮಾಧಾನ ಸಿಗುತ್ತಿತ್ತು. ಮೊದಲಿನಂತೆ ಒಂದೇ ವೇಗದಲ್ಲಿ ಈ ಅಂತರವನ್ನು ಕ್ರಮಿಸುವ ಹಾಗಿರಲಿಲ್ಲ ಎಂಬ ಅರಿವು ಆತನಿಗಾಗಿತ್ತು.

ದಾನಯ್ಯ ಊರೊಳಗಿನ ಮೊದಲನೆಯ ಗಲ್ಲಿಗೆ ಬಂದ. ಆದರೆ ಆತನಿಗೊಮ್ಮೆಲೆ ನಾಚಿಕೆಯಾಗಿ ಮುಂದೆ ಹೋಗಬೇಕೋ ಬೇಡವೋ ತಿಳಿಯಲಿಲ್ಲ. ಆತ ಭಾರವಾದ ಬುಟ್ಟಿಯನ್ನು ಇನ್ನೊಂದು ಕೈಯಲ್ಲಿ ಹಿಡಿದ. ಬಳಿಕ ಗೆಜ್ಜೆಯ ಸಪ್ಪಳವಾಗಬಾರದೆಂದು ಕೋಲು ಹೆಗಲಿಗೇರಿಸಿ ಕಳ್ಳನಂತೆ ಗಲ್ಲಿಯಲ್ಲಿ ಪ್ರವೇಶಿಸಿದ. ಆದರೆ ಹುಡುಗನೊಬ್ಬನ ಕಣ್ಣಿಗೆ ಬಿದ್ದ. ಅವನು ಕೂಗುತ್ತಲೇ ಏಳೆಂಟು ಹುಡುಗರು ಓಡಿ ಬಂದರು. ದಾನಯ್ಯ ತಟ್ಟನೆ ಕುಸಿದು ಬೆನ್ನು ಬಗ್ಗಿಸಿ ಕೂತ.

"ಅಯ್ಯೋ, ಎಷ್ಟು ಹೊತ್ತಪ್ಪ ನಿನ್ನ ಹಾದಿ ಕಾಯೋದು? ನೀನು ಬರುತ್ತಿಯೆಂದು ಉಳಿದವರನ್ನು ಓಡಿಸಿದೆ. ಆದರೆ ನಿನಗೆ ಬರಲು ಹನ್ನೆರಡು ಹೊಡೆಯಿತು. ಪೂಜೆ ಮಾಡುವುದು ಯಾವಾಗ ಹೇಳು?" ಮಾಸ್ತರನ ಹೆಂಡತಿ ಕೆರಳಿ ಕೇಳಿದಳು. ದಾನಯ್ಯ ಬುಟ್ಟಿ ಕೆಳಗಿಟ್ಟು, ಗೋಣಿ ಕೆಳಗೆ ಹಾಕಿ, ಕುಳಿತು, ಜೋಳಿಗೆಯೊಳಗಿದ್ದ ಅಲ್ಯುಮಿನಿಯಂ ಪಾತ್ರೆ ಹೊರಗೆ ತೆಗೆದ ಮತ್ತು ಅರಳಿಗಾಗಿ ಹೊಲಸು ಬಟ್ಟೆ ಹಾಸಿದ. ಮಕ್ಕಳು ಅರಳು ಹಾಕಿದರು; ಯಾರೋ ಪಾತ್ರೆಯಲ್ಲಿ ಹಾಲು ಸುರಿದರು; ಮೂರು ನಾಲ್ಕು ನಾಣ್ಯಗಳೂ ಬಟ್ಟೆಯ ಮೇಲೆ ಬಿದ್ದವು. ಅಷ್ಟರಲ್ಲಿ ಓರ್ವ ಹೆಂಗಸು ಪೂಜೆಗಾಗಿ ಬಂದಳು. ಆಗ ದಾನಯ್ಯ ಆಕೆಗೆ ಬುಟ್ಟಿಯನ್ನೆ ಪೂಜಿಸುವಂತೆ ಸೂಚಿಸಿಧ. ಆಕೆ ತುಂಬ ಅವಸರದಲ್ಲಿದ್ದಳು. ಸ್ವಲ್ಪ ಅರಿಶಿಣ, ಕುಂಕುಮ ಹಾಕಿ, ಒಂದು ನಾಣ್ಯವನ್ನು ಬಟ್ಟೆಯ ಮೇಲೆ ಚೆಲ್ಲಿ ಹೊರಟುಹೋದಳು. ಆದರೆ ಮಾಸ್ತರನ ಹೆಂಡತಿ ಕೆರಳಿ, "ಯಾಕೆ ಸುಮ್ನೆ ಕೂತಿದ್ವಿ, ಬುಟ್ಟಿ ತೆರೆ," ಎಂದು ಗದರಿದಳು.

ದಾನಯ್ಯ ಕಂಪಿಸುವ ಕೈಯಿಂದ ಬುಟ್ಟಿ ತೆರೆದು ದೀನಸ್ವರದಲ್ಲಿ ಹೇಳಿದ, "ಅಮ್ಮಾ ಬಡವನ ಮೇಲೆ ಸಿಟ್ಟು ಮಾಡಬೇಡಿ. ಇಂದು ನನ್ನ ಹತ್ತಿರ ನಾಗರಹಾವಿಲ್ಲ"

ಹುಡುಗರಿಗೆ ಬರಿದಾದ ಬುಟ್ಟಿಯನ್ನು ನೋಡಿ ನಿರಾಶೆಯಾಯಿತು. ಮಾಸ್ತರನ ಹೆಂಡತಿ ಹೇಳಿದಳು, "ಹಾಳಾಗಿ ಹೋಗಲಿ! ಭರವಸೆಯ ಎಮ್ಮೆ ಕೋಣ ಈದಂತಾಯಿತು. ಹಬ್ಬದ ದಿನವೇ ಇಂಥ ನಾಟಕ ಮಾಡ್ತಾನಲ್ಲ ಇವನು! ಪೂಜೆಯ ಹಣ ಎತ್ತಿಕೊಳ್ಳುವುದಕ್ಕೆ ನಾಚಿಕೆಯಾಗೋದಿಲ್ಲವೇ? ನಾನು ಮೊದಲೇ ಪೂಜೆ ಮಾಡಿದ್ರೆ ಜೀವಂತ ನಾಗರಹಾವಾದ್ರೂ ಸಿಗುತ್ತಿತ್ತು."

ದಾನಯ್ಯ ನಿನ್ನೆ ರಾತ್ರಿಯಿಡೀ ಕೂತು ಕರಿಮಣ್ಣಿನ ನಾಗನನ್ನು ತಯಾರಿಸಿದ್ದ. ಅದಕ್ಕೆ ಒಂಭತ್ತು ಹೆಡೆಗಳಿದ್ದವು. ಕಣ್ಣಲ್ಲಿ ಗುಂಜಿ ಇತ್ತು. ದೇಹದ ಮೇಲೆ ಕುಸುಬೆಯ ಕಾಳು ಅಂಟಿಸಿ ಬುಟ್ಟಿಯಲ್ಲಿ ಮುಚ್ಚಿ ತಂದಿದ್ದ. ಮೊದಲು ಮೌನವಾಗಿ ದಿಟ್ಟಿಸುತ್ತಿದ್ದ ಹುಡುಗರು ಅನಂತರ ಕೆರಳಿದರು. ದಾನಯ್ಯ ಅವರತ್ತ ಕೆಂಗಣ್ಣು ಬೀರಿದ. ಆದರೂ ಅವರ ಸಿಟ್ಟು ಕರಗಲಿಲ್ಲ. ಒಬ್ಬಾತ ಅವನ ಪಾತ್ರೆ ಉರುಳಿಸಿದ ಮತ್ತು ಕಾಲಿನಿಂದ ಬಟ್ಟೆ ಹಿಡಿದು ಎಳೆದಾಗ ಅರಳು ನೆಲದ ಮೇಲೆ ಚೆಲ್ಲಿತು. ಆದರೆ ಇಷ್ಟರಿಂದಲೇ ಅವರಿಗೆ ತೃಪ್ತಿಯಾಗಲಿಲ್ಲ. ಅವರು ಬುಟ್ಟಿಯನ್ನೆತ್ತಿ ಬೀಸಿ ಒಗೆದರು. ಆಗ ಮಣ್ಣಿನ ಹಾವು ಮುರಿದು ಚೂರಾಯಿತು. "ಏ ಮುದುಕಪ್ಪ, ಮಣ್ಣಿನ ಹಾವು ತೋರಿಸಿ ಮೋಸ ಮಾಡಿ ಹಣ ಕಿತ್ಕೊಂಡ್ರೆ ಮಕ್ಕಳು ಸುಮ್ನಿರ್ತಾರೇನು? ಅದರ ಬದಲಿಗೆ

ನಿನ್ನ ಹತ್ತಿರ ಜೀವಂತ ನಾಗ ಇಲ್ಲವೆಂದು ಮೊದಲೇ ಹೇಳಬೇಕಾಗಿತ್ತು" ಮಾಸ್ತರ ಹೇಳಿದ.

"ರಾಯರೇ, ಯಾಕೆ ನನ್ನ ಹೊಟ್ಟೆ ಮೇಲೆ ಹೊಡೆಯುತ್ತೀರಿ? ಹಿಂದಿನ ರವಿವಾರ ನನ್ನ ಹತ್ತಿರ ಹಾವು ಇರಲಿಲ್ಲವೆ? ಇಷ್ಟು ವರ್ಷಗಳಲ್ಲಿ ಹೀಗೆಂದಾದರೂ ಮಾಡಿದ್ದೇನೆಯೆ? ಕೊನೆ ಗಳಿಗೆಗೆ ಹಾವು ಸತ್ತುಹೋಯ್ತಲ್ಲ. ಆ ಹುಚ್ಚು ಮುದುಕಿಯ ಬಾಯೊಳಗೆ ಮಣ್ಣು ಬೀಳಲಿ. ನಿನ್ನೆ ಸಾಯಂಕಾಲವೇ ಹೀಗಾಯ್ತಲ್ಲ," ದಾನಯ್ಯ ವ್ಯಾಕುಲತೆಯಿಂದ ಹೇಳಿದ.

ದಾನಯ್ಯನ ಹಾವು ಸತ್ತಿದ್ದು ಒಂದು ವಿಲಕ್ಷಣವಾದ ರೀತಿಯಲ್ಲಿ. ಹಿಂದಿನ ದಿನದ ಸಾಯಂಕಾಲ ಅದು ಸ್ವಲ್ಪ ಸುಸ್ತಾಯಿತು. ಹೀಗಾಗಿ ದಾನಯ್ಯ ಅದನ್ನು ಬುಟ್ಟಿಯಿಂದ ಹೊರ ತೆಗೆದ. ಅದೇ ಕಾಲಕ್ಕೆ ಕೆರೆಗೆ ಹೋಗಿದ್ದ ಆ ವಸತಿಯ ಹುಚ್ಚು ಮುದುಕಿ ಹಿಂದಿರುಗಿ ಬಂದಳು. ಸಂಬಂಧಿಕರಾರೂ ಈಗಿರಲಿಲ್ಲ. ಅಲ್ಲದೆ ಆಕೆಯ ಕಣ್ಣು ಹಾಳಾಗಿ ಈಗ ಹತ್ತಿಪ್ಪತ್ತು ವರ್ಷಗಳು ಗತಿಸಿದ್ದವು. ಒಂದು ದಿನ ಆಕೆಯ ಕನಸಿನಲ್ಲಿ ಕಂಬಳಿಯಂಥ ಜಡೆ ಕಾಣಿಸಿತು. ಅನಂತರ ಆಕೆ ಜೋಗತಿಯಾದಳು. ಆಮೇಲೆ ಮುಖಕ್ಕೆಲ್ಲ ಕುಂಕುಮ ಬಳಿದುಕೊಂಡು, ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ಅಮವಾಸ್ಯೆ-ಹುಣ್ಣಿಮೆಗೆ ತಪ್ಪದೆ, ಇಡೀ ರಾತ್ರಿ ಮೈಮೇಲೆ ಬಂದವಳಂತೆ ಕುಣಿಯತೊಡಗಿದಳು. ಇಂಥ ಸಂದರ್ಭದಲ್ಲಿ ದಾನಯ್ಯ ಎದುರಿಗೆ ಕಾಣಿಸಿದರೆ ಸಾಕು, ಆಕೆಗೆ ಏನಾಗುತ್ತಿತ್ತೋ ಯಾರಿಗೆ ಗೊತ್ತು, ಗಂಟಲು ಹರಿಯುವ ಹಾಗೆ ಕಿರುಚುತ್ತಿದ್ದಳು. ಹೀಗಾಗಿ ಆಕೆಯ ಮೈ ಮೇಲೆ ದೇವರು ಬಂದದ್ದು ಗೊತ್ತಾಗುತ್ತಲೇ ಆತ ಬಾಗಿಲು ಮುಚ್ಚಿ ಸುಮ್ಮನೆ ಮನೆಯೊಳಗೆ ಕುಳಿತುಬಿಡುತ್ತಿದ್ದ. ಅನಂತರ ಆಕೆ ಮೂರು ಕಲ್ಲುಗಳಿಗೆ ಎಣ್ಣೆ-ಭಂಡಾರ ಹಚ್ಚಿ ಪೂಜೆಯ ಬದಿಗಿಟ್ಟಳು. ತನ್ನ ಮೊದಲಿನ ಜೋಪಡಿ ಕಿತ್ತೊಯ್ದು ಬೇವಿನ ಮರದ ಕೆಳಗೆ ಕಟ್ಟಿಕೊಂಡಳು. ಆಮೇಲೆ ಆಕೆ ಕವಡೆಯ ಮಾಲೆ ಧರಿಸಿ, ಕವಡೆಯಂತೆ



ಕಣ್ಣುಬಿಟ್ಟು ಕುಳಿತುಕೊಳ್ಳಲಾರಂಭಿಸಿದಳು. ಕೆಲವೊಮ್ಮೆ ಆಕೆ ರಾತ್ರಿ ಹೊತ್ತು ಬೆಂಕಿ ಹೊತ್ತಿಸಿ ಭೂತದಂತೆ ದಿಟ್ಟಿಸುತ್ತ ಕುಳಿತುಕೊಳ್ಳುತ್ತಿದ್ದಳು. ಧಾರಾಕಾರವಾಗಿ ಮಳೆ ಸುರಿಯುತ್ತಿದ್ದಾಗ ಉಳಿದವರೆಲ್ಲ ಜೋಪಡಿ ಸೇರಿದರೆ, ಈಕೆ ಮಾತ್ರ ಕಟ್ಟಿಗೆ ಸಂಗ್ರಹಿಸಲು ಅಷ್ಟಾಪೂರದ ಗುಡ್ಡಕ್ಕೆ ಹೋಗುತ್ತಿದ್ದಳು. ಈಕೆಗೆ ನೀರು ತರಲು ಇಂಥದೇ ವೇಳೆ ಎಂಬುದಿರಲಿಲ್ಲ. ಈಗಾಕೆ ದೊಡ್ಡ ಮಡಕೆಯೊಂದನ್ನು ಸಂಭಾಳಿಸುತ್ತ ಹೇಗುಹೇಗೋ ಬರುತ್ತಿದ್ದಳು. ಇದೇ ಸಮಯಕ್ಕೆ ಸರಿಯಾಗಿ ನಾಗರಹಾವು ಆಕೆಯ ಕಾಲ ಬಳಿಗೆ ಬಂದಿತು. ಈ ಹುಚ್ಚು ಮುದುಕಿ ಯಾವ ಗುಂಗಿನಲ್ಲಿದ್ದಳೋ ಯಾರಿಗೆ ಗೊತ್ತು? ಆಕೆ ಒಮ್ಮೆಲೆ ಜೋರಾಗಿ ಕಿರುಚಿ, ತನ್ನ ಕೈಲಿದ್ದ ಮಡಕೆಯನ್ನು ಹಾವಿನ ಮೇಲೆ ಅಪ್ಪಳಿಸಿದಳು. ಹಸಿ ಕೆಸರಿನಲ್ಲಿ ತಲೆ ಜಜ್ಜಿದ ಹಾವು ಹದಿನೈದು ನಿಮಿಷ ವಿಲಿವಿಲಿ ಒದ್ದಾಡಿ, ಬಾಲ ಅಪ್ಪಳಿಸಿ ಕೊನೆಗೆ ಸ್ತಬ್ಧವಾಯಿತು. ಎದುರಿಗೆ ಸ್ವಲ್ಪ ಕೋಲು ಅಲ್ಲಾಡಿಸಿದರೂ ಸಾಕು, ಹೆಡೆಯೆತ್ತಿ ಎರಗುವ ಆ ಪ್ರಾಣಿಗೆ ಹೋರಾಡುವ ಅವಕಾಶವೇ ಸಿಗದೆ ಮುದ್ದೆಯಾಗಿ ಹೋಗಿತ್ತು. ಇದನ್ನು ಕಂಡು ಬಹಳ ಹೊತ್ತಿನವರೆಗೆ ದಾನಯ್ಯನ ಕಣ್ಣೀರು ಹಿಂಗಿರಲಿಲ್ಲ.

ಆದರೆ ಇದನ್ನೆಲ್ಲ ಹೇಳಲು ದಾನಯ್ಯನಿಗೆ ಅವಕಾಶವೇ ಸಿಗಲಿಲ್ಲ. ಈಗ ಮತ್ತಷ್ಟು ಕೆರಳಿದ ಮಕ್ಕಳು ಕಲ್ಲು, ಕೋಲು ಹುಡುಕುತ್ತಿದ್ದರು. ಸೀತಾರಾಮ ಅವನಿಗೆ ಹೇಳಿದ, "ದಾನಯ್ಯ, ಈಗ ಇಲ್ಲಿಂದ ಓಡು, ಇಲ್ಲದಿದ್ದರೆ ಮಕ್ಕಳು ನಿನ್ನ ಎಲುಬು ಪುಡಿ ಮಾಡದೇ ಬಿಡಲಿಕ್ಕಿಲ್ಲ!" ಆಯಾಸಗೊಂಡಿದ್ದ ದಾನಯ್ಯನ ಕಣ್ಣು ಒಮ್ಮೆಲೆ ಅರಳಿತು. ಅತ್ತಿತ್ತ ನೋಡಿದ. ಒಂದಿಬ್ಬರು ಗಿಡದ ರೆಂಬೆ ಮುರಿದು ಎಲೆ ಸವರಿ ತೆಗೆಯುತ್ತಿದ್ದರು. ದಾನಯ್ಯ ಲಗುಬಗೆಯಿಂದ ಮೇಲಕ್ಕೆದ್ದು, ಖಾಲಿಬುಟ್ಟಿಯನ್ನು ಜೋಳಿಗೆಗೆ ತುರುಕಿ, ಕಾಲಳೆಯುತ್ತ ಹೊರಟ. ಆತ ಪೂಜಾರಿಯ ಮನೆ ತನಕ ಹೋಗುವಷ್ಟರಲ್ಲಿ ಮೊದಲ ಕಲ್ಲು ಬಿತ್ತು. ಮಕ್ಕಳು ಸಾಕಷ್ಟು ಕೆರಳಿದ್ದವು. ಈಗ ರೊಯ್ಯೆಂದು ಕಹಿ ತೊಟ್ಟಿಲ ಕಾಯಿಗಳೂ ಅವನೆಡೆಗೆ ಬೀಳಲಾರಂಭಿಸಿದವು. ಆತ ಅವಸರದಿಂದ ದೇವಾಲಯದ ಪ್ರಾಕಾರ ದಾಟಿದ. ಅಷ್ಟರಲ್ಲಿ ಅಲ್ಲಿದ್ದ ನಾಯಿಗಳು ಬೊಗಳುತ್ತ ಅವನನ್ನು ಹಿಂಬಾಲಿಸಿದವು. ಆತ ಹೇಗೋ ಮುಖ್ಯ ರಸ್ತೆಗೆ ಬಂದು ತಲುಪಿದ. ಅಲ್ಲಿಂದ ವಸತಿ ತಲುಪಬೇಕಾದರೆ ಸಾಕಷ್ಟು ದೂರ ನಡೆಯಬೇಕಾಗಿತ್ತು. ಆದರೆ ಈಗ ಮಾತ್ರ ಕಲ್ಲಿನ ಅಂಜಿಕೆಯಿರಲಿಲ್ಲ. ಇಷ್ಟರವರೆಗೆ ವೇಗದಿಂದ ಚಲಿಸುತ್ತಿದ್ದ ಕಾಲು ಒಮ್ಮೆಲೆ ಸೋತು ಸಡಿಲುಗೊಂಡವು. ಆತ ತಟ್ಟನೆ ಕೆಳಗೆ ಕೂತ.

ಅಂತೂ ಆತ ವಸತಿಗೆ ಮರಳಿದ. ಬುಟ್ಟಿಯನ್ನು ಹೊರಗೆ ತೆಗೆದು, ನಿಂತಲ್ಲೇ ಜೋಳಿಗೆಯನ್ನು ಕೆಳಗೆ ಚೆಲ್ಲಿದ. ಆದರೆ ಎಂದಿನಂತೆ ಠಣ್ ಎಂದು ಸಪ್ಪಳ ಕೇಳಿಸಲಿಲ್ಲ. ಗಾಬರಿಯಿಂದ ಜೋಳಿಗೆ ತೆರೆದು ನೋಡಿದ. ಆತನ ಅಲ್ಯುಮಿನಿಯಂ ಪಾತ್ರೆ ನಾಪತ್ತೆಯಾಗಿತ್ತು.

ಈಗ ಏನು ಮಾಡಬೇಕೆನ್ನುವುದೇ ಆತನಿಗೆ ತಿಳಿಯಲಿಲ್ಲ. ಆತ ಅಲ್ಲೇ ಮೈಚಾಚಿ ಮಲಗಲು ಪ್ರಯತ್ನಿಸಿದ. ಆತನಿಗೆ ಸ್ವಲ್ಪ ಹೊತ್ತು ಚಡಪಡಿಕೆಯ ನಿದ್ದೆ ಹತ್ತಿದರೂ ಎದೆಯೊಳಗಿನ ಉಬ್ಬಸ ಮಾತ್ರ ಕಡಿಮೆಯಾಗಲಿಲ್ಲ ಮತ್ತು ಹಸಿವೆಯ ತೀವ್ರತೆಯೂ ಕಡಿಮೆಯಾಗಲಿಲ್ಲ.

ಆತ ಎದ್ದು ಕುಳಿತ. ಸೂರ್ಯಾಸ್ತದ ಸಮಯ. ಈಗ ವಸತಿಯಲ್ಲಿ ಬಹಳ ಗದ್ದಲವಿರುತ್ತಿತ್ತು. ಹೆಂಗಸರು ವಟವಟ ಮಾತಾಡುತ್ತ ಶೀಗೇಕಾಯಿ ಆರಿಸುತ್ತ, ಅರಿಷಿಣ ಬೇರು ಕುಟ್ಟುತ್ತ ಡಬ್ಬಿಯಲ್ಲಿ ತುಂಬಿಡುತ್ತಿದ್ದರು. ಗಂಡಸರು ಕವಡೆಯಾಟದಲ್ಲೋ ಸವೆದ ಎಲೆಗಳ ಇಸ್ಪೀಟಾಟದಲ್ಲೋ ಮಗ್ನರಾಗಿರುತ್ತಿದ್ದರು. ಹೆಂಗಸರು ಆಟಕ್ಕೆ ಹಣ ಕೊಡಲಿಲ್ಲವೆಂದು

ಮೂರು ನಾಲ್ಕು ಮಡಕೆಗಳನ್ನಾದರೂ ಒಡೆಯುತ್ತಿದ್ದರು. ಕೆರಳಿದ ಹೆಂಡತಿ ಗಂಡನ ಬೆನ್ನಿಗೆ ಕೋಲಿನಿಂದ ಪ್ರಹಾರ ಮಾಡುತ್ತಿದ್ದಳು. ಇದನ್ನು ಕಂಡು ನಾಯಿಗಳು ಹುಮ್ಮಸದಿಂದ ಬೊಗಳುತ್ತಿದ್ದವು. ಆದರೆ ಇಂದು ಮಾತ್ರ ಎಲ್ಲ ಬದಲಾದಂತೆ ಕಾಣಿಸುತ್ತಿತ್ತು. ಅವಸರದಲ್ಲಿದ್ದ ಹೆಂಗಸರು ನಗುನಗುತ್ತ ಆಲದಮರದ ಕಡೆಗೆ ಹೋಗಿ ಬರುತ್ತಿದ್ದರು. ದಾನಯ್ಯ ಜೋಪಡಿಯ ಹೊರಗೆ ಬಂದು ಕುಳಿತ. ಮತ್ತು ಯಾರನ್ನಾದರೂ ಕೇಳಬೇಕೆಂದು ಅತ್ತಿತ್ತ ನೋಡಿದ. ಆದರೆ ಏಕೋ ಸುಮ್ಮನಾದ. ನೀಳವಾಗಿ ಉಸಿರೆಳೆದು ಆಲದ ಮರದತ್ತ ದಿಟ್ಟಿಸಿ ನೋಡಿದ. ತನ್ನ ನಿದ್ದೆಯ ಮಂಪರು ಇನ್ನೂ ಇಳಿದಿಲ್ಲ ಎಂದೆನಿಸಿತು.

ರುಚಿಕರವಾದ ಉಗ್ರವಾಸನೆ ಗಾಳಿಯಲ್ಲಿ ತುಂಬಿಕೊಂಡಿತ್ತು. ದಾನಯ್ಯ ತಟ್ಟನೆ ಎದ್ದು ನಿಂತ. ಮೊಣಕಾಲವರೆಗೆ ಕೋಟು ಎಳೆದುಕೊಂಡು ಆಲದ ಮರದ ಕಡೆಗೆ ಹೊರಟ. ಅಲ್ಲಿ ಸಾಕಷ್ಟು ಗಂಡಸರು ಚಾಪೆ ಹಾಸಿ ಕೂತಿದ್ದರು. ಆಲದ ಮರದ ಕೆಳಗೊಂದು ತಗ್ಗನ್ನು ತೋಡಲಾಗಿತ್ತು. ಅಲ್ಲಿಂದ ದಟ್ಟವಾದ ಹೊಗೆ ಮೇಲಕ್ಕೇಳುತ್ತಿತ್ತು. ಕಣ್ಣು ಕೆಂಪಾದ ಸಿದ್ರಾಮ ಒಲೆಯೊಳಗೆ ಕಟ್ಟಿಗೆ ತುರುಕುತ್ತಿದ್ದ. ಕೆನ್ನಾಲಿಗೆ ಹೊರಗೆ ಚಾಚುತ್ತಿದ್ದ ಆ ಜ್ವಾಲೆಯ ಮೇಲಿನ ದೊಡ್ಡ ಪಾತ್ರೆಯಲ್ಲಿ ಮಾಂಸದ ತುಣುಕುಗಳು ಬೇಯುತ್ತಿದ್ದವು. ದಾನಯ್ಯ ಅಚ್ಚರಿಯಿಂದ ಹುಬ್ಬೇರಿಸಿ, ದೇಹ ಮುದುಡಿಸಿ ಕೇಳಿದ, "ಸಿದ್ರಾಮ, ಇದೆಲ್ಲಿಯ ಮಾಂಸ?"

ಸಿದ್ರಾಮ ಕೂದಲಿಗೆ ಮೆತ್ತಿಕೊಂಡ ಬೂದಿಯನ್ನು ಝಾಡಿಸುತ್ತ ಗುಂಪಿನೆದುರಿಗೆ ಕುಳಿತ. ಅವನು ಉಳಿದವರ ಕಡೆ ನೋಡಿ, ಕಣ್ಣು ಮಿಟುಕಿಸಿ ಹೇಳಿದ, "ಅಜ್ಜಾ, ಇದೆಲ್ಲ ಉಸಾಬರಿ ನಿನಗೆ ಯಾಕೆ ಬೇಕು! ತನೆ ಕಂಡ ತಕ್ಷಣ ಮುರಿದು ತಿನ್ನಬೇಕು. ವಿನಾ ಅದು ಯಾರ ಹೊಲದ್ದೆಂದು ಕೇಳಬಾರದು. ಈ ಶಿರಪ್ಪಾ, ವಂಜಾ, ಇವರೆಲ್ಲ ನಿನ್ನೆ ಒಡ್ಡಿನ ಹತ್ತಿರ ಹೋಗಿದ್ದರು. ಹಿಂದಿರುಗಿ ಬರುವಾಗ ವಡ್ಡರ ಹಂದಿ ಕಾಣಿಸಿತು. ತಕ್ಷಣ ಈ ಹುಡುಗರೆಲ್ಲ ಅದರ ಬೆನ್ನು ಹತ್ತಬೇಕೇ? ಬೇಡ ಎಂದರೆ ಮಕ್ಕಳು ಕೇಳಬೇಕಲ್ಲ? ಹಂದಿಗೆ ನಡೆಯುವ ತೊಂದರೆ ಬೇಡವೆಂದು ಕೈಕಾಲು ಕಟ್ಟಿದರು. ಕೂಗಾಡೋ ತೊಂದರೆ ಬೇಡವೆಂದು ಬಾಯಿ ಕಟ್ಟಿದರು ಮತ್ತು ಗೋಣಿಚೀಲದಲ್ಲಿ ಹಾಕಿ ಇಲ್ಲಿಗೆ ಹೊತ್ತು ತಂದರು. ಇಷ್ಟು ಸಂಭ್ರಮದಲ್ಲಿ ಮನೆಗೆ ಬಂದ ಮೇಲೆ ಅತಿಥಿಗೆ ಆತಿಥ್ಯ ಮಾಡಬೇಡವೆ?"

ಈ ಮಾತಿಗೆ ಎಲ್ಲಾ ನಕ್ಕರು. ದಾನಯ್ಯನೂ ಮಧ್ಯಾಹ್ನದ ಸಂಭ್ರಮದಲ್ಲಿ ಘಟನೆ ಮರೆತು ನೀಳವಾಗಿ ಉಸಿರೆಳೆದುಕೊಂಡ.

"ಆದ್ರೆ ನಮ್ಮ ಗೋವಿಂದ ಮಾತ್ರ ತಪ್ಪಿಸಿಕೊಂಡನಲ್ಲ," ತಲೆಯಲುಗಿಸುತ್ತ ಶಿರಪ್ಪಾ ಕೇಳಿದ.

"ಒಳ್ಳೆದಾಯ್ತು ಬಿಡು, ಯಾಕೆಂದ್ರೆ ಅವನ ಮುಂದೆ ಬೇಕಾದ್ರೆ ಆನೆಯನ್ನೆ ತಂದಿಟ್ಟರೂ, ಅದನ್ನೆಲ್ಲ ತಿಂದು ಮುಗಿಸಿ, ಹಾಂ, ಇನ್ನೂ ಊಟಕ್ಕೆ ಬಡಿಸಿರಿ ಎಂದು ಹೇಳುವ ಮನುಷ್ಯ ಅವನು!" ಸಿದ್ರಾಮ ಹೇಳಿದ.

"ಗೋವಿಂದನಿಗೆ ಏನಾಯ್ತು? ಎಲ್ಲಿದ್ದಾನೆ ಅವನು?"

"ಏನಂತ ಹೇಳೋದಜ್ಜ, ಅದೊಂದು ದೊಡ್ಡ ರಾಮಾಯಣಾನೇ. ಆ ಹುಡ್ಗ ಮೊದಲಿನಿಂದ್ಲೂ ಹೀಗೇ. ಬಿಸಿಲಿಗೆ ಒಣಹಾಕಿದ ಕಂಬಳೀನೂ ಬಿಡೋದಿಲ್ಲ. ಯಾರ ಮನೆ, ಏನು ಅಂತ ನೋಡಬೇಡವೇ? ಆ ಮನೆಯೋ ಖಾಕಿ ಡ್ರೆಸ್ಸಿನವರ್ದು. ಈಗ ಪೊಲೀಸ್ ಸ್ಟೇಷನ್ನಿನಲ್ಲಿ ಹೋಗಿ ಕೂತಿದ್ದಾನೆ. ಇನ್ನೂ ನಾಲ್ಕು ದಿವಸವಾದರೂ ಅಲ್ಲಿಂದ ಪಾರಾಗೋ ಹಾಗಿಲ್ಲ," ಸಿದ್ರಾಮ ಉತ್ತರಿಸಿದ.

ದಾನಯ್ಯ ಕ್ಷಣಕಾಲ ಮಾಂಸದ ವಾಸನೆಯನ್ನೇ ಮರೆತ. ಇಡೀ ವಸತಿಯಲ್ಲಿ ಈಗ

## ಪುಸ್ತಕ ವಿಭಾಗ

ಗೋವಿಂದನೊಬ್ಬನೇ ಹಾವಾಡಿಸುವ ವ್ಯಕ್ತಿಯಾಗಿ ಉಳಿದಿದ್ದ. ಉಳಿದವರಿಗೆಲ್ಲ ದುರ್ದಶೆ ಪ್ರಾರಂಭವಾಗಿತ್ತು. ಉಳಿದವರು ಈಗ ಕತ್ತೆಯಂತೆ ದುಡಿದು, ಹಮಾಲಿ ಮಾಡುತ್ತ ಹೇಗೋ ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ಗೋವಿಂದನ ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಜೋಪಡಿಯಲ್ಲಿ ಎರಡೆರಡು ಬುಟ್ಟಿಗಳಿವೆ. ಇನ್ನು ನಾಲ್ಕು ದಿನ ಆ ಹಾವುಗಳಿಗೆ ಹೊಟ್ಟೆ ಹಾಕೋರು ಯಾರೋ ದೇವರಿಗೇ ಗೊತ್ತು. ಅವನ ಜೋಪಡಿಯಲ್ಲಿ ಆಹಾರ ಹಾಕುವವರು ಯಾರೂ ಇಲ್ಲ. ಮತ್ತು ತನ್ನ ಜೋಪಡಿಯಲ್ಲಿ ಆಹಾರ ಹಾಕಿದ್ದನ್ನು ತಿನ್ನಲು ಹಾವುಗಳಿಲ್ಲ....

ದಾನಯ್ಯ ಮೊಣಕಾಲು ತಿಕ್ಕುತ್ತ ಎದ್ದು ನಿಂತ. ಬಹುಶಃ ಸಾಕಷ್ಟು ರಾತ್ರಿಯಾದ ಮೇಲೆಯೇ ಎಲೆ ಹಾಕುವ ಸಾಧ್ಯತೆಯಿತ್ತು. ಅಲ್ಲದೆ ಈ ತರುಣರ ಕುಡಿತದ ಕಾರ್ಯಕ್ರಮವೂ ಇದ್ದಿರಬೇಕು. ಅಂದ ಮೇಲೆ ಕೇಳಬೇಕೆ? ಆತ ಹಿಂದಿರುಗಿದಾಗ ಇಡೀ ವಸತಿ ಸ್ತಬ್ಧಗೊಂಡಿತ್ತು. ಹೆಂಗಸರು ನೀರಿಗಾಗಿ ಕೆರೆಯ ಬಳಿ ಹೋಗಿದ್ದರು. ನಾಯಿಗಳು ಸಹ ದಾರಿ ಕಾಯುತ್ತ ಧೂಳಿನಲ್ಲಿ ಬಿದ್ದುಕೊಂಡಿದ್ದವು. ಬಹಳಷ್ಟು ಜೋಪಡಿಗಳ ಬಾಗಿಲು ಮುಚ್ಚಿತ್ತು. ದಾನಯ್ಯ ಹಿಂದಿರುಗಿ ಬರುವಾಗ ಅವನಿಗೆ ಗೋವಿಂದನ ಜೋಪಡಿ ಕಾಣಿಸಿತು. ಉಳಿದ ಜೋಪಡಿಗಳಿಂದ ಸ್ವಲ್ಪ ಅಂತರದಲ್ಲಿದ್ದ ಅದರ ಮುಖ ಕೆರೆ ಕಡೆಗಿತ್ತು. ಎಂದಿನಂತೆ ತಂತಿ ಬಿಗಿಯಲಾಗಿತ್ತು. ದಾನಯ್ಯನಿಗನಿಸಿತು, ಈಗ ಗೋವಿಂದನಂತೂ ನಾಲ್ಕೈದು ದಿನ ಜೈಲಿನಲ್ಲಿ ಸಿಕ್ಕಿಬಿದ್ದಿದ್ದಾನೆ .ಪೊಲಿಸರು ಏನು ಮಾಡ್ತಾರೋ ಹೇಳೋ ಹಾಗಿಲ್ಲ!

ದಾನಯ್ಯ ಒಮ್ಮೆಲೆ ಹಿಮ್ಮೆಟ್ಟಿದ. ಆತನ ಎದೆ ತುಂಬಿದಂತಾಗಿ ಕೈಕಾಲು ಕಂಪಿಸಲಾರಂಭಿಸಿತು. ಗೋವಿಂದನ ಬುಟ್ಟಿಯನ್ನು ಒಂದು ದಿನದ ಮಟ್ಟಿಗೊಯ್ದರೆ ಹೇಗೆ? ನಾಗಪಂಚಮಿಯೂ ಮುಗಿಯುತ್ತದೆ ಮತ್ತು ಯಾರಿಗೂ ಅದರ ಸುಳಿವು ಹತ್ತಲಿಕ್ಕಿಲ್ಲ ಎಂಬ ವಿಚಾರ ಸುಳಿದುಹೋಯಿತು.

ಆತ ಒಮ್ಮೆಲೆ ಗಾಬರಿಯಾದ. ಅತ್ತಿತ್ತ ನೋಡಿದ. ಅನಂತರ ಮೈಮೇಲೆ ಬಂದವರಂತೆ ಸರಸರ ಹೊರಟ ಮತ್ತು ಬಾಗಿಲು ತೆರೆದು ಒಳಗೆ ಪ್ರವೇಶಿಸಿದ. ಆತ ಮೇಲಿದ್ದ ಬುಟ್ಟಿಯನ್ನೆತ್ತಿಕೊಂಡು ಬಾಗಿಲ ಬಳಿಗೆ ಹಿಂದಿರುಗಿದ. ಆದರೆ ಒಮ್ಮೆಲೆ ನಾಚಿಕೆಯಿಂದ ಮುದ್ದೆಯಾಗಿ ದಿಟ್ಟಿಸುತ್ತಲೇ ನಿಂತ. ಎದುರಿಗೆ ಹುಚ್ಚು ಮುದುಕಿ ಕಣ್ಣು ಕಿಸಿದು ನಿಂತಿದ್ದಳು. ಅವಳ ತುಟಿ ಕೊಂಕಾಯಿತು. "ರುದ್ರಾ, ಸಿದ್ರಾಮಾ, ಶಿರಪ್ಯಾ," ಎಂದು ಒಡಕು ದನಿಯಲ್ಲಿ ಕೂಗಲಾರಂಭಿಸಿದಳು. ಇವರೆಲ್ಲ ಕೈಲಿದ್ದ ಎಲೆಯನ್ನು ಅಲ್ಲೇ ಬಿಟ್ಟು ಓಡೋಡಿ ಬಂದರು. ಹೆಂಗಸರು ಹಾದಿಯ ಮೇಲೆಯೆ ಕೊಡಗಳನ್ನಿಟ್ಟು ಧಾವಿಸಿ ಬಂದರು. ಮತ್ತು ಕೈ ಮೇಲಕ್ಕೆತ್ತಿ ಕೂಗುತ್ತಿದ್ದ ಮುದುಕಿಯ ಪಕ್ಕದಲ್ಲಿ ಬಂದು ನಿಂತರು.

"ಸೆಗಣಿ ಕುಳ್ಳಿನ ಹಾಗೆ ಮುಖ ಮಾಡಿಕೊಂಡು ಯಾಕೆ ನಿಂತಿದ್ದೀರಿ? ಗೋವಿಂದ ನಾಲ್ಕು ದಿನ ಬರೋದಿಲ್ಲ. ಇವಕ್ಕೆ ಆಹಾರ ಹಾಕುವವರು ನಿಮ್ಮಪ್ಪನೇನು? ಅಥವಾ ಅವು ಸಾಯಲಿ ಏನು ನನ್ನ ಹಾಗೆ?" ದಾನಯ್ಯ ಕೇಳಿದ.

ಆದರೆ ಯಾರೂ ಉತ್ತರ ನೀಡಲಿಲ್ಲ. ಎಲ್ಲರೂ ಅವನನ್ನೇ ದಿಟ್ಟಿಸುತ್ತಿದ್ದರು. "ನಾನೇನು ಕಳ್ಳತನ ಮಾಡಲು ಬಂದಿರುವೆನೆಂದು ತಿಳಿದಿರೋ? ಈಗಲೂ ನನ್ನಲ್ಲಿ ಶಕ್ತಿಯಿದೆ. ನಂಗೆ ಯಾಕೆ ಬೇಕು ಬೇರೆಯವರ ಪಾದರಕ್ಷೆ?" ದಾನಯ್ಯ ಪುನಃ ಕೇಳಿದ. ಆತನ ಸ್ವರ ಈಗ ಮತ್ತಷ್ಟು ಕರ್ಕಶವಾಗಿತ್ತು. ಮೇಲೆತ್ತಿ ಕುಣಿಸುತ್ತಿದ್ದ ಕೈ ಕಂಪಿಸಲಾರಂಭಿಸಿತು. "ಈಗ ಸತ್ತವರ ಹಾಗೆ ಯಾಕೆ ಮುಖ ಮಾಡಿಕೊಂಡು ನಿಂತಿದ್ದೀರಿ? ಈ ಮುದುಕಿ

ಮಡಕೆ ಒಗೆದು ನನ್ನ ಹಾವು ಕೊಂದು ಹಾಕಿದಳು. ನನ್ನ ಹೊಟ್ಟೆ ಮೇಲೆ ಹೊಡೆದಳು. ಆಗೆಲ್ಲಿ ಹೋಗಿದ್ದಿರಿ ನೀವೆಲ್ಲ?''.

ಆತನ ಆವೇಶದ ಪರಿಣಾಮ ಯಾರ ಮೇಲೂ ಆಗಲಿಲ್ಲ. ಎಲ್ಲರೂ ಕಂಬದಂತೆ ಸ್ತಬ್ಧರಾಗಿ ನಿಂತಿದ್ದರು. ಕೆಂಪು ಸೀರೆಯುಟ್ಟ ಹುಚ್ಚು ಮುದುಕಿಯೂ ಹೆಪ್ಪುಗಟ್ಟಿದಂತಾಗಿದ್ದಳು. ದಾನಯ್ಯನಿಗೆ ಸೋತು ಹೋದಂತೆನಿಸಿ ಗೋಣು ಕೆಳಗೆ ಹಾಕಿದ. ಬಾಯಿಂದ ಒಂದು ಶಬ್ದವೂ ಹೊರಬೀಳಲಿಲ್ಲ. ಈಗಾತ ಶುಷ್ಕವಾಗಿ ಕೆಮ್ಮುವವರಂತೆ ಬಿಕ್ಕಳಿಸಲಾರಂಭಿಸಿದ. ಕೊನೆಗೆ ಚಂದರ ಮುಂದಾದ. ಆತನ ಕೈಯಲ್ಲಿದ್ದ ಬುಟ್ಟಿಯನ್ನು ಪಡೆದು ಗೋವಿಂದನ ಜೋಪಡಿಯಲ್ಲಿ ಒಯ್ದಿಟ್ಟ. ಅವನು ಬಾಗಿಲು ಹಾಕಿ ತಂತಿಯಿಂದ ಭದ್ರಪಡಿಸಿದ. ಬಳಿಕ ದಾನಯ್ಯನ ಕೈ ಹಿಡಿದು, "ಅಜ್ಜಾ, ನೀನೀಗ ಹೋಗಿ ಸ್ವಲ್ಪ ವಿಶ್ರಾಂತಿ ತೆಗೆದುಕೋ," ಎಂದು ಹೇಳಿದ.

ದಾನಯ್ಯ ಬೆನ್ನು ಬಾಗಿಸಿ ನಡೆಯಲಾರಂಭಿಸಿದ. ಆದರೆ ಉಳಿದವರ ಕಣ್ಣುಗಳು ತನ್ನ ಬೆನ್ನಿಗಂಟಿಕೊಂಡೇ ಬರುತ್ತಿವೆ ಎಂದೆನಿಸಿತು. ಕೆಂಪು ಸೀರೆಯಂತೂ ಭೂತದಂತೆ ಹೆಗಲೇರಿ ಕೂತಿತ್ತು.

ದಾನಯ್ಯ ಹೊರಟುಹೋದ ಬಳಿಕ ಗುಂಪು ಚೆದುರಿತು. ಹುಚ್ಚು ಮುದುಕಿ ಕಲ್ಲಿನ ತುಂಡೊಂದನ್ನು ಹುಡುಕಿದಳು ಮತ್ತು ಅದನ್ನು ತಂತಿಯೊಂದಿಗೆ ಬಾಗಿಲಿಗೆ ಸಿಕ್ಕಿಸಿದಳು. ಆಕೆಗೆ ನಗೆಯುಕ್ಕಿ ಬಂತು. ನಸುನಕ್ಕು ಅಲ್ಲೇ ಕಾವಲಿಗೆ ಕೂತಳು.

ದಾನಯ್ಯ ತನ್ನ ಜೋಪಡಿಯಲ್ಲಿ ಬಂದು ಕುಳಿತಾಗ ಆತನ ತಲೆ ಸಿಡಿಯುತ್ತಿತ್ತು. ಆತ ಚಿಮಣಿ ಹಚ್ಚಿದಾಗ ಧೂಳು ಮೆತ್ತಿದ ಪಾತ್ರೆಯ ಮೇಲೆ ಒಂದು ಬೆರಳಿನಷ್ಟು ಭಾಗ ಬೆಳಗುವಷ್ಟು ಮಂದ ಬೆಳಕಾಯಿತು; ಆದರೆ ಅದಕ್ಕಿಂತಲೂ ಹೆಚ್ಚಾಗಿ ಹೊಗೆಯಾಯಿತು. ಈಗ ಮಾತ್ರ ಆತನಿಗೆ ತನ್ನ ಮೇಲೆ ಕೆರೆ ಹಾವು ಹೊಲಸು ಮಾಡಿದಷ್ಟು ಅಸಹ್ಯವೆನಿ



ಸಿತು. ಕಳೆದ ನಾಲ್ವತ್ತು ವರ್ಷಗಳಲ್ಲಿ ಎಂದೂ ನಡೆಯದ ಘಟನೆ ಇಂದೇ ಹೇಗೆ ನಡೆಯಿತು, ಹೇಗೆ ಕಾಲುಜಾರಿತು ಎನ್ನುವುದೇ ಅವನಿಗೆ ಅರ್ಥವಾಗಲಿಲ್ಲ. ಹೊಲಸಿನಲ್ಲಿ ಉಂಗುರ ಬಿದ್ದರೂ ಕೈ ಹಾಕಬಾರದೆಂದು ಎಚ್ಚರಿಸುವ ತಂದೆ, ಇವತ್ತೇನಾದರೂ ಎದುರಿಗಿದ್ದಿದ್ದರೆ ತನ್ನ ತಲೆಗೂದಲು, ಮೀಸೆ ಕಿತ್ತು ತೆಗೆಯುತ್ತಿದ್ದ ನೇನೋ!? ಗುಂಪಿನಲ್ಲಿದ್ದ ಯಾರೂ ಆತನಿಗೆ ಕಳ್ಳನೆಂದಿರಲಿಲ್ಲ, ಇದೇ ಅವನ ಮನಸ್ಸನ್ನು ಚುಚ್ಚುತ್ತಿತ್ತು. ಅವರೆಲ್ಲ ಗದ್ದಲ ಮಾಡಿದ್ದರೆ, ಗೊಂದಲವೆಬ್ಬಿಸಿದ್ದರೆ, ಕುರುವಿನ ಕೀವು ಸೋರಿಹೋದಷ್ಟು ಸಮಾಧಾನವಾಗುತ್ತಿತ್ತು. ಈಗ ಅವರ ಮನಸ್ಸಿನಲ್ಲಿ ಎಂಥ ಭಾವನೆ ಮೊಳಕೆಯೊಡೆಯುತ್ತಿದೆಯೋ ಯಾರಿಗೆ ಗೊತ್ತು!

ಈ ಎಲ್ಲ ನೋವಿನ ಜೊತೆಗೆ ಹಸಿವೂ ಕೆರಳುತ್ತಿತ್ತು. ಈಗ ಆಲದ ಮರದ ಕೆಳಗಿನ ವಾಸನೆ ಸುತ್ತಲೂ ಪಸರಿಸಿತ್ತು. ಕರುಳೇ ಕಿತ್ತು ಬಂದಂತೆ ಒಮ್ಮೆಲೆ ಹಸಿವು ಭುಗಿಲ್ಲೆಂದಿತು. ಮನೆಯೊಳಗೇನೂ ಇಲ್ಲವೆನ್ನುವುದು ಆತನಿಗೆ ಗೊತ್ತಿದ್ದರೂ ಮಡಕೆಯನ್ನೆಲ್ಲ ಕಿತ್ತಾಡಿದ. ಒಂದು ಮಡಕೆಯೊಳಗಿನ ಅವಲಕ್ಕಿ ಮುಗಿದು ಒಂದು ವಾರವೇ ಕಳೆದಿತ್ತು.

ಇನ್ನೊಂದರಲ್ಲಿದ್ದ ಶೇಂಗಾವನ್ನು ಮೊನ್ನೆ ಯಷ್ಟೇ ಹೊರಗೆ ಚೆಲ್ಲಿದ್ದ. ಯಾಕೆಂದರೆ ಅದ ರೊಳಗಿದ್ದ ಬೆಲ್ಲದ ತುಂಡು ಇರುವೆ ತಿಂದಿದ್ದ ರಿಂದ ಅದು ಬೆಳ್ಳಗಾಗಿತ್ತು. ಶೇಂಗಾ ಕಾಳಿಗೆ ಹುಳ ಹಿಡಿದಿತ್ತು. ಹೀಗಾಗಿ ಖಾಲಿ ಮಡಕೆ ನೋಡಿ ಆತ ಕೆರಳಿದ. ಅದನ್ನು ಮೂಲೆಯಲ್ಲಿ ಅಪ್ಪಳಿಸಿದ. ಮೂಲೆಯೊಂದರಲ್ಲಿ ಬಿದ್ದ ಕಾಗ ದದ ಮುದ್ದೆಯನ್ನಾತ ಉತ್ಸಾಹದಿಂದ ಬಿಚ್ಚಿ ನೋಡಿದ. ಅದರಲ್ಲಿದ್ದ ರೊಟ್ಟಿಯ ತುಣುಕು ನೋಡಿ ಆತನಿಗೆ ಮೊದಲು ವಿಶ್ವಾಸ ಹುಟ್ಟ ಲಿಲ್ಲ. ಆತನಿಗೆ ಒಮ್ಮೆಲೆ ನೆನಪಾಯಿತು-ಮೊನ್ನೆ ಹೊಟ್ಟೆ ತುಂಬಿದ ಬಳಿಕ ಉಳಿದ ತುಣುಕನ್ನು ಅವನೇ ಇಟ್ಟಿದ್ದ. ಈಗ ಅದು ಕೊಂಡಿನ ತುಂಡಿನಂತಾಗಿತ್ತು. ಆಲದ ಮರದ ಕೆಳಗಿ ನಿಂದ ಊಟ ಬರುವವರೆಗೆ ಹೊಟ್ಟೆಯಲ್ಲಿ ಕೆರಳುತ್ತಿದ್ದ ಹಗ್ಗಣದ ಮುಂದೆ ಇದನ್ನು ಚೆಲ್ಲಲಡ್ಡಿಯಿಲ್ಲ. ಆ ತುಣುಕಿನ ಮೇಲೆ ನೀರು ಸಿಂಪಡಿಸಿ ಮೃದು ಮಾಡಿದ. ಅನಂತರ ಸಮಾಧಾನದಿಂದ ಕುಳಿತು ಒಂದೊಂದೇ ತುಣುಕು ತಿನ್ನಲಾರಂಭಿಸಿದ. ಅದೇ ವೇಳೆಗೆ ಚಂದರ ಜೋಪಡಿಯ ಹತ್ತಿರ ಬಂದು ಬಾಗಿಲು ದೂಡಿದ. ಆದರವನು ಒಳಗೆ ಬಾರದೇ, ಹೊರಗಿದ್ದ ಫರಶಿ ಕಲ್ಲ ಮೇಲೆ ಕೂತ. ಅವನು ಬಹಳ ಹೊತ್ತು ಮಾತನಾ ಡದೇ ಸುಮ್ಮನೆ ಕುಳಿತಿದ್ದ. ಕೊನೆಗೆ ದಾನ ಯ್ಯನೇ ಕೇಳಿದ, "ಏನಪ್ಪಾ ಚಂದರ, ಯಾಕೆ ಬಂದೆ?"

"ಅಜ್ಜಾ, ನಿನ್ನ ಮುಂದಿನ ವಿಚಾರ ವೇನು?"

"ಮುಂದಿನ ವಿಚಾರ? ಅಂದರೆ ನನಗ ರ್ಥವಾಗಲಿಲ್ಲ ಮಗು?" ದಾನಯ್ಯ ಕೇಳಿದ.

"ಈಗೇನು ಹೇಳೋದು? ನಿನಗಂತೂ ಚೆನ್ನಾಗಿ ಗೊತ್ತಿದೆ! ಅಲ್ಲಜ್ಜಾ, ಜನ ಬಹಳ ಸಿಟ್ಟಿಗೆದ್ದಿದ್ದಾರೆ. ಕೈಯಲ್ಲಿ ಕೋಲು ಹಿಡಿದ ರಾಚಯ್ಯ ಮಕ್ಕಳೊಂದಿಗೆ ಬರುತ್ತಿದ್ದಾನೆ," ಚಂದರ ಕೆರಳಿ ಹೇಳಿದ.

"ಅವರನ್ನೆಲ್ಲ ಒಯ್ದು ದಫನ್ ಮಾಡು, ಸ್ವತಃ ಶೆಗಣಿ ತಿಂದು ಜೈಲಿಗೆ ಹೋಗಿ ಬಂದಿದ್ದಾನೆ ಮತ್ತು ನಂಗೆ ಹೇಳೋದಕ್ಕೆ ಬರ್‍ತಾನೆ..."

"ಅಜ್ಜಾ, ಹೀಗೆಲ್ಲ ಹುಚ್ಚುಚ್ಚಾಗಿ ಮಾತನಾ ಡಬೇಡ. ನಾನು ಹೇಳೋದನ್ನಷ್ಟು ಕೇಳು! ಯಾಕೆ ಸುಮ್ಮೆ ಬೆಂಕಿಗೆ ಒದ್ದು ಕಿಡಿ ಹಾರಿ ಸುತ್ತೀ! ಇದೆಲ್ಲ ಸರಿಯಲ್ಲ. ನೀನಾಗಿಯೇ ಇಲ್ಲಿಂದ ಹೊರಟು ಹೋಗು. ನೀನಂತೂ ಮುದುಕನಾಗಿದ್ದೀ, ಮಕ್ಕಳು-ಮರಿಗಳಂತೂ

ಇಲ್ಲ. ನಾನಾದ್ರೂ ಏನು ಮಾಡಲಿ ಹೇಳು. ಹೇಗಾದ್ರೂ ಮಾಡಿ ನಿನ್ನನ್ನು ಅವರು ಹೊರಗೆ ಹಾಕೋದಂತೂ ನಿಜ. ಅಂದಮೇಲೆ ಮರ್ಯಾದೆಯಿಂದ ಹೋಗೋದು ಒಳ್ಳೆದಲ್ವೇ?" ಚಂದರ ಹೇಳಿದ.

ದಾನಯ್ಯ ಸಾಕಷ್ಟು ಹೊತ್ತು ಬಡಬಡಿಸುತ್ತಲೇ ಇದ್ದ. ಅನಂತರ ತಾನಾಗಿಯೇ ಸುಮ್ಮನಾದ. ದೆವ್ವ ಬಡಿದವರಂತೆ ಸ್ತಬ್ಧನಾಗಿ ಕುಳಿತ. ಚಂದರನ ಹೇಳಿಕೆ ಯೋಗ್ಯವಾಗಿತ್ತು. ಕೊಲೆ ಮಾಡಿ ಬಂದವನಿಗೆ ಹೊಟ್ಟೆಬಟ್ಟೆಯ ಸಮಸ್ಯೆಯಿಲ್ಲ. ಆದರೆ ಬೇರೆಯವರ ಹಾವು ಅಪಹರಣ ಮಾಡುವವನಿಗೆ ಮಾತ್ರ ಈ ವಸತಿಯಲ್ಲಿ ಸ್ಥಳವಿಲ್ಲ. ಇಂಥದೇ ಕೆಲಸ ಮಾಡಿದ ಕಾರಣಕ್ಕಾಗಿ ಸ್ವತಃ ದಾನಯ್ಯನೇ ಶಿವರಾಯನನ್ನು ಹೊಡೆದೋಡಿಸಿದ್ದ. ಮತ್ತು ಆತನ ಗಂಟುಮೂಟೆಗಳನ್ನು ಕಾಲಿನಿಂದ ಒದ್ದು ಹೊರಗೆ ಹಾಕಿದ್ದ. ಆದರೆ ಈಗ ದಾನಯ್ಯನಿಗೇ ಸ್ಥಳವಿಲ್ಲ. ನಿನ್ನೆ ನಾಗರಹಾವು ಸತ್ತಾಗಲೇ ಆತನ ಅಲ್ಲಿಯ ಸಂಬಂಧ ಕಡಿದಿತ್ತು. ಹಿಂದೊಮ್ಮೆ ಇಡೀ ವಸತಿಗೇ ಬೆಂಕಿ ಹತ್ತಿದ್ದರಿಂದ ಈ ಗುಡ್ಡ ಬಿಟ್ಟು ಅಲೆದಾಡಬೇಕಾಯಿತು. ಆಗ ಪಂಜುಗಳು ಅತ್ತಿತ್ತ ಚಲಿಸುತ್ತಿದ್ದವು ಮತ್ತು ಕೆಂಪು ಸೀರೆ ಹೊತ್ತಿ ಉರಿಯುತ್ತಿತ್ತು. ಈಗ ಪಂಜುಗಳಿಲ್ಲ ನಿಜ. ಆದರೆ ಕೆಂಪು ಸೀರೆಯಿದೆ. ಅದಕ್ಕೆ ಗೂಬೆಯಂತಹ ಎರಡು ಕಣ್ಣುಗಳಿವೆ. ಹೀಗಾಗಿ ಈಗ ಮತ್ತೊಮ್ಮೆ ಕಾಲಿಗೆ ಚಕ್ರ ಕಟ್ಟಿಕೊಳ್ಳಬೇಕಾಗುವುದು...

"ಅಲ್ಲಪ್ಪ ಚಂದರ, ಮೂರ್ನಾಲ್ಕು ದಿನವಾದರೂ ಅವಕಾಶ ಬೇಡವೇ?" ದಾನಯ್ಯ ನೆಲಕ್ಕೆ ಕೈಯೂರಿ ಹೇಳಿದ.

"ಬರೀ ಮೂರ್ನಾಲ್ಕು ದಿನಗಳೇಕೆ, ಒಂದು ವಾರದವರೆಗ ನಿಲ್ಲು, ಬೇಕಾದ ಹಾಗೆ ತಿನ್ನು, ಉಣ್ಣು. ಆದರೆ ಶನಿವಾರ ಮಾತ್ರ ಇಲ್ಲಿಂದ ತಳ ಕೀಳಲೇಬೇಕು! ಇಲ್ದಿದ್ರೆ ಈ ಜನರೆಲ್ಲ ಮತ್ತೆ ರೊಚ್ಚಿಗೇಳ್ತಾರೆ. ನಾನವರನ್ನು ಸಮಾಧಾನಪಡಿಸುತ್ತೇನೆ" ಚಂದರ ಹೇಳಿದ. ದಾನಯ್ಯ ಅವನನ್ನು ಕಿರುಗಣ್ಣಿನಿಂದ ದಿಟ್ಟಿಸಿದ. ಚಂದರ ಅವನ ದೂರದ ಸಂಬಂಧಿಕ. ಹುತ್ತಿನ ಹಾಗೇ ಭರಭರ ಬೆಳೆದ ಮತ್ತು ತನ್ನ ಮಣ್ಣಿನ ಸಂಬಂಧ ಕಡಿದುಕೊಂಡ. ಕಾಡು-ಕಾಡು ಅಲೆದು ದಾನಯ್ಯ ಅವನಿಗೆ ಹಾವು ಹಿಡಿಯುವುದನ್ನು ಕಲಿಸಲು ಒದ್ದಾಡಿದ. ಆದರೆ ಒಂದೆರಡು ಹಾವು ಹಿಡಿಯುವಷ್ಟರಲ್ಲೇ ಹುಡುಗ ಹೈರಾಣಾದ. ಅನಂತರ ಹರಾಮಿಯಂತೆ ಹುಲ್ಲು ಕೊಯ್ಯಲು, ಕಳೆ ಕೀಳಲು ಹೋಗಲಾರಂಭಿಸಿದ. ಕೃಷ್ಣಗೊಲ್ಲರ ರಕ್ತ ಮೈಯಲ್ಲಿ ಹರಿಯುತ್ತಿದ್ದ ಈ ಹುಡುಗ ಹೊಟ್ಟೆ ಹೊರೆಯಲು ಹುಲ್ಲು ಕೀಳುತ್ತಿದ್ದ. ಈಗಂತೂ ಒಂದು ಹೊಸ ಹುಳವೇ ಅವನ ತಲೆಯೊಳಗೆ ಹೊಕ್ಕಿತ್ತು. ಇವನೂ ಹೊರಟುಹೋದನೆಂದರೆ ಮುಗಿದೇಹೋಯಿತು. ವಸತಿಯಲ್ಲಿದ್ದ ಎಲ್ಲ ಸಂಬಂಧವೇ ಕೊನೆಗೊಳ್ಳುತ್ತದೆ ಅಂದುಕೊಂಡ ದಾನಯ್ಯ.

ಚಂದರ ಕೆಂಪು ಚೀಲ ಹೊರಗೆ ತೆಗೆದು ದಾನಯ್ಯನ ಕಡೆಗೆ ಸರಿಸಿದ, "ಅಜ್ಜಾ, ಈ ಚಿಲ್ಲರೆ ಹಣ ಇಟ್ಟುಕೋ. ಮತ್ತೆ ಯಾವಾಗ ಭೆಟ್ಟಿಯಾಗುತ್ತೇವೋ ಯಾರಿಗ್ಗೊತ್ತು! ಇಲ್ಲಿಯ ಫಾರಂ ಹೌಸಿಗೆ ಹುಲ್ಲು ಕೀಳಲು ಜನ ಬೇಕಾಗಿದ್ದಾರೆ, ಗಂಡಸರಿಗೆ ಎರಡು ರೂಪಾಯಿ ಕೂಲಿ. ನಿನ್ನಂಥವನು ಕೂತು ಕೆಲಸ ಮಾಡಿದರೂ ಹನ್ನೆರಡಾಣೆಗೆ ಸಾವಿಲ್ಲ. ನೀನೂ ಬರುತ್ತಿಯೆಂದು ಹೇಳಲೇ?"

ದಾನಯ್ಯ ಕ್ಷಣಕಾಲ ಸುಮ್ಮನಾದ. ಅನಂತರ ಮೆಲ್ಲಗೆ ಆತನ ರಕ್ತ ಕುದಿಯಲಾರಂಭಿಸಿತು. ಆತ ಕೆಂಪು ಚೀಲವನ್ನು ಮರಳಿ ಚಂದರನ ಮೈಮೇಲೆ ಒಗೆದು ಉತ್ತರಿಸಿದ: "ನನಗೆ ನಿನ್ನ ಹಣ ಬೇಕಾಗಿಲ್ಲ. ನಾನೇನೂ ಉಪವಾಸ ಸಾಯೋದಿಲ್ಲ. ಇಷ್ಟು ವರ್ಷ ನಾನು ಹಾವು ಆಡಿಸುತ್ತ ದಿನ ಕಳೆದೆ. ಈಗ ಬಾಯಲ್ಲಿ ಹಲ್ಲಿಲ್ಲ, ಬೆನ್ನಲ್ಲಿ ಹುರಿಯಿಲ್ಲ,

ಕಣ್ಣೂ ಮಂಜಾಗಿದೆ. ಇಂಥ ಕಾಲಕ್ಕೆ ನಾನು ಕ್ಷುದ್ರವಾದ ಹುಲ್ಲು ಕೀಳುವ ಕೆಲಸ ಮಾಡಲಿ? ಹುಲ್ಲು ಕೀಳುವುದೇ ಆಗಿದ್ದರೆ, ನಾನು ಇದಕ್ಕಿಂತ ಮೊದಲೇ ಜಮೀನು, ಹೆಂಡತಿ, ಮಕ್ಕಳನ್ನು ಗಳಿಸುತ್ತಿದ್ದೆ! ಈಗಲೂ ನನ್ನ ಮೈಯಲ್ಲಿ ತಾಕತ್ತಿದೆ, ಕೈಯಲ್ಲಿ ಶಕ್ತಿಯಿದೆ, ನಾಳೆ ಸಂಜೆಯೊಳಗೆ ನಾನೊಂದು ಹಾವು ಹಿಡಿಯದಿದ್ದರೆ ನನ್ನ ಬಲಗಿವಿಯನ್ನೇ ಕತ್ತರಿಸಿ ಕೊಡುತ್ತೇನೆ. ಅಲ್ಲಯ್ಯಾ, ಹಲ್ಲಿ ನೋಡಿದರೆ ಸಾಕು; ಧೋತರದಲ್ಲಿ ಉಚ್ಚೆ ಹೊಯ್ಯುವ ಆ ಮುಂಡೇಮಕ್ಕಳು ನನ್ನನ್ನು ಹೇಗೆ ದಿಟ್ಟಿಸಿ ನೋಡುತ್ತಿದ್ದರು ನೋಡಿದೆಯಲ್ಲ. ಇವತ್ತು ಚೋಟುದ್ದ ಹುಡುಗನೊಬ್ಬ ತೊಟ್ಲಕಾಯಿ ಯಿಂದ ಹೊಡೆದ. ಇನ್ನೊಂದು ಮೂರ್‍ನಾಲ್ಕು ದಿನ ನಾನು ನಿಲ್ಲಲು ಇದೇ ಕಾರಣ. ನಾಳೆ ನಾನು ನಾಗರಹಾವು ತರದಿದ್ದರೆ ಇಲ್ಲಿ ಕಾಲಿ ಡೋದೇ ಇಲ್ಲ. ಮತ್ತೊಮ್ಮೆ ನಾನು ಆ ಗಲ್ಲಿಯೊಳಗೆ ಹೋಗಿ ನಾಗರಹಾವು ಮೆರೆಸು ತ್ತೇನೆ. ಈ ಪುಕ್ಕಲು ಜನರೆದುರು ಧಿಮಾಕಿ ನಿಂದ ಕುಣಿಸುತ್ತೇನೆ. ಅನಂತರವೇ ನನಗೆ ತೋಚಿದ ಹಾದಿ ಹಿಡಿಯುತ್ತೇನೆ. ಒಂದು ಮಾತು ಮಾತ್ರ ನಿಜ. ನಾನು ಕಾಲು ಜಾರಿದೆ. ಇದೆಲ್ಲ ಹೇಗಾಯ್ತೋ ದೇವರಿಗೇ ಗೊತ್ತು. ಎಂದೂ ಕಾಲುಜಾರದೇ ಇರಲು ನಾನೇನೂ ಮಠದೊಳಗಿನ ಸಂನ್ಯಾಸಿಯಲ್ಲ. ಆದರೆ ಅದ ಕ್ಕಾಗಿ ನಾನು ಹುಲ್ಲು ಕೀಳುವ ದರಿದ್ರ ವ್ಯಕ್ತಿಯಾಗಲಾರೆ. ನಿನಗೆ ಇದೆಲ್ಲ ತಿಳಿಯುವ ಮಾತಲ್ಲ. ಚಂದರ, ನೀನು ನಿನ್ನ ಹಣ ಕೊರಳಿಗೆ ಕಟ್ಟಿಕೊಂಡು ಇಲ್ಲಿಂದ ಹೊರಟು ಹೋಗು. ಇನ್ನು ಇಲ್ಲಿಯ ನನ್ನೆಲ್ಲ ಸಂಬಂಧ ಮುಗಿದಹಾಗಾಯಿತು. ಹಾಗೆಯೇ ನನ್ನ-ನಿನ್ನ ಸಂಬಂಧವೂ ಹರಿಯಿತು. ಹೋಗು, ಹೊರಟು ಹೋಗಿಲ್ಲಿಂದ.”

“ಬೇಡಾದ್ರ ಬಿಡು,” ಎನ್ನುತ್ತ ಚಂದರ ಚೀಲವನ್ನೆತ್ತಿಕೊಂಡು ಹೇಳಿದ, “ಇನ್ನೊಂದೆ ಎಲ್ಲೂ ಭೆಟ್ಟಿಯಾಗಲಿಕ್ಕಿಲ್ಲೆಂದು ಒಂದು ಮಾತು ಹೇಳ್ತೆ ನಜ್ಜಾ. ನೀನು ಸಾವಿರ ಸಲವಾದರೂ ನನ್ನನ್ನು ಬೈದೆ. ಆದರೆ ಒಂದು ಮಾತು ನೆನಪಿಡು. ಮನುಷ್ಯನ ಎದೆಯೊಳ ಗೊಂದು ಹೃದಯವಿರುವಂತೆ, ಕೈಗೂ ಒಂದು ಹೃದಯವಿದೆ. ನಾಗರಹಾವು ಹೆಡೆಯ ಪ್ಪಳಿಸಿ ಹೊಡೆದಾಗ, ನನ್ನ ಕೈಯೊಳಗಿದ್ದ ಹೃದಯ ಒಡೆದು ನುಚ್ಚುನೂರಾಯಿತು. ನಾನಾದ್ರೂ ಏನು ಮಾಡಲಿ? ಅದರ ನಂತರ ನಾಗರಹಾವಿನ ಹೆಸರು ತೆಗೆದರೂ ಸಾಕು, ಬೆವರೇ ಬಿಡುತ್ತದೆ. ಅಂದ ಬಳಿಕ ಹಗಲಿರುಳು ನಾನು ಈ ಭಯದಿಂದಲೇ ಸಾಯಲೇನು? ಹುಲ್ಲು ಕಚ್ಚುವುದೂ ಇಲ್ಲ, ಹೆಡೆ ಬಿಚ್ಚುವುದೂ ಇಲ್ಲ. ಹುಲ್ಲಿನ ಹೊರೆಯನ್ನು ಪಕ್ಕದಲ್ಲೇ ಇಟ್ಟುಕೊಂಡು ಕಣ್ತುಂಬಾ ಮಲಗಬಹುದು. ನಾನು ಕ್ಷುದ್ರ ಮನುಷ್ಯನಾದೆನೆಂದು ನನ್ನನ್ನು ಸಂಭಾಳಿಸುವುದು ಬಿಟ್ಟು ಹೀಗೆಲ್ಲ ಹಂಗಿಸು ವುದೇ ಅಜ್ಜಾ? ನಾನೀಗ ಹೋಗುತ್ತೇನೆ. ಶನಿವಾರದವರೆಗೆ ಸಂತೋಷದಿಂದಿರು. ನಾನು ಸಹ ಶನಿವಾರವೇ ಇಲ್ಲಿಂದ ಹೊರಟುಹೋ ಗುತ್ತೇನೆ!”

ಅವನು ಹೊರಟುಹೋಗುತ್ತಲೇ ದಾನಯ್ಯ ಪಿಚ್ಚೆಂದು ಉಗುಳಿದ. ಪಕ್ಕದಲ್ಲಿ ಹುಲ್ಲನ್ನಿಟ್ಟು ಕಣ್ತುಂಬಾ ಮಲಗಬಹುದಂತೆ! ಈ ಹುಡುಗನ ಮೈಯಲ್ಲಿ ಹರಿಯುವುದು ರಕ್ತವೋ ಅಥವಾ ಕತ್ತೆಯ ಮೂತ್ರವೋ. ಇವನ ಅಜ್ಜನೂ ಇಂಥ ಕ್ಷುದ್ರ ವ್ಯಕ್ತಿಯೇ. ಕೊನೆಪಕ್ಷ ಆತ ಹಾವಿನ ಬುಟ್ಟಿಯನ್ನಾದರೂ ಹೊತ್ತು ತಿರುಗಿದ ಮತ್ತು ಪಕ್ಕದಲ್ಲಿ ಬುಟ್ಟಿಯ ನ್ನಿಟ್ಟುಕೊಂಡು ಸತ್ತ. ಆದರೆ ಈ ಹುಡುಗ ಈಗ ಪಕ್ಕದಲ್ಲಿ ಹುಲ್ಲು ಹೊರೆಯನ್ನಿಟ್ಟು ಕೊಂಡು ಕಣ್ತುಂಬ ಮಲಗುತ್ತಾನಂತೆ. ಸುಖ ವಾಗಿರಬೇಕೆಂಬ ಇಚ್ಛೆ ನನ್ನಲ್ಲಿದ್ದರೆ ನಾನು ಸಹ ಹಾಗೇ ಬದುಕಬಹುದಾಗಿತ್ತಲ್ಲ! ಅದೂ ಗೊಂಜೋಳದ ತೆನೆಯಂತೆ ಪುಷ್ಟವಾಗಿ ಬೆಳೆದ

ರುಕುಮಿಯ ಪಕ್ಕದಲ್ಲಿ ಮಲಗಿ. ಪಂಜಿನ ಬೆಳಕಿನ ಪಕ್ಕದಲ್ಲಿ ಉರಿಯುತ್ತಿರುವ ಮತ್ತೊಂದು ಕೆಂಪು ಪಂಜಿನಂತೆ ಕಾಣುವ ರುಕುಮಿ. ಸರ್ವನಾಶ ಮಾಡದೇ ಬಿಡೋದಿಲ್ಲೆಂದು ಚೀರುತ್ತ ಕೆರೆಯಲ್ಲಿ ಪಂಜು ಬೀಸಿ ಒಗೆದ ರುಕುಮಿ.

ಆ ಕಾಲಕ್ಕೆ ಈ ವಸತಿ ದೂರದ ಆ ಮಲ್ಲಿಕಾರ್ಜುನನ ಗುಡ್ಡದ ಮೇಲಿತ್ತು ಮತ್ತು ಅಲ್ಲಿಂದಲೇ ಊರ ಹೊಲ ಪ್ರಾರಂಭವಾಗುತ್ತಿತ್ತು. ಆಗ ದಾನಯ್ಯ ಯುವಕನಾಗಿದ್ದ. ಈಜಲು ನೀರಿಗಿಳಿದರೆ ಸಾಕು, ಇಡೀ ಕೆರೆಯೇ ನಡುಗುತ್ತಿತ್ತು. ಆತ ಮನೆಯಿಂದ ಹೊರಬೀಳುವಾಗ ಅವನ ತಾಯಿ ತೋಳಿಗೆ ಕಟ್ಟಿದ ತಾಯಿತ ಇದೆಯೋ ಇಲ್ಲವೋ ಎಂದು ಪರೀಕ್ಷಿಸುತ್ತಿದ್ದಳು. ಅವನು ನಡೆಯುವಾಗ ಮೀನುಖಂಡಗಳು ಪುಟಿಯುತ್ತಿದ್ದವು ಮತ್ತು ಬಲಿಷ್ಠವಾದ ತೋಳು ಅನ್ಯರ ಮೇಲೆ ಹಡೆಯಪ್ಪಳಿಸಲು ಸಿದ್ಧವಾಗಿ ನಿಂತ ಕರಿಹಾವಿನಂತೆ ಕಾಣಿಸುತ್ತಿತ್ತು. ಇಪ್ಪತ್ತೈದು ಮೈಲು ನಡೆದ ರಾವಣ್ಯಾ, ತನ್ನ ಮಗಳಿಗೆ ವರ ಹುಡುಕಲು ವಸತಿಗೆ ಬಂದು ತಲುಪಿದ್ದ. ವಸತಿಯನ್ನು ತೊರೆದ ರಾವಣ್ಯಾ ಈಗ ತುಂಡು ಜಮೀನು ಕೃಷಿ ಮಾಡುತ್ತಿದ್ದ. ಆತ ಪೇಟೆಯಲ್ಲಿ ಸಿಕ್ಕರೆ ದಾನಯ್ಯನ ತಂದೆಯ ಮೀಸೆಯ ಒಂದು ಕೂದಲೂ ಅವನತ್ತ ಹೊರಳುತ್ತಿರಲಿಲ್ಲ. ಆದರೆ ತಾಯಿಗೆ ಮಾತ್ರ ತುಂಬಾ ಖುಷಿಯಾಯಿತು. ಈ ಹುಡುಗನ ಕಾಲಿಗೆ ಕಟ್ಟಿದ ಚಕ್ರ ಹೋಗಿ, ಒಂದೇ ಸ್ಥಳದಲ್ಲಿ ನೆಲೆಯೂರಬಹುದು ಎಂಬ ಆಶೆ ಆಕೆಯದು. ದಾನಯ್ಯನೊಮ್ಮೆ ಜಾತ್ರೆಯಲ್ಲಿ ರುಕುಮಿಯನ್ನು ನೋಡಿದ್ದ. ಆಕೆಯ ದೇಹ ಆಗ ಬೆಂಡೆಕಾಯಿಯಂತೆ ಸಿಡಿಯುತ್ತಿತ್ತು. ರಕ್ತವರ್ಣದ ಕಣ್ಣುಗಳು ಉಗ್ರವಾಗಿದ್ದವು. ಕಾಲಿಗೆ ಬಳೆಗಳಿದ್ದರೆ ಮೆರವಣಿಗೆಯ ಕುದುರೆಯಂತೆ ಕಾಣಿಸುತ್ತಿದ್ದಳು. ಆದರೂ ಆಕೆ ಧಿಮಾಕಿನಿಂದಲೇ ನಡೆಯುತ್ತಿದ್ದಳು. ಒಮ್ಮೆ ದಾನಯ್ಯ ಕೆಲದಿನಗಳ ಮಟ್ಟಿಗೆ ರಾವಣ್ಯಾನ ಮನೆಗೆ ವಾಸ್ತವ್ಯಕ್ಕಾಗಿ ಬಂದಾಗ, ರುಕುಮಿಯನ್ನು ತುಂಬಾ



ಸನಿಹದಿಂದ ನೋಡಿದ. ಆಕೆ ಹೊಲದ ಬದುವಿನ ಮೇಲಿದ್ದ ಗಿಡಕ್ಕಾತು ನಿಂತು, ಸಿಕ್ಕ ಸಿಕ್ಕವರ ಸಂಗಡ ಗಂಟೆಗಟ್ಟಲೆ ಮಾತನಾಡುತ್ತಿದ್ದಳು. ಯಾರಾದರೂ ಬರೇ ಮಾತಾಡಿದರೆ ಸಾಕು, ಅವರೊಂದಿಗೆ ಕೈ ಹಿಡಿದು ಓಡಿ ಹೋಗಲು ಸಹ ಸಿದ್ಧವಾಗಿದ್ದಾಳೇನೋ ಎಂಬಂತೆ ನಿಂತಿರುತ್ತಿದ್ದಳು. ಅದರಲ್ಲೂ ಆ ಮನುಷ್ಯ ಪೇಟಾ ಅಥವಾ ಬೆಳ್ಳಿ ಬಟನ್ ಧರಿಸಿದ್ದರಂತೂ ಮುಗಿದೇ ಹೋಯಿತು; ಗ್ಲಾಸಿನಲ್ಲಿ ಮದ್ಯ ತುಂಬಿಕೊಡುವಂತೆ ಆಕೆ ಗದ್ದವನ್ನು ಕಿಂಚಿತ್ ಮೇಲಕ್ಕೆತ್ತಿ ತುಟಿ ಓರೆ ಮಾಡಿ ನಗುತ್ತಿದ್ದಳು. ದಾನಯ್ಯ ಮೂರು ನಾಲ್ಕು ದಿನ ಹುಲ್ಲಿನ ಕಳೆ ಕೀಳುವ ಕೆಲಸ ಮಾಡಿದ, ಹೆಂಟೆಯೊಡೆದ. ಕೊನೆಗೊಂದು ದಿನ ರಾವಣ್ಣಾ ಹೇಳಿದ, "ನಾಳೆ ನೇಗಿಲು ಹೊಡೆಯೋಣವೇ?"

ದಾನಯ್ಯ ಕೇಳಿದ, "ಆದರೆ ಎತ್ತುಗಳೆಲ್ಲಿ ಇವೆ?"

ರಾವಣ್ಣಾ ಉತ್ತರಿಸಿದ, "ಯಾರಿಗಾದರೂ ಕೈಕಾಲು ಬಿದ್ದು ತಂದರಾಯಿತು. ಕೆಲಸ ಮುಗಿಯಬೇಕಾದರೆ ಅಷ್ಟಾಗಿ ಮಾಡಬೇಡವೇ?"

ಆ ರಾತ್ರಿ ದಾನಯ್ಯ ತುಂಬಾ ಸೋತು ಹೋಗಿದ್ದ. ರಾತ್ರಿಯಿಡೀ ನಿದ್ದೆ ಬರಲಿಲ್ಲ. ಮಾತಿಲ್ಲ, ಕತೆಯಿಲ್ಲ. ಮುಂಜಾನೆ ಗಂಟು ಮೂಟೆ ಕಟ್ಟಿದವನೇ ನೇರವಾಗಿ ತನ್ನ ವಸತಿಗೆ ಹಿಂದಿರುಗಿದ. ಸುಮ್ಮನೆ ನೆಲದ ಮೇಲೆ ಬಿದ್ದು ಗೊರಕೆ ಹೊಡೆಯಲಾರಂಭಿಸಿದ. ಅನಂತರ ಒಂದು ರವಿವಾರ, ನಾಲ್ಕೈದು ಜನರನ್ನು ಕರೆದುಕೊಂಡು ರಾವಣ್ಣಾ ಬಂದ. ಅವರೊಂದಿಗೆ ಗಂಡಸರಂತೆ ಕಚ್ಚೆಯುಟ್ಟ ರುಕುಮಿಯೂ ದಾಪುಗಾಲು ಹಾಕುತ್ತ ಬಂದು ಸೊಂಟದ ಮೇಲೆ ಕೈಯಿಟ್ಟು ನಿಂತಳು.

"ಇದೆಂಥ ಪದ್ಧತಿ? ಜನ ಮುಖದ ಮೇಲೆ ಉಗುಳುತ್ತಿದ್ದಾರೆ," ರಾವಣ್ಣಾ ಹೇಳಿದ.

ವಸತಿಯ ಜನ ಕರೆಯದೇ ಇದ್ದರೂ ಬಂದು ಸೇರಿದರು. ಮತ್ತೊಬ್ಬರು ಇನ್ನೊಬ್ಬರನ್ನು ಕುರಿಗಳಂತೆ ದೂಡುತ್ತ ನಿಂತರು.

"ದಾದಾ, ನಾನು ಹಾವಾಡಿಗರ ಹುಡುಗ. ನನಗೆ ಅಂಥ ಕತ್ತೆ ಕೆಲಸ ಮಾಡಲು ಸಾಧ್ಯವಿಲ್ಲ. ಆಕೆ ಇಲ್ಲೇ ಬಂದು ನಿಲ್ಲುವಹಾಗಿದ್ದರೆ ಕಳಿಸು. ಇಲ್ಲದಿದ್ರೆ ನಿಮ್ಮ ಹಾದಿ ನಿಮಗೆ, ನನ್ನ ಹಾದಿ ನನಗೆ," ದಾನಯ್ಯ ಹೇಳಿದ.

ಇದನ್ನು ಕೇಳಿ ಎದೆಯುಬ್ಬಿಸಿದ ರುಕುಮಿ ಕೆರಳಿ ಎದುರಿಗೆ ಬಂದು ನಿಂತು ಹೇಳಿದಳು-

"ಹೌದೌದು, ನೀನು ಹಾವಿನ ಬುಟ್ಟಿ ಹಿಡಿದು ಮುಂದೆ ಹೋಗು, ನಿನ್ನ ಬೆನ್ನ ಹಿಂದೆ ನಾನು ಬುಟ್ಟಿ ಹೊತ್ತು 'ಔಸ್ದಿ' ಎಂದು ಕೂಗುತ್ತ ಬರುತ್ತೇನೆ".

ದಾನಯ್ಯನ ಸಿಟ್ಟು ಭುಗಿಲ್ಲೆಂದಿತು. "ಅದೆಲ್ಲ ಯಾಕೆ ಬೇಕು? ನೀನು ಹೊಲದಲ್ಲಿ ಕಡಕ ಲಕ್ಷ್ಮಿಯಂತೆ ಕೂತಿರು, ನಾನು ದೇಹಕ್ಕೆ ಚಾಬೂಕಿನಿಂದ ಹೊಡೆದುಕೊಳ್ಳುತ್ತ ದುರಗ-ಮುರಗಿಯಂತೆ ತಿರುಗುತ್ತೇನೆ," ಆತ ಹುಚ್ಚನಂತೆ ಕೆರಳಿ, ಕೈಯಾಡಿಸುತ್ತ ಕೂಗಿದ, "ನೋಡು, ನಿನ್ನೊಂದಿಗೆ ಮದುವೆ ಮಾಡಿಕೊಳ್ಳುವುದೆಂದರೆ, ಹತ್ತು ಜನರ ನಡುವೆ ಒಬ್ಬ ಕೂತು ತಿಂದಹಾಗೆ ಅಲ್ಲವೇ? ನನಗೆ ಬೇಕಾದದ್ದು ನನ್ನ ಹಕ್ಕಿನದೇ ಒಂದು ಕುದುರೆ. ನೂರು ಜನರ ಉಗಿಬಂಡಿ ತೆಗೆದುಕೊಂಡು ನಾನೇನು ಮಾಡಲಿ?" ಆತ ತಟ್ಟನೆ ಮಾತು ನಿಲ್ಲಿಸಿದ. ಅವನಿಗೆ ಅನಿಸಿತು, ತಾನು ಬಹಳ ಮಾತನಾಡಿದೆ ಎಂದು.

ಆದರೆ ಅಷ್ಟರಲ್ಲಿ ಸುತ್ತಲೂ ನೆರೆದ ಜನ ನಗಲಾರಂಭಿಸಿದರು. ರಾವಣ್ಣಾನ ಸಂಗಡ ಬಂದ ಜನ ತುಟಿ ಹೊಲಿದವರಂತೆ ಮೌನವಾಗಿದ್ದರು. ರುಕುಮಿಯ ಕೆಂಪು ಮುಖ ಸಿಟ್ಟಿನಿಂದ ಕಪ್ಪಾಯಿತು.

"ಗೂಬೆ ಮೋರೆಯವನೇ, ನಾಲ್ಕು ಜನರ ಎದುರಿಗೆ ನನ್ನ ಮಾನ ಕಳೆದೆ. ನಿನ್ನ ಇಡೀ ವಂಶವನ್ನೇ ಸರ್ವನಾಶ ಮಾಡದಿದ್ದರೆ ನಿನ್ನ

ಒಲೆಯಲ್ಲಿ ಬೇರು ಚಿಗುರುವಂತೆ ಮಾಡದೇ ಇದ್ದರೆ, ನನ್ನ ಹೆಸರು ರುಕುಮಿಯಲ್ಲ!'' ಎಂದು ಏನೋ ಹೇಳಲು ಹೊರಟ ರಾವಣ್ಣಾನನ್ನು ತಡೆದಳು ಮತ್ತು ಅಲ್ಲಿಂದ ವೇಗವಾಗಿ ಓಡುತ್ತ ಹೊರಟಳು.

ಅನಂತರ ದಾನಯ್ಯನಿಗೆ ಗೊತ್ತಾಗಿದ್ದಿಷ್ಟು ಊರಿನ ಜನ ಛೀಮಾರಿ ಹಾಕಿದ್ದರಿಂದ ರಾವಣ್ಣಾ ಹೊಲಬಿಟ್ಟು, ರಾತ್ರೋರಾತ್ರಿ ಅಲ್ಲಿಂದ ಹೊರಟುಹೋಗಿದ್ದ ಮತ್ತು ಯಾರದೋ ಪೇರಲಹಣ್ಣಿನ ತೋಟದಲ್ಲಿ ಪಾಲುಗಾರನಾಗಿದ್ದ. ರುಕುಮಿಯೂ ತನ್ನ ಗಂಟು-ಮೂಟೆಗಳೊಂದಿಗೆ ಆದಷ್ಟು ಬೇಗ ಹೋಗುವ ಸಿದ್ಧತೆಯಲ್ಲಿದ್ದಾಳೆ. "ಒಳ್ಳೇದಾಯ್ತು. ಪೀಡೆ ಕಳೆದುಹೋಯ್ತು!'' ದಾನಯ್ಯನ ತಂದೆ ಸಮಾಧಾನದಿಂದ ಹೇಳಿದ.

ದಾನಯ್ಯನ ವಸತಿಗೆ ಮೂರುನಾಲ್ಕು ಸಲ ಊರ ಜನ ಬಂದರು. "ಊರೊಳಗಿನ ಕೋಳಿ, ಹಂದಿ ಕಾಣೆಯಾಗುತ್ತಿವೆ, ವಸತಿ ಖಾಲಿ ಮಾಡಿ,'' ಎಂದು ತೊಂದರೆ ಕೊಡಲಾರಂಭಿಸಿದರು. "ಬಾಲ್ಯದಿಂದಲೂ ಸಾವಿಲ್ಲಿಯೆ ಬೆಳೆದು ದೊಡ್ಡವರಾಗಿದ್ದೇವೆ. ಈಗ ಇವರನ್ನೆಲ್ಲ ಕರಕೊಂಡು ಎಲ್ಲಿ ಹೋಗೋದು?'' ಎಂದು ದಾನಯ್ಯನ ತಂದೆ ಕಳಕಳಿಯಿಂದ ಬೇಡಿಕೊಂಡ.

"ಮಸಣಕ್ಕೆ ಹೋಗಿ, ಇಲ್ಲಾ ಎಲ್ಲಾದ್ರೂ ಹಾಳಾಗಿ ಹೋಗಿ. ದಸರೆಯೊಳಗೆ ವಸತಿ ಖಾಲಿ ಮಾಡದಿದ್ದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ,'' ಅನ್ನುತ್ತಾ ದಪ್ಪ ಚರ್ಮದ ಚಪ್ಪಲಿ ತೊಟ್ಟ, ಪೇಟಾ ಸುತ್ತಿದ ವ್ಯಕ್ತಿಯೊಬ್ಬ ಅವನನ್ನು ದುರುಗುಟ್ಟಿ ನೋಡಿದ. ಆಗ ವಸತಿಯಲ್ಲಿದ್ದ ನಾಲ್ಕೈದು ಪಡ್ಡೆ ಹುಡುಗರು ಸೆಡ್ಡು ಹೊಡೆದು ನಿಂತರು. ಆದರೆ ಮುದುಕರು ಮಾತ್ರ ಬೆದರಿದರು. ಒಳಗೊಳಗೆ ಅಂಜಿದ ಯುವಕರು ರಾತ್ರಿಯಿಡೀ ಸರದಿ ಪ್ರಕಾರ ಜಾಗರಣೆ ಮಾಡಿದರು. ಖಟ್ ಎಂದು ಸಪ್ಪಳವಾದರೂ ಸಾಕು, ತಟ್ಟನೆ ಇಡೀ ವಸತಿಗೇ ಎಚ್ಚರವಾಗುತ್ತಿತ್ತು. ದಸರಾ ಶಾಂತ ರೀತಿಯಲ್ಲಿ ಮುಗಿದಾಗ ಸಮಾಧಾನದ ನಿಟ್ಟುಸಿರುಬಿಟ್ಟರು. ಅನಂತರ ಎಷ್ಟೋ ದಿನಗಳ ಬಳಿಕ ವಸತಿಯಲ್ಲಿ ಸೆರೆಯ ಸಮಾರಾಧನೆಯಾಯಿತು. ದೊಡ್ಡದಾಗಿ ಉರಿಹಚ್ಚಿ ಇಡೀ ರಾತ್ರಿ ಮಜಾ ಮಾಡಿದರು.

ಅನಂತರ ಎರಡು ದಿನಗಳವರೆಗೆ ಅಲೆದಾಡಲು ಹೋದ ನಾಯಿಗಳು ಹಿಂದಿರುಗಿ ಬರಲೇ ಇಲ್ಲ. ದಾನಯ್ಯನ ತಂದೆಗೆ ಮೂರು ನಾಯಿಗಳು ಕಾಣಸಿದವು. ಆದರೆ ಅವುಗಳೆಲ್ಲ ಹೊಟ್ಟೆಯುಬ್ಬರಿಸಿ ಸತ್ತಿದ್ದವು. ಉಳಿದವು ಸಿಗಲೇ ಇಲ್ಲ. ಆದರೆ ಚೇಷ್ಟೆ ಮಾಡಿದ ಹುಡುಗರು ಉಳಿದ ನಾಯಿಗಳು ರಾತ್ರಿ ಬರುತ್ತವೆ ಎಂದು ಹೇಳಿ ತಮ್ಮ ಕೆಲಸದಲ್ಲಿ ಮಗ್ನರಾದರು. ಈ ಹಿಂದೆ ಎಷ್ಟೋ ಸಲ ನಾಯಿಗಳು ನಸುಕಿನಲ್ಲಿ ಹಿಂದಿರುಗಿದ್ದೂ ಉಂಟು. ಆದರೆ ದಾನಯ್ಯನ ತಂದೆ ಮಾತ್ರ ಅಂಜಿಕೆಯಿಂದ ಇಡೀ ರಾತ್ರಿ ಎಚ್ಚರವಾಗಿದ್ದ. ಮಧ್ಯರಾತ್ರಿಗೆ ಒಮ್ಮೆಲೆ ನೆಲದೊಡಲು ಸಿಡಿದು ಹೊರಬಿದ್ದ ಜ್ವಾಲೆಯಂತೆ ಉರಿವ ಸಾವಿರಾರು ಪಂಜುಗಳು ಕಾಣಸಿದವು. ಬೆಂಕಿಯ ಬಾಣಗಳು ಬಂದು ನೋಡನೋಡುತ್ತಿರುವಂತೆ ಜೋಪಡಿಗಳು ಭುಗ್ಗನೆ ಹೊತ್ತಿಕೊಂಡವು. ಎರಡೂ ಕೈಗಳಲ್ಲಿ ಎರಡು ಪಂಜು ಹಿಡಿದು ರುಕುಮಿ ಮೈಮೇಲಿ ಬಂದವರಂತೆ ಅಷ್ಟೆಲ್ಲ ಗಂಡಸರ ನಡುವೆ ಅತ್ತಿತ್ತ ಓಡಾಡುತ್ತಾ ಕುಣಿಯುತ್ತಿದ್ದಳು. ಹುಡುಗರಿಗೆ ಮಾತ್ರ ಪಂಚೆಯುಡಲೂ ಪುರಸೊತ್ತು ಸಿಗಲಿಲ್ಲ. ಯಾರೋ ಭಲ್ಲೆ ಬೀಸಿದರು. ಅಪ್ಪನ ತೊಡೆ ಸೀಳಿತು. ಅವನನ್ನು ಮತ್ತು ಅವ್ವನನ್ನು ಕೆರೆಯಾಚೆಗೆ ಕರೆದೊಯ್ಯುವಷ್ಟರಲ್ಲಿ ದಾನಯ್ಯನ ಎಲುಬುಗಳೆಲ್ಲ ಪುಡಿ ಪುಡಿಯಾದವು. ಕೆಲವರು ತಪ್ಪಿಸಿಕೊಂಡರು. ಅವರಿಗೆಲ್ಲ ಕೈಯಲ್ಲಿ ಪಂಜು ಹಿಡಿದ ಗಂಡಸರು ಎಚ್ಚರಿಕೆ ನೀಡಿದರು.

"ಮತ್ತೊಮ್ಮೆ ಈ ಕಡೆ ಬಂದರೆ ನಿಮ್ಮನ್ನು ಕಡಿದು ನರಿ-ನಾಯಿಗಳಿಗೆ ಹಾಕುತ್ತೇವೆ ಹುಷಾರ್!" ಕೈಯಲ್ಲೊಂದು ದೀವಟಿಗೆ ಹಿಡಿದ ರುಕುಮಿ ಬೇಕಂತಲೇ ಕೆರೆಯ ಬಳಿಗೆ ಬಂದು ಕೂಗಿದಳು. "ಇದೇನು ದೊಡ್ಡದಲ್ಲವೋ ಇದಕ್ಕಿಂತಲೂ ಭಯಂಕರವಾದ ನಾಯಿಯನ್ನು ನೋಡುವಿಯಂತೆ! ನಿನ್ನ ಸರ್ವನಾಶ ಮಾಡಿದ ವಿನಾ ಹಣೆಗೆ ಕುಂಕುಮ ಹಚ್ಚಿಕೊಳ್ಳುವುದಿಲ್ಲ. ನೀನು ಬೇಕಾದ್ರೆ ಪಾತಾಳದಲ್ಲಿ ಹೋಗಿ ಅಡಗಿಕೋ. ಸತ್ತರೆ ಪಿಶಾಚಿಯಾಗಿ ಕಾಡುತ್ತೇನೆ."

ದಾನಯ್ಯ ಮೊದಲು ತಂದೆಯನ್ನು ಮರದ ಹಿಂದೆ ಮರೆಮಾಡಿ ಕೂಡ್ರಿಸಿದ. ತಾಯಿಯನ್ನು ನೀರಿನಿಂದ ಮೇಲಕ್ಕೆಳೆದು ಹೇಳಿದ, "ಈಗ ನಿನ್ನನ್ನು ಬಿಡುತ್ತೇನೆ. ಆದರೆ ಒಂದು ದಿನ ಮಾತ್ರ ನಿನ್ನ ರುಂಡ ಕತ್ತರಿಸುತ್ತೇನೋ ಇಲ್ಲವೋ ನೋಡುತ್ತಿರು."

"ಏ ಹೋಗಯ್ಯ ಹೋಗು, ರುಂಡ ಕತ್ತರಿಸುತ್ತಾನಂತೆ!" ಎನ್ನುತ್ತಾ ರುಕುಮಿ ಪಂಜನ್ನು ದಾನಯ್ಯನತ್ತ ಬೀಸಿ ಒಗೆದಳು. ಜ್ವಾಲೆ ದಾನಯ್ಯನ ಭುಜ ಸವರಿ ಹೋಯಿತು. ಪಂಜು ನೀರಿನಲ್ಲಿ ಬಿತ್ತು. ಎಣ್ಣೆ ಮಿಶ್ರಿತವಾದ ಹೊಗೆ ವಾಸನೆ ಮೂಗಿನ ತುಂಬಾ ಅಡರಿತು. ಅನಂತರ ಪಂಜುಗಳೆಲ್ಲ ಅದೃಶ್ಯವಾದವು. ಬೆಂಕಿಗೆ ಸಿಕ್ಕ ಮೂವರು ಪ್ರಾಣ ಕಳೆದುಕೊಂಡರು. ಆದರೆ ಅವರ ಬಳಿಗೆ ಯಾರೂ ಹೋಗಲಿಲ್ಲ. ಸುಟ್ಟುಕೊಂಡ ಇಂದರ ಎರಡು ದಿನಗಳ ಬಳಿಕ ಸತ್ತ. ಅನಂತರ ಜೋಪಡಿಗಳೆಲ್ಲ ನೆಲಸಮವಾದವು ಮತ್ತು ಊರ ಜನರ ಹೊಲ ಕೆರೆಯವರೆಗೆ ಚಾಚಿಕೊಂಡು ಕೆಲಸ ನಿರಾತಂಕವಾಗಿ ಸಾಗಿತು. "ನೀನೀಗ ಅಲ್ಲಿ ಹೋದರೆ ನನ್ನಾಣೆ. ಆ ರಾಕ್ಷಸರು ನಿನ್ನನ್ನು ತುಂಡು-ತುಂಡು ಮಾಡಿ ನರಿಗಳಿಗೆ ಹಾಕದೇ ಬಿಡೋದಿಲ್ಲ!" ಎಂದು ಅವ್ವ ದಾನಯ್ಯನನ್ನು ತಬ್ಬಿಕೊಂಡು ಹೇಳಿದಳು.

ಉಧ್ವಸ್ತಗೊಂಡ ವಸತಿ ಅನಂತರ ನಾಗಝರಿಗೆ ಹೊರಟುಹೋಯಿತು. ತಾಯಿ-ತಂದೆ ಅಲ್ಲೇ ಸತ್ತರು. ಅನಂತರ ಸ್ವತಂತ್ರನಾದ ದಾನಯ್ಯ ಹೊಟ್ಟೆಯಲ್ಲಿ ಕಿಚ್ಚು ಇಟ್ಟುಕೊಂಡೇ, ಹರಿತವಾದ ಥಳಥಳಿಸುವ ಕತ್ತಿಯನ್ನು ನಡಕ್ಕೆ ಕಟ್ಟಿಕೊಂಡು ಎಂಟು-ಹತ್ತು ವರ್ಷ ಸುತ್ತಾಡಿದ; ಹತ್ತಿಪ್ಪತ್ತು ಊರು ಅಲೆದ. ರಾವಣ್ಯಾ ಸತ್ತ ಬಳಿಕ ಎಲ್ಲವೂ ತಣ್ಣಗಾಯಿತು. ಆದರೆ ರುಕುಮಿ ಮಾತ್ರ ಎಲ್ಲಿ ಮಾಯವಾದಳೋ ಯಾರಿಗ್ಗೊತ್ತು! ಈಗಾಕೆ ಜೀವಂತವಾಗಿದ್ದಾಳೆನ್ನುವ ವಿಶ್ವಾಸವೂ ಅವನಲ್ಲಿ ಉಳಿದಿರಲಿಲ್ಲ. ಆದರೆ ಸತ್ತ ಬಳಿಕ ಆಕೆ ದೆವ್ವವಾಗಿ ತನ್ನ ಬೆನ್ನೇರಿ ಕೂಡುತ್ತಾಳೆಂಬ ಭಾವನೆ ಮಾತ್ರ ಅವನಲ್ಲಿತ್ತು. ಕೊನೆಗಾತ ಇಲ್ಲಿಗೆ ಬಂದು ಮಣ್ಣಲ್ಲಿ ಜೋಪಡಿ ಕಟ್ಟಿದ. ರಾಮಲಿಂಗಕ್ಕೆ ಕಾಯಿ ಒಡೆದ. ದುರಗವ್ವನಿಗೆ ಹರಕೆಯ ಕುರಿ ಸಲ್ಲಿಸಿದ ಮತ್ತು ಸುತ್ತಲೂ ಭದ್ರವಾದ ಈ ಜೋಪಡಿಯಲ್ಲಿ ನೆಲೆಯೂರಿ ಆಯುಷ್ಯ ಕಳೆದ. ಅನಂತರ ಅಲೆಮಾರಿಯಾಗಿ ತಿರುಗಾಡುತ್ತಿದ್ದ ಈ ಚಂದರ ಒಂದು ದಿನ ಪಾರಿವಾಳದಂತೆ ಬಂದು ಗೂಡು ಸೇರಿದ. ಆತನಿಗೆ ರುಕುಮಿಯ ಹೆಸರಲ್ಲ, ಪಂಜು ಹಚ್ಚಿದ ಬೆಂಕಿಯ ಬಗ್ಗೆಯೂ ಗೊತ್ತಿಲ್ಲ. ಈಗ ಅವನಿಗೆ ಪಕ್ಕದಲ್ಲಿ ಹುಲ್ಲು ಹೊರೆಯನ್ನಿಟ್ಟು ಕಣ್ತುಂಬಾ ಮಲಗುವ ಕನಸು!

"ನೀನಿನ್ನೂ ಜೀವಂತವಾಗಿದ್ದರೆ, ನೀನೆಲ್ಲಿದ್ದರೂ ಬಿಡೋದಿಲ್ಲ. ಸತ್ತರೆ, ನಾನೂ ಸತ್ತು ನಿನ್ನ ರುಂಡ ಕತ್ತರಿಸುತ್ತೇನೋ ಇಲ್ಲವೋ ನೋಡ್ತಿರು," ಹೀಗೆ ಆತನಿಗೆ ಈಗಲೂ ಅನಿಸುತ್ತಿತ್ತು. ಈಗ ಹಿಂದಿನ ಸೇಡಿನ ತೀವ್ರತೆ ಉಳಿದಿರಲಿಲ್ಲ. ಆದರೆ ಏನು ಮಾಡಬೇಕಾಗಿತ್ತೋ ಅದನ್ನು ಮಾಡುವುದಾಗಲಿಲ್ಲವಲ್ಲ ಎಂಬ ಕಸಿವಿಸಿ ಮಾತ್ರ ಹಾಗೆಯೇ ಇತ್ತು.

ಈ ಚಂದರನ ಹೊಟ್ಟೆಯೊಳಗೆ ಅಂಥ

ಕಿಚ್ಚಿಲ್ಲಿ? ಅದು ಸುಖವಾಗಿ ಮಲಗುವ ಕೀಟ!

ಜಂದರ ಹೋದ ಬಳಿಕ ಆತನಿಗೆ ಸ್ವಲ್ಪ ಹಾಯೆನಿಸಿತು. ಆದರೆ ಬೆನ್ನು ತೋರಿಸಿ ಕೂತವರ ಹಾಗೆ ಜೋಪಡಿ ಮಾತ್ರ ಒಮ್ಮೆಲೇ ಬೇವಾರ್ಸಿಯಾದಂತೆ ಅನಿಸಿತು. ದಾನಯ್ಯನಿಗೆ ರೊಟ್ಟಿ ರುಚಿ ಹತ್ತಲಿಲ್ಲ. ಈಗ ಮಾಂಸದಡಿಗೆಯ ವಾಸನೆ ಉಗ್ರವಾಗಿ ಪಸರಿಸಿತ್ತು. ತನ್ನನ್ನು ಕರೆಯಲು ಬರುವ ಜನರ ಹೆಜ್ಜೆ ಸಪ್ಪಳ ಕೇಳಿಸುತ್ತದೇನೋ ಎಂದು ಕಿವಿ ನಿಮಿರಿಸಿ ಕೂತ. ಅನಂತರ ಆಲದ ಮರದ ಕೆಳಗಿನ ಬೆಂಕಿ ಆರಿ ಮರದ ರೆಂಬೆಗಳು ಕತ್ತಲೆಯ ರೇಖೆಗಳಂತೆ ಕಾಣತೊಡಗಿದವು. ನೀಳವಾದ ಬೆಂಕಿಯ ಕೆನ್ನಾಲಿಗೆ ಕ್ಷೀಣಗೊಳ್ಳುತ್ತ ತಣ್ಣಗಾಗ ತೊಡಗಿತು. ಆಲದ ಮರದ ಕೆಳಗಿನ ಗದ್ದಲ ಕಡಿಮೆಯಾಗಿ ಜನ ಹಿಂದಿರುಗುವಾಗ ನಾಯಿಗಳಿನ್ನೂ ಕಚ್ಚಾಡುತ್ತಲೇ ಇದ್ದವು. ಸ್ವಲ್ಪ ವೇಳೆಯ ನಂತರ ಅವು ಚೆದುರಿದವು. ತಂಪು ರಾತ್ರಿ ಹಾದಿ ಕಾಯುವವರಂತೆ ಸ್ತಬ್ಧವಾದ ನಂತರ ರಸ್ತೆ ಮೇಲೆ ಹುಚ್ಚ ಮುದುಕಿಯ ಹೆಜ್ಜೆ ಸಪ್ಪಳ ಕೇಳಲಾರಂಭಿಸಿತು. ಆಕೆಗೆ ಮೈಮೇಲೆ ಬಂದು ವಿಕಾರವಾಗಿ ಕೂಗಲಾರಂಭಿಸಿದಾಗ ಕೊನೆಗಿದ್ದ ದಾನಯ್ಯನ ಜೋಪಡಿಯೂ ಕಂಪಿಸಲಾರಂಭಿಸಿತು. ದಾನಯ್ಯನ ಮೈಗೂದಲು ನಿಮಿರೆದ್ದಿತು. ಆತ ಲಗುಬಗೆಯಿಂದ ಚಿಮಣಿಯಾರಿಸಿ ಚಾಪೆ ಕೂಡ ಹಾಸದೇ ಹಾಗೇ ನೆಲದ ಮೇಲೆ ಉರುಳಿದ.

ಮರುದಿನ ಅವನಿಗೆ ಎಚ್ಚರವಾದಾಗ ಇನ್ನೂ ಬೆಳಕು ಮೂಡಿರಲಿಲ್ಲ. ಆತ ಮೈಮುರಿದು ಆಕಳಿಸಿದ. ತಲೆಗೆ ರುಮಾಲು ಸುತ್ತಿದ. ಬುಟ್ಟಿ ಹೊರಗೆ ತೆಗೆದು ಧೂಳು ಝಾಡಿಸಿದ. ಆ ಬುಟ್ಟಿಗೆ ಭದ್ರವಾದ ಚಿಲಕವೂ ಇತ್ತು. ಹಲ್ಲು ಕಿತ್ತ ಹೊಸ ನಾಗರಹಾವು ತುಂಬಾ ಉಗ್ರವಾಗಿರುತ್ತದೆ ಎನ್ನುವುದು ಅವನಿಗೆ ಅನುಭವ ಕಲಿಸಿದ ಪಾಠ. ಬಹಳ ಹಿಂದೆ ಒಮ್ಮೆ ಆತ ಕರಿನಾಗವನ್ನು ಹಿಡಿದು ಸಾದಾ ಬುಟ್ಟಿಯಲ್ಲಿ ಹಾಕಿದ್ದ. ಆಗದು ಕೆರಳಿ ಬುಟ್ಟಿ ಸಮೇತ ಎಷ್ಟು ಜೋರಾಗಿ ಎರಗಿತ್ತೆಂದರೆ ಆತ ಹಿಮ್ಮೆಟ್ಟಿ ಧೂಳಿನಲ್ಲಿ ಹೋಗಿ ಬಿದ್ದಿದ್ದ. ಸುದೈವದಿಂದ ಅದರ ಹಲ್ಲನ್ನು ಮೊದಲೇ ಕೀಳಲಾಗಿತ್ತು.

ದಾನಯ್ಯ ಭಾವಣೆಯಲ್ಲಿದ್ದ ಗೆಜ್ಜೆ ಕೋಲು



ತೆಗೆದುಕೊಂಡ. ಹಲ್ಲು ಕೀಳುವ ಇಕ್ಕಳ ಮತ್ತು ಪುಟ್ಟ ಕತ್ತಿಯನ್ನೆತ್ತಿ ಸೊಂಟಕ್ಕೆ ಬಿಗಿದ. ಅನಂತರ ಬಾಗಿಲು ಹಾಕಿಕೊಂಡು ಹೊರಬಿದ್ದ. ಆತ ನೊಮ್ಮೆ ಹೊರಳಿ ನೋಡಿದಾಗ ಎದೆ ತುಂಬಿ ಬಂತು. ಈವರೆಗೆ ಅವನು ತೊಡೆಯಷ್ಟು ದಪ್ಪ, ಎರಡು-ಮೂರು ಮಾರುದ್ದದ ಸುಮಾರು ನೂರಿಪ್ಪತ್ತು ನಾಗರಹಾವುಗಳನ್ನಾದರೂ ಹಿಡಿದಿದ್ದ. ಹೊರಬೀಳುವಾಗ ದೇಹ ಏಕತಾರಿಯ ತಂತಿಯಂತೆ ಸೆಟೆದುಕೊಂಡಿರುತ್ತಿತ್ತು. ದೇಹಕ್ಕೆ ಬೆರಳ ಸ್ಪರ್ಶವಾದರೂ ಸಾಕು, ಗೆಜ್ಜೆ ಕುಣಿಸುವ ಉತ್ಸಾಹ. ಸೊಂಟದಲ್ಲಿ ಕತ್ತಿ, ಇಕ್ಕಳ ಮತ್ತು ಕೈಯಲ್ಲಿ ಕೋಲಿದ್ದರೆ ಸಾಕು, ಇಡೀ ಜಗತ್ತೇ ಶೇಷನಾಗವಾದರೂ ಅದನ್ನು ಹಿಡಿದು ಬುಟ್ಟಿಯಲ್ಲಿ ಹಾಕುವ ಹುಮ್ಮಸ್ಸು. ಆದರೀಗ ನಡೆಯುವಾಗ ಮೊಣಕಾಲು ನೋಯುತ್ತದೆ. ಕಣ್ಣು ಮಂಜುಮಂಜಾಗುತ್ತದೆ.

ಇವತ್ತು ಒಂದು ವೇಳೆ ನಾಗರಹಾವು ಸಿಗದೇ ಹೋದರೆ?



ಆತ ಒಮ್ಮೆಲೆ ಬೆಚ್ಚಿದ. ಇಲ್ಲಿಯವರೆಗೆ ಅವನಿಗೆ ಈ ವಿಚಾರ ಹೊಳೆದಿರಲೇ ಇಲ್ಲ. ಈಗ ಒಮ್ಮೆಲೇ ಇಂಥ ವಿಚಾರ ಮೂಡಿದಾಗ ಅದನ್ನಾತ ಮರೆಯಲು ಪ್ರಯತ್ನಿಸಿದ. ಒಂದು ವೇಳೆ ಹೀಗೇನಾದರೂ ಆದರೆ ತಾನು ಮತ್ತೆ ಈ ಜೋಪಡಿ ನೋಡುವ ಹಾಗಿಲ್ಲ. ಸೆಟೆದ ಕೈಕಾಲುಗಳನ್ನು ಸಡಿಲು ಮಾಡಿಕೊಳ್ಳುತ್ತ ಇಷ್ಟೆಲ್ಲ ವರ್ಷ ಕಳೆದ. ಈಗ ಅದೆಲ್ಲ ಮುಗಿದ ಹಾಗೆ. ಕದಾಚಿತ್ ನಾಗರಹಾವು ಸಿಕ್ಕರೆ? ಇಂದಲ್ಲ ನಾಳೆಯಾದರೂ ಇದೆಲ್ಲ ಮುಗಿಯಲೇ ಬೇಕಲ್ಲ! ಯಾವ ಕಡೆ ನೋಡಿದರೂ ಎರಡೆರಡು ನಾಲಿಗೆಯ ಆ ಮುಖವೇ ಕಾಣಿಸುತ್ತದೆ.

ಆತ ಮರಳಿ ಹೊರಡಲು ಸಿದ್ಧನಾದ. ವಸತಿಯಲ್ಲಿ ಯಾರೂ ಎದ್ದಿರಲಿಲ್ಲ. ಅವನಿಗೆ ಅನಿಸಿತು. ಒಂದು ವೇಳೆ ಗೋವಿಂದನಿದ್ದಿದ್ದರೆ ಇಷ್ಟು ಹೊತ್ತಿಗಾಗಲೇ ಎದ್ದು ನಗರಕ್ಕೆ ಹೊರಡುತ್ತಿದ್ದ. ಆದರೆ ಉಳಿದವರು ರಾತ್ರಿ ಕುಡಿದು ಮಲಗಿದ್ದರಿಂದ ಈಗಲೂ ಹೆಣದಂತೆ ಬಿದ್ದುಕೊಂಡಿರಬೇಕು! ದಾನಯ್ಯ ಪಕ್ಕದಲ್ಲಿ ಹಾದುಹೋಗುವಾಗ ಎರಡು ನಾಯಿಗಳು ಸ್ವಲ್ಪ ಗುರುಗುಟ್ಟಿ ಮತ್ತೆ ಮೊದಲಿನಂತೆ ಬಿದ್ದುಕೊಂಡವು. ದಾನಯ್ಯ ಬೇವಿನಮರದ ಸನಿಹಕ್ಕೆ ಬಂದ. ಅಲ್ಲಿ ಅವನಿಗೆ ಹಣೆಗೆ ಕುಂಕುಮ ಹಚ್ಚಿಕೊಂಡು ಕುಳಿತ ಹುಚ್ಚು ಮುದುಕಿ ಕಾಣಿಸಿದಳು. ಇಷ್ಟು ಬೇಗ ಈ ಮುದುಕಿ ಎದ್ದು ಕೂತಿದ್ದಾಳಲ್ಲ ಎಂದವನಿಗೆ ಅಚ್ಚರಿಯಾಯಿತು. ಆದರೆ ಸಮೀಪ ಹೋಗಿ ನೋಡಿದರೆ, ಅದು ಕುಂಕುಮ ಬಳಿದ ಕಲ್ಲಾಗಿತ್ತು. ನನ್ನ ಕಣ್ಣುಗಳೂ ಈಗ ಮುದಿಯಾಗಿ ವಂಚಿಸುತ್ತಿವೆ ಎಂದು ಅವನಿಗನಿಸಿತು. ಆತ ಲಗುಬಗೆಯಿಂದ ಬೇವಿನಮರ ದಾಟಿ ರಸ್ತೆ ಕಡೆ ಹೊರಟಿದ್ದ. ಅಷ್ಟರಲ್ಲಿ ಮರದ ಹಿಂದೆ ಅಡಗಿ ಕಾಯುತ್ತಿದ್ದ ಮುದುಕಿ ಒಮ್ಮೆಲೇ ಅವನ ಎದುರಿಗೆ ಬಂದು ದಾರಿಗಡ್ಡವಾಗಿ ಆಗ ದಾನಯ್ಯ ಎಷ್ಟು ಬೆಚ್ಚಿದನೆಂದರೆ ಅವನ ಕೈಯಲ್ಲಿದ್ದ ಕೋಲು ತ ಬಿತ್ತು. ಆಕೆ ಎಂದಿನಂತೆ ಹಣೆಗೆ ಕುಂಕುಮ ಹಚ್ಚಿಕೊಂಡಿದ್ದಳು ಮತ್ ಚಿಂದಿ ಸೀರೆ ರಕ್ತದಲ್ಲಿ ತೊಯ್ದಂತೆ ಕೆಂಪಾಗಿತ್ತು. ಆಕೆ ಏನೂ ಮಾತ ನಿಸ್ತೇಜ ಕಣ್ಣುಗಳಿಂದ ದಿಟ್ಟಿಸುತ್ತ ಅವನೆದುರು ನಿಂತಳು. ಕೈಮೇಲಕ್ಕ ಆದರೆ ಅಷ್ಟರಲ್ಲಿ ಯಾರೋ ಹಿಂದಕ್ಕೆಳೆದುಕೊಂಡವರಂತೆ ಆಕೆ ಪುನಃ ಮ ಮರೆಯಾದಳು. ದಾನಯ್ಯ ಸ್ತಂಭೀಭೂತನಾದ. ತನಗೆ ನಿಜಕ್ಕೂ ಹುಚ್ಚು ಮುದುಕಿ ಕಾಣಿಸಿದಳೇ ಅಥವಾ ಕಣ್ಣೇ ಮೋಸ ಮಾಡಿತೆ? ಅವನಿಗೆ ಅರ್ಥವಾಗಲಿಲ್ ಆತನ ಕಾಲು ಕಂಪಿಸಲಾರಂಭಿಸಿತು.

ಇದೇ ಸಮಯಕ್ಕೆ ಸರಿಯಾಗಿ ಈ ಎದುರಿಗೆ ಬಂತಲ್ಲ ಎಂದು ಆತ ಹಣೆ ಹಣೆ ಬಡಿದು ಕೊಂಡ. ನಂತರ ಕಾಲೆಳೆ ಮುಖ್ಯ ರಸ್ತೆಗೆ ಬಂದ.

ಮೊದಲು ಸ್ವಲ್ಪ ಹೊತ್ತು ಆತನಿಗೆ ಉಸಿರುಗಟ್ಟಿದಂತಾಯಿತು. ಆದರೂ ವಸತಿ ಬಿಟ್ಟು ಗುಡ್ಡದ ಕಡೆ ಹೊರಟಾಗ ಆತನಲ್ಲಿ ಮೊದಲಿನ ಉತ್ಸಾಹ ಮತ್ತೆ ಮೂಡಿತು. ಸಣ್ಣ-ಪುಟ್ಟ ಗಿಡಗಂಟೆಗಳ ಪುಟ್ಟದಿನ್ನೆ ಮುಗಿದ ಬಳಿಕ ದಟ್ಟಪೊದೆಗಳಿಂದ ಕೂಡಿದ ಗುಡ್ಡ ಕಣ್ಣಿಗೆ ಬಿದ್ದಾಗ ಆತನ ಕೈಗೆ ಮತ್ತೆ ಚೈತನ್ಯ ಬಂತು. ಆತ ಸುಮ್ಮನೆ ಹುತ್ತವೊಂದರ ಮೇಲೆ ಕೋಲಿನಿಂದ ಬಡಿದ. ಆಗ ಸುತ್ತಲೂ ಅಕ್ಕಿ ಚೆಲ್ಲಿದ ವರಂತೆ ಲಗುಬಗೆಯಿಂದ ಹೊರಬಿದ್ದ ಗೆದ್ದಲು ಸಿಕ್ಕಸಿಕ್ಕಲ್ಲಿ ಓಡಲಾರಂಭಿಸಿದವು. ದಾನಯ್ಯ ಅದನ್ನು ನೋಡಿ ತಿರಸ್ಕಾರದಿಂದ ಉಗುಳಿದ.

ಮೊದಲು ನಾಗರಹಾವು ಹಿಡಿಯಲು ಗುಡ್ಡಕ್ಕೆ ಹೋಗಬೇಕಾಗಿರಲಿಲ್ಲ. ಈ ಅಷ್ಟಾಪೂರ ಗುಡ್ಡದ ಯಾವುದೇ ಪೊದೆಯಲ್ಲಾಗಲಿ, ಹುತ್ತದ ಮೇಲಾಗಲಿ ಕೋಲು ಅಪ್ಪಳಿಸಿದರೆ ಸಾಕು, ತಾಮ್ರದ ಬಿಸಿಬಿಸಿಯಾದ ರಸ ಉಕ್ಕಿ ಬರುವಂತೆ ಆ ಬಿಲದೊಳಗಿನಿಂದ ಒಂದಾದರೂ ಸರ್ಪ ಕೆರಳಿ ಹೊರಬರುವುದನ್ನು ಕಾಣಬಹುದಾಗಿತ್ತು. ಆದರೆ ಈಗ ಅಲ್ಲಿಯ ಎಲ್ಲ ಗಿಡ-ಗಂಟೆಗಳು ನಾಶವಾಗಿವೆ. ಹೊಲದ ಬದುವಿನ ಪಕ್ಕದಲ್ಲಿದ್ದ ಇಂಥ ಕೆಲ ಗಿಡ್ಡೆಗಳನ್ನು ಬಿಟ್ಟರೆ ಅಲ್ಲೀಗ ಮತ್ತೇನೂ ಕಣ್ಣಿಗೆ ಬೀಳುವುದಿಲ್ಲ. ದಾನಯ್ಯನಿಗೆ ಕಾಲು ಸೋತು ಬಂದದ್ದರಿಂದ, ಕೆಲವು ಕ್ಷಣ ಎಲ್ಲಿಯಾದರೂ ವಿಶ್ರಾಂತಿ ತೆಗೆದುಕೊಳ್ಳೋಣವೆ? ಎಂದೆನಿಸಿತು. ಆದರೆ ಇಂದು ಬಿಸಿಲೇರುವ ಮೊದಲೇ ನಾಗರಹಾವು ಹಿಡಿಯುವ ಕೆಚ್ಚು ಅವನನ್ನು ಸುಮ್ಮನೆ ಕೂಡ್ರಲು ಬಿಡುತ್ತಿರಲಿಲ್ಲ. ಬಿಸಿಲು ತುಂಬಾ ಚುರುಕಾಗಿತ್ತು. ಜೋಳಿಗೆ ಕೆಳಗಿಟ್ಟು ಹಾವು ಹುಡುಕುವಂಥ ಸ್ಥಳ ಅವನ ಕಣ್ಣಿಗೆ ಇನ್ನೂ ಬಿದ್ದಿರಲಿಲ್ಲ. ಅಲ್ಲಿ ಎಷ್ಟು ಕಡಿಮೆ ಮಳೆ ಬೀಳುತ್ತದೆ ಎಂದರೆ ನಾಯಿಯ ತಲೆ ತೊಯ್ದು ನೀರು ಬಾಲದವರೆಗೆ ಬಂದು ತಲುಪುವಷ್ಟರಲ್ಲಿ ತಲೆ ಒಣಗಿರುತ್ತಿತ್ತು. ಆದರೂ ಮೊದಲು ಬೀಳುವ ಮಳೆಯಿಂದ ಈ ಗುಡ್ಡ ಗಿಳಿ ಹಿಂಡು ಮುತ್ತಿದ ಹಾಗೆ ಹಚ್ಚಹಸಿರಾಗಿ ಕಾಣಸುತ್ತಿತ್ತು. ಈಗ ನೋಡಿದರೆ ಬೋಳಾದ ನೆಲ, ದನಗಳ ಹೆಜ್ಜೆ ಗುರುತು ಮತ್ತು ಅಲ್ಲಲ್ಲಿ ಕಾಣುವ ವಿರಳವಾದ ಬಿಲ. ಇಂಥಲ್ಲಿ ನಾಗರಹಾವು ಮುದ್ದಾಂ ತಂದು ಬಿಟ್ಟರೂ ನಿಲ್ಲುವುದಿಲ್ಲ.

ಮೊದಲು ಇಲ್ಲಿ ಕವಳಿ ಹಣ್ಣಿನ ದಟ್ಟವಾದ ಗಿಡಗಳಿದ್ದವು ಮತ್ತು ಸೊಂಟದೆತ್ತರವಾದ ಹುತ್ತಗಳಿದ್ದವು. ಆಚೆಗಿದ್ದ ಮಾರುತಿ ದೇವಾಲಯಕ್ಕೆ ಹೋಗಬೇಕಾದರೆ ಎಚ್ಚರಿಕೆಯಿಂದ ಹೆಜ್ಜೆಯಿಡಬೇಕಾಗುತ್ತಿತ್ತು. ಕುರಿಯಷ್ಟೇ ಅಲ್ಲ, ಆಕಳು, ಎಮ್ಮೆಗಳು ಸಹ ಅಪ್ಪಿ-ತಪ್ಪಿ ಈ ಕಡೆ ಬಂದರೆ, ಹತ್ತು-ಹದಿನೈದು ನಿಮಿಷದೊಳಗೆ ಬೆದರುಗಣ್ಣುಗಳಿಂದ ದಿಟ್ಟಿಸಿ ಬಾಲವೆತ್ತಿ ಪಲಾಯನ ಮಾಡುತ್ತಿದ್ದವು. ಈಗ ಇದೆಲ್ಲ ಹಳೆಯ ಕಥೆ. ಹಿಂದೆ ದನಕರುಗಳು ಮೇಯುತ್ತಿದ್ದ ಸ್ವಾಮಿ ಗುಡ್ಡದ ಮೇಲೆ ಎರಡಂತಸ್ತಿನ ಮನೆ ಕಟ್ಟಲಾಯಿತು. ರಸ್ತೆಯ ನಿರ್ಮಾಣವಾಯಿತು. ಬಸ್ಸುಗಳ ಓಡಾಟ ಪ್ರಾರಂಭವಾಯಿತು. ಅನಂತರ ದನ-ಕರುಗಳ ಗುಂಪು ಮುಂದೆ ಸರಿಯಿತು. ಕೊನೆಗೊಂದು ದಿನ ದನ ಕಾಯುವವರು ಇಲ್ಲಿದ್ದ ಹುಲ್ಲನ್ನೆಲ್ಲ ಕೊಯ್ದು ನೆಲವನ್ನು ಹಸನು ಮಾಡಿದರು. ಹುತ್ತಗಳು ನೆಲಸಮವಾದವು ಮತ್ತು ಸಿಕ್ಕಸಿಕ್ಕಲ್ಲಿ ಭಯಂಕರವಾದ ನಾಗರಹಾವುಗಳನ್ನು ಹೊಡೆದು-ಬಡಿದು ಕಂದಕದಲ್ಲಿ ಒಯ್ದು ಚೆಲ್ಲಿದರು. ಬಳಿಕ ಕೊಡಲಿ ಹಿಡಿದ ಜನ ಬಂದರು. ಆಗ ಗಿಡಗಳೂ ಮಾಯವಾದವು. ಈಗ ಅಂಥಲ್ಲಿ ನಾಗರಹಾವು ಸಿಗಬೇಕೆಂದರೆ ಹೇಗೆ ಸಾಧ್ಯ?

ದಾನಯ್ಯ ಮಾರುತಿ ದೇವಾಲಯದತ್ತ

ಹೊರಟ. ಅಲ್ಲಿ ಎರಡು ಆಳು ಎತ್ತರವಾದ ಒಡ್ಡು ಕಟ್ಟಲಾಗಿತ್ತು. ದಡದಲ್ಲಿ ಕಮಲದ ಹೂವಿನ ಬಳ್ಳಿ ಹಬ್ಬಿಕೊಂಡಿತ್ತು. ಮಧ್ಯದಲ್ಲಲ್ಲೋ ಅನ್ನದ ಮುದ್ದೆಯಂತಹ ಒಂದೆರಡು ಹೂಗಳು ಗೋಚರಿಸುತ್ತಿದ್ದವು. ಒಡ್ಡಿನಿಂದ ದೇವಾಲಯ ಸಾಕಷ್ಟು ದೂರದಲ್ಲಿತ್ತು. ಆದರ ಗೋಡೆಗೆ ಬಳಿದ ಸುಣ್ಣದಗೆರೆ ನೀರಿಗೆ ಬಿದ್ದು ದೀಪದಂತೆ ಕಂಪಿಸುತ್ತಿತ್ತು. ಈಗ ಮಾತ್ರ ದಾನಯ್ಯನ ಕಾಲು ಸೋತು ಹೈರಾಣಾಯಿತು. ಆತ ಗಿಡದ ಪಕ್ಕದಲ್ಲಿ ಕೂತ. ದೇವಾಲಯಕ್ಕೆ ಹೋಗೋಣವೆ? ಎಂದು ಒಂದು ಕ್ಷಣ ಅನಿಸಿತು. ಆದರೆ ಸಾಕಷ್ಟು ಸುತ್ತು ಬಳಸಿ ಹೋಗಬೇಕಾಗುತ್ತಿತ್ತು. ಆತ ಕುಳಿತಲ್ಲೇ ಮಾರುತಿಗೆ ನಮಸ್ಕರಿಸಿ, "ದೇವರೆ, ಇಂದಿನ ಕೆಲಸ ಆಗುವ ಹಾಗೆ ಮಾಡಪ್ಪ. ಹುಣ್ಣಿಮೆಯ ದಿನ ನಿನಗೊಂದು ತೆಂಗಿನಕಾಯಿ ಒಡೆಸುತ್ತೇನೆ, ಪ್ರಸಾದ ಹಂಚುತ್ತೇನೆ," ಎಂದು ಬೇಡಿಕೊಂಡ.

ಕೆಳಗೆ ಕುಳಿತ ಬಳಿಕ ಅವನಿಗೊಮ್ಮೆಲೆ ಕುಸಿದಂತಾಯಿತು. ಪುನಃ ನಾಚಿಕೆಯಿಂದ ಮುದುಡಿ ಹೋದ. ಇಷ್ಟು ವರ್ಷಗಳಲ್ಲಿ ಎಂದೂ ಇಂಥ ಕೀಳು ಕೆಲಸ ಮಾಡಿರಲಿಲ್ಲ. ನಿನ್ನೆ ಹೀಗೇಕಾಯ್ತು? ಹುಚ್ಚು ಮುದುಕಿ ಮಾಟ-ಗೀಟ ಮಾಡಿರಬಹುದೇ? ಆಕೆ ನಿನ್ನೆಯೇ ಮಡಕೆಯನ್ನೇಕೆ ನಾಗರಹಾವಿನ ಮೇಲೆ ಒಗೆದಳು? ಗೋವಿಂದನ ಜೋಪಡಿಯ ಎದುರಿಗೆ ಅದೇ ಕಾಲಕ್ಕೆ ಸರಿಯಾಗಿ ಹೇಗೆ ಹಾಜರಾದಳು? ಉಳಿದವರಲ್ಲ ಗೂರಕೆ ಹೊಡೆಯುವಾಗ ಈಕೆ ಅಷ್ಟೇ ಏಕೆ ಎದುರಿಗೆ ಬಂದಳು? ಅಥವಾ ಆಕೆ ಹುಚ್ಚು ಮುದುಕಿಯಾಗಿರಲಿಕ್ಕಿಲ್ಲ. ಬೇರೆ ಯಾರೋ ಆಕೆಯೊಳಗೆ ಪ್ರವೇಶಿಸಿ ಸರ್ವನಾಶ ಮಾಡಲು...

ಆತ ಈ ಕಲ್ಪನೆಯನ್ನು ನಿರಾಕರಿಸಿದ. ನಾಚಿಕೆಯಿಂದ ಕುಸಿಯುವಂತಾಗಿದ್ದರೂ ಆತನ ಸಿಟ್ಟು ಕ್ರಮೇಣ ಏರತೊಡಗಿತು. ಆಕೆ ಏನೋ ಮಾಟ ಮಾಡಿರಬೇಕು. ಆದರೆ ಉಳಿದವರೇನು ಸತ್ತಿದ್ದಾರೆಯೆ? ಇಷ್ಟು ವರ್ಷಗಳಿಂದ ನನ್ನನ್ನು ನೋಡುತ್ತಿದ್ದಾರೆ. ಈವರೆಗೆ ನಾನು ಯಾರ ಹರಕು ಚಿಂದಿಯನ್ನು ಸಹ ಎತ್ತಿಕೊಂಡಿಲ್ಲ. ಆದರೂ ನನಗೆ ವಸತಿ ಬಿಟ್ಟು ಹೋಗುವಂತೆ ದಬಾಯಿಸುತ್ತಿದ್ದಾರಲ್ಲ? ನಾಗರಹಾವನ್ನು ಕದಿಯಲು ನನ್ನ ಕೈಯಲ್ಲೇನು ಶಕ್ತಿಯಿಲ್ಲವೇ? ಅಲ್ಲಯ್ಯಾ, ಉಡ ಮುದಿಯಾದರೆ ಹಲ್ಲಿಯಾಗುತ್ತದೆಯೇ? ಈ ಮುದುಕ ಹೀಗೇಕೆ ಮಾಡಿದ ಎಂದು ಸ್ವಲ್ಪವಾದರೂ ಯೋಚಿಸಬೇಕಿತ್ತು. ಆ ಹುಚ್ಚು ಮುದುಕಿಯನ್ನು ಹೊಡೆಯುವುದು ಬಿಟ್ಟು ನನ್ನ ಮೂಲಕ್ಕೆ ಕೊಡಲಿ ಹಾಕುತ್ತಾರಲ್ಲ? ಆ ಹುಡುಗರೋ ಮೊದಲೇ ಉಂಡಾಡಿಗಳು. ಅವು ಸಣ್ಣವರಿದ್ದಾಗ ಕಲಿಸಿದೆ. ಹೊಟ್ಟೆ ತುಂಬುವ ಮಾರ್ಗ ತೋರಿಸಿದೆ. ಶಿರಪ್ಯಾನ ಅಪ್ಪ ಜೋಪಡಿಯಲ್ಲಿದ್ದ ಹಣ ಕದ್ದಿದ್ದ. ಸಿದ್ರಾಮನ ತಂದೆ ನನ್ನ ಕೋಟು ಮಾರಿ ತಂದಿದ್ದ. ಇಡೀ ಮಳೆಗಾಲ ತಾನು ನಡುಗುತ್ತಲೇ ಕಳೆದೆ. ಆದರೂ ತುಟಿ ಬಿಚ್ಚಲಿಲ್ಲ. ಈಗ ಇಲ್ಲಿಂದ ಹೊರಟುಹೋಗೆಂದು ಈ ಮಕ್ಕಳೇ ಹೇಳುತ್ತಿದ್ದಾರಲ್ಲ!

ಹೋಗುತ್ತೇನೆ, ಹೋಗುತ್ತೇನೆ! ಮೊದಲು ನಾಗರಹಾವು ಹಿಡಿದು ತೋರಿಸುತ್ತೇನೆ. ಅನಂತರ ಹೋಗುತ್ತೇನೆ. ಇದರಲ್ಲೇನಿದೆ ಅಂಥದ್ದು? ಯಾರಿಗೆ ಮನೆ ಇಲ್ಲವೋ ಅವರಿಗೆ ಈ ಜಗತ್ತೇ ಮನೆ.

ಆದರೆ ಹೋಗುವ ವಿಚಾರ ಬಂದ ಕೂಡಲೇ ಆತನ ಧೈರ್ಯ ಸೋರಿಹೋಯಿತು. ಹೋಗೋದೆಲ್ಲಿಗೆ? ಇನ್ನೊಮ್ಮೆ ಊರಿಗೆ ಹೋಗಬೇಕು. ಅಲ್ಲಿ ಏನಿದೆ ಎಂದು ಹೇಳಬೇಕು? ಈಗಲ್ಲಿ ಯಾರದೋ ಗೌಡರ ಜೋಳದ ಫಸಲು ತಲೆಯೆತ್ತಿ ನಿಂತಿರಬೇಕು. ಈಗಲ್ಲಿ ತನ್ನ ಜಾತಿಯವರು ಕೂಡ ಇರಲಿಕ್ಕಿಲ್ಲ. ಯಾವ ಕೆರೆ ತನ್ನನ್ನು ಬೆಳೆಸಿತೋ ಅಲ್ಲೇ

ತನ್ನ ಬಿಟ್ಟುಬಿಟ್ಟು ಕೊನೆಯುಸಿರೆಳೆಯಬೇಕು ಅಥವಾ ದೂರದ ನಾಗ್ಪುರಿಗೆ ಹೋದರೆ ಹೇಗೆ? ತನ್ನ ತಂದೆಯನ್ನು ಹೂಳಿದ್ದು ಅಲ್ಲೇ ಅಲ್ಲವೇ? ಅಲ್ಲಿ ಹೋಗಿ ಬೇಡಿಕೊಳ್ಳಬೇಕು ಅಪ್ಪಾ, ನನ್ನಿಂದ ತಪ್ಪಾಯಿತು. ಬೇರೆಯವರ ಪಾಪು ಕಷ್ಟೆ. ನಾನಾದರೂ ಏನು ಮಾಡಲಿ, ಆ ಪುಟ್ಟು ಮುದುಕಿ ನನ್ನ ಮೇಲೆ ಮಾಟ ಮಾಡಿದ್ದಾಳೆ. ಆಕೆ ಅಥವಾ ಬೇರೆ ಯಾರಾದರೂ ಮಾಡಿರಬೇಕು.

ನಾನು ವಸತಿ ಬಿಟ್ಟು ಹೊರಟಿದ್ದೇನೆಂದು ತಿಳಿದು ಆ ಹುಡುಗರೆಲ್ಲ ನಗುತ್ತಿರಬೇಕು. ಆದರೆ ಅವರಿಗೇನು ಗೊತ್ತು-ಈ ಮಾರುತಿಯ ಹೊಸ್ತಿಲ ಮೇಲೆ ತೊಲೆಯಂಥ ನಾಗ ಹಿಡಿದು, ನಡುಗುತ್ತಿರುವ ಪೂಜಾರಿಯನ್ನು ಬಿಡಿಸಿರುವೆನೆಂದು? ನಾನು ಹೊರಟುಹೋದೆನೆಂದರೆ ಈ ವಸತಿಯ ಕೃಷ್ಣಗೊಲ್ಲನೇ ಮುಗಿದಹಾಗಾಯ್ತು. ಅನಂತರ ಉಳಿದವರೆಂದರೆ ಕೇವಲ ಹುಲ್ಲು ಕೊಯ್ಯುವ, ಹಮಾಲಿ ಮಾಡುವ ಕ್ಷುದ್ರ ಕೀಟಗಳು.

ಲಕ್ಕಿ ಗಿಡ್ಡ ನೆರಳು ಸ್ವಲ್ಪ ಸರಿಯಿತು. ಬಿಸಿಲಿನಿಂದ ಮೈ ಚುರುಗುಟ್ಟುತ್ತಿತ್ತು. ಆತ ಮೇಲಕ್ಕೆದ್ದು ಜೋಳಿಗೆಯನ್ನು ಹೆಗಲಗೇರಿಸಿದ. ಮಾರುತಿಯ ಕೆರೆಯಾಚೆಗೆ ಹೋದರೆ, ಅಲ್ಲಿಯ ಹಚ್ಚ ಹಸಿರು ನೆಲ ಕಣ್ಣು ಕುಕ್ಕುತ್ತದೆ. ಮೊದಲು ಕವಳಿ ಹಣ್ಣಿನ ಗಿಡ-ಗಂಟಿಗಳು ಸಿಗುತ್ತವೆ. ಅನಂತರ ಸೀಗೇಕಾಯಿಯ ಮುಳ್ಳು ಬಳ್ಳಿ, ಬೆಳೆದ ಹುಲ್ಲು, ದಟ್ಟಗಿಡಗಳ ಸಾಲು ಕಾಣಸಿಗುತ್ತವೆ. ಒಂದು ಬದಿಗೆ ಹಾಯ್ದು ಹೋಗುವ ಚಕ್ಕಡಿಯ ಹಾದಿ ಬಿಟ್ಟರೆ, ಉಳಿದೆಲ್ಲ ಕಡೆ ಮೊಣಕಾಲೆತ್ತರದ ತರಗೆಲೆಗಳ ರಾಶಿ. ಮೇಲು ಬದಿಗೆ ಅರ್ಧ ಕುಸಿದ ಕೋಟೆಯ ಅವಶೇಷ. ಅಲ್ಲಿಯ ಕಾಲ್ದಾರಿಯನ್ನು ನೋಡಿದ ಕೂಡಲೇ ದಾನಯ್ಯನ ಮನಸ್ಸು ಒಮ್ಮೆಲೆ ಹಳಹಳಿಸಿತು. ಮಲ್ಲೇಶಿಯನ್ನು ಭೇಟಿಯಾಗಿ ಎಷ್ಟೋ ವರ್ಷಗಳಾಗಿದ್ದವು. ಈಗಲೇ ಹೊರಟುಬಿಡೋಣವೆ ಎಂದು ಅವನಿಗೆ ಅನಿಸಿತು.

ಪುಟ್ಟ ಬೆಳ್ಳಿ ದೇವರು ಕೊರಳಲ್ಲಿ ಧರಿಸಿದ ಮಲ್ಲು ಕೈಯಲ್ಲಿ ಕೊಡಲಿ ಹಿಡಿದು ಎಷ್ಟೋ ಸಲ ದಾನಯ್ಯನ ಜೊತೆಗೆ ಅಲೆದಾಡಿದ್ದ.



ಕೋಟೆಯ ಗೋಡೆಯ ಮೇಲಿಂದ ಮೇಲಿಂದ ಜಿಗಿ, ಎನ್ನುವುದೇ ತಡ, ಕಚ್ಚೆಹಾಕಿ ಸಿದ್ಧನಾಗುತ್ತಿದ್ದ; ಗುಹೆಯೊಳಗೆ ಕರಡಿ ಹೋಗಿದೆ ಎಂದರೆ ಅದರ ಬಾಗಿಲಲ್ಲಿ ಕಾಯುತ್ತ ಮಲಗುವ ಧೀರ; ಆದರೆ ಗೇಣುದ್ದ ಹಾವು ನೋಡಿದರೆ ಸಾಕು, ಥರಥರ ಕಂಪಿಸುತ್ತಿದ್ದ. ಒಬ್ಬ ಅಮಾಯಕ ಬಾಲಕನಂತೆ ಆತ ದಾನಯ್ಯನ ಸಂಗಡ ಅಲೆದಾಡಿದ. ಆನಂತರ ಯಾರದೋ ತಲೆ ಒಡೆದದ್ದರಿಂದ ಸೆರೆಮನೆ ಸೇರಿದ. ಆ ಬಳಿಕ ಅವನು ಹಿಂದಿರುಗಿದ ವಿಷಯ ದಾನಯ್ಯನಿಗೆ ತಿಳಿದಿತ್ತು. ಹಾಗಾದರೆ ಅವನನ್ನು ಭೆಟ್ಟಿಯಾಗಲು ಹೋಗಲೇ? ಬಹಳ ಮಾತನಾಡುವ ಹಂಬಲದಿಂದ ಆತ ಉತ್ಕಂಠಿತನಾದ. ಬೇಡ, ಈಗಲೇ ಬೇಡ. ಆದರೆ ಇಲ್ಲಿಂದ ಹೋಗುವ ಮೊದಲು ನಿನ್ನನ್ನು ಕಾಣದೇ ಹೋಗುವುದಿಲ್ಲ ಅಂದುಕೊಂಡ.

ಈಗ ಬಿಸಿಲು ತುಂಬಾ ಪ್ರಖರವಾಗಿತ್ತು. ಸುತ್ತಲೂ ಗಿಡಗಳಿದ್ದರೂ ಬಿಸಿಲು ದಿಟ್ಟಿಸಿ ನೋಡುವುದೇ ಕಷ್ಟ. ಎಡಕ್ಕಿರುವ ಇಳಿಜಾರು ಹಚ್ಚಹಸಿರಾಗಿತ್ತು. ಅಲ್ಲಲ್ಲಿ ಗಿಡದ ಬೊಡ್ಡೆಗೆ ಮೆತ್ತಿಕೊಂಡ ಹುತ್ತದ ಕೆಂಪು ಮಣ್ಣು. ಅದರ ಮೇಲೆ ಸ್ವಲ್ಪ ಬಿಸಿಲು ಬಿದ್ದರೆ ಸಾಕು, ಆ ಭಾಗವಷ್ಟೇ ಬಿಸಿಯಾಗುತ್ತಿತ್ತು. ಅಲ್ಲಿ ಹೋದರೆ ದಿನ್ನಿ ಏರಬೇಕಾಗಿಲ್ಲ, ಇಳಿದರೆ ಸಾಕು. ತಕ್ಷಣ ದಾನಯ್ಯ ಆ ಕಡೆ ಹೊರಳಿದ. ಎಡ-ಬಲ ನೋಡುತ್ತ ಹೊರಟ. ಪ್ರಾಯಶಃ ಮೊದಲಲ್ಲಿ ಕಾಲು ಹಾದಿ ಇದ್ದಿರಬೇಕು. ಏಕೆಂದರೆ ಎರಡೂ ಬದಿಗೆ ನೇರವಾಗಿ ಬೆಳೆದ ಹುಲ್ಲಿನ ರೇಖೆಯಂತೆ ಕಾಣಸುತ್ತಿತ್ತು. ಆದರೆ ಇಲ್ಲಿ ಬಂದ ಬಳಿಕ ಆತ ಅಸ್ವಸ್ಥಗೊಂಡ. ತನ್ನನ್ನು ಯಾರೋ ಹಿಂಬಾಲಿಸುತ್ತಿದ್ದಾರೆಂದು ಶಂಕೆಯಿಂದ ಆತ ಒಂದೆರಡು ಸಲ ಹೊರಳಿಯೂ ನೋಡಿದ. ಆದರೆ ಅಲ್ಲಿ ಯಾರೂ ಇರಲಿಲ್ಲ. ಹೆಜ್ಜೆ ಸಪ್ಪಳ ಮಾತ್ರ ಕೇಳಿಸುತ್ತಿತ್ತು. ಒಂದು ತಿರುವಿಗೆ ಬಂದ ಬಳಿಕ ಆತ ಸಂಪೂರ್ಣ ಹೊರಳಿದ ಮತ್ತು ಒಂದು ಕ್ಷಣ ಬೆಚ್ಚಿ ಬಿದ್ದ. ಅವನ ಎದುರಿಗಿರುವ ನೇರಳೆ ಗಿಡದ ಪಕ್ಕದ ಪೊದೆಯೊಂದರಲ್ಲಿ ಏನೋ ಕೆಂಪು ಕಾಣಿಸಿತು. ತಕ್ಷಣ ಅವನಿಗೆ ಹುಚ್ಚು ಮುದುಕಿಯ ನೆನಪಾಗಿ ಬಹಳ ಸಿಟ್ಟು ಬಂತು. ಕಲ್ಲಿನಿಂದ ಹೊಡೆಯಲು ಕಲ್ಲೆತ್ತಿಕೊಂಡ. ಆದರಾಕೆ ಹುಚ್ಚು ಮುದುಕಿಯಾಗಿರಲಿಲ್ಲ. ಯಾಕೆಂದರೆ ಆಕೆಯ ಹಣೆಯನ್ನು ಕುಂಕುಮದಿಂದ ಬಳಿದಿರಲಿಲ್ಲ. ಆತ ಮತ್ತಷ್ಟು ಮುಂದೆ ಹೋಗಿ ದಿಟ್ಟಿಸಿದ. ಕೆಂಪು ಸೀರೆ ಹಾಗೂ ಮುಖ ಸ್ಪಷ್ಟವಾಗಿ ಕಾಣಸುತ್ತಿತ್ತು. ಆತ ಒಮ್ಮೆಲೆ ಬೆಚ್ಚಿದ. ಇಷ್ಟು ದೂರ? ಇಷ್ಟು ವರ್ಷಗಳ ಬಳಿಕ? ಕೈಯಲ್ಲಿ ಕಲ್ಲು ಹಿಡಿದು ಸಮ್ಮೋಹಿನಿಗೆ ಒಳಗಾದವನಂತೆ ಮುಂದೆ ಸರಿದ. ಅನಂತರ ಅವನ ಮೈಸಡಿಲಾಯಿತು. ಆತ ಒಮ್ಮೆಲೆ ನಗಲಾರಂಭಿಸಿದ. ಬಳಿಕ ಪೊದೆಗೆ ಕಲ್ಲು ಹೊಡೆದು ಹಿಂದಿರುಗಿದ. ಅಲ್ಲೊಂದು ಹಲಸಿನ ಮರವಿತ್ತು. ಒಣಹುಲ್ಲು ಗಾಳಿಯಲ್ಲಿ ಹಾರಿ ಬಂದು ಅದಕ್ಕೆ ಅಂಟಿಕೊಂಡಿತ್ತು. ಆತ ಹಿಂದಿರುಗಿದ ಸ್ಥಳದಲ್ಲಿ ದಟ್ಟ ಗಿಡಗಳಿದ್ದವು ಮತ್ತು ಅಲ್ಲಲ್ಲಿ ಕರಿಕೆಯ ಹುಲ್ಲಿನ ಬರಿದಾದ ಜಾಗವಿತ್ತು. ಅದರಾಚೆಗೆ ಯಾರೋ ಒಂದು ಪುಟ್ಟ ದೇವಾಲಯ ಕಟ್ಟುವ ವಿಚಾರ ಮಾಡಿರಬೇಕು. ಅನಂತರ ಅರ್ಧಕ್ಕೇ ಬಿಟ್ಟಿರಬೇಕು. ಕಲ್ಲು ರಾಶಿಯೊಂದು ಅಲ್ಲಿತ್ತು. ಅದರ ಕೆಳಭಾಗ ಕಾಡು ಹೂವುಗಳಿಂದ ತುಂಬಿಕೊಂಡಿತ್ತು.

ಆ ಸ್ಥಳ ಸಮೀಪಿಸಿದ ದಾನಯ್ಯನ ಕಾಲು ತಂತಾನೇ ನಿಂತಿತು. ದೇಹ ಹುರಿಗೊಂಡು ಆಕ್ರಮಣವನ್ನೆದುರಿಸಲು ಸಿದ್ಧವಾಯಿತು. ಹೀಗೇಕಾಗುತ್ತದೆ ಎನ್ನುವುದು ಮಾತ್ರ ಅವನಿಗೆ ಅರ್ಥವಾಗಲಿಲ್ಲ. ದೇಹ ಹೀಗೆ ಸೆಟೆದರೆ, ಕೈ

ರೋಮಾಂಚನಗೊಂಡರೆ ಸನಿಹದಲ್ಲೆಲ್ಲೋ ನಾಗರಹಾವು ಇದೆ ಎಂದರ್ಥ. ಆತ ಜೋಳಿಗೆಯನ್ನು ಮೆಲ್ಲಗೆ ಕೆಳಗಿಳಿಸಿದ. ಕತ್ತಿ, ಇಕ್ಕಳ ಸರಿಯಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸಿದ. ಕೈಯಲ್ಲಿ ಕೋಲು ಹಿಡಿದು ನಿಶ್ಶಬ್ದವಾಗಿ ಮುಂದುವರಿದ. ಕರಿಕೆ ಹುಲ್ಲಿನ ನಡುವೆ ಕಲ್ಹಾರಿನ ಗಿಡವೊಂದು ನೀಳವಾಗಿ ತಲೆಯೆತ್ತಿ ನಿಂತಿತ್ತು. ಆತ ತಲೆ ಅಲುಗಿಸದೇ ಎಡದಿಂದ ಬಲಕ್ಕೆ ಕೇವಲ ಕಣ್ಣನ್ನಷ್ಟೇ ತಿರುಗಿಸಿದ. ಕೆಲಕ್ಷಣ ಅವನಿಗೇನೂ ಕಾಣಲಿಲ್ಲ. ಆತ ಮೆಲ್ಲಗೆ ಮತ್ತಷ್ಟು ಸರಿದು, ಆ ಕಲ್ಲು ರಾಶಿಯ ಕೆಳಗೆ ಕಣ್ಣು ಹಾಯಿಸಿ ದಿಟ್ಟಿಸಿದ.

ನೆಲಕ್ಕೆ ಹತ್ತಿಕೊಂಡ ಒಂದು ಕಲ್ಲಿನ ತಳದಲ್ಲಿ ಫಳಫಳ ಹೊಳೆಯುವ ಗೋದಿ ಬಣ್ಣದ ನಾಗರಹಾವು ಕಾಣಿಸಿತು. ಅದು ತೋಲೆಯಷ್ಟು ದಪ್ಪಗಿತ್ತು. ಅದರ ದೇಹದ ಮೇಲೆ ಚಿಪ್ಪಿನಂತಹ ಹುರುಪುರಕಾದ ಹಸುರಿತ್ತು. ದಾನಯ್ಯ ಸ್ತಂಭೀಭೂತನಾಗಿ ಒಂದು ಕ್ಷಣ ನೋಡುತ್ತ ನಿಂತ. ಆತ ಮನದಲ್ಲೇ ಅಂದಕೊಂಡ, "ಅಲ್ಲಯ್ಯ, ನೀನು ಹೀಗೆಲ್ಲ ಜನರ ಮೇಲೆ ವಿಶ್ವಾಸ ಇಡಬೇಡ. ನಿನ್ನ ಮುಖ್ಯ ಅಂಗವಾದ ಹೆಡೆಯನ್ನೇ ಹೊರ ಚಾಚಿ ಕುಳಿತಿದ್ದಿಯಲ್ಲ? ಕೋಲಿನಿಂದ ಅದರ ಮೇಲೆ ಹೊಡೆದರೆ, ನಿನ್ನ ಕಥೆ ಮುಗಿದೇ ಹೋಯಿತು!"

ನಾಗರಹಾವಿಗೆ ಅದು ಕೇಳಿಸಿತೋ ಏನೋ ಎಂಬಂತೆ ಅದು ಸ್ವಲ್ಪ ಚಲಿಸಿತು. ಅದರ ವರ್ತುಳ ಕ್ರಮೇಣ ದೊಡ್ಡದಾಯಿತು. ಅದು ತಲೆಯೆತ್ತಿ ಒಂದು ಕ್ಷಣ ದಾನಯ್ಯನನ್ನು ದಿಟ್ಟಿಸಿತು. ದಾನಯ್ಯ ಕೈ ಮುಗಿದು ಹೇಳಿದ, "ಹೌದು, ನಾನೇ ದಾನಯ್ಯ. ನನ್ನ ದಿನಗಳು

ಮುಗಿಯುತ್ತ ಬಂದಿವೆ. ಪುನಃ ಈ ಅರಣ್ಯಕ್ಕೆ ಬರಲು ಬದುಕಿರುತ್ತೇನೋ ಇಲ್ಲವೋ ಯಾರಿಗೊತ್ತು? ಸತ್ತರೆ ನಾನು ಪಾರಾದೆ. ಅಲ್ಲದೇ ನೀವೂ ಪಾರಾಗುತ್ತೀರಿ. ನನ್ನ ನಂತರ ಹಾವು ಹಿಡಿಯುವ ಯಾವ ಕೃಷ್ಣಗೊಲ್ಲನೂ ಉಳಿಯಲಾರ.''

ಜೋಡಿಸಿದ ಕೈಯನ್ನು ಕೆಳಗೆ ಬಿಟ್ಟು ದಾನಯ್ಯ ಒಂದು ಕ್ಷಣ ಸುಮ್ಮನೆ ನಿಂತ. ಆದರೆ ಹಾವು ನಿರ್ಣಯ ತೆಗೆದುಕೊಂಡ ಹಾಗೆ ಕಾಣಿಸಿತು. ಅದು ತಲೆಯನ್ನು ಪಕ್ಕಕ್ಕೆ ಹೊರಳಿಸಿ ಮೆಲ್ಲಗೆ ಚಲಿಸಲಾರಂಭಿಸಿತು.

ನಿನ್ನೆಯ ಕಿಚ್ಚನ್ನು ಹೊಟ್ಟೆಯಲ್ಲಿ ತುಂಬಿಕೊಂಡ ದಾನಯ್ಯ ಇದೇ ಕ್ಷಣದ ಹಾದಿ ಕಾಯುತ್ತ ನಿಂತಿದ್ದ. ಆತ ಮೆಲ್ಲನೆ ಹಾವಿನ ಹೊಟ್ಟೆಯ ತಳದಲ್ಲಿ ಕೋಲು ತೂರಿಸಿ. ಕ್ಷಣಾರ್ಧದಲ್ಲಿ ಅದನ್ನೆತ್ತಿ ದೂರ ಚಿಮ್ಮಿದ. ತಕ್ಷಣ ಎರಡು ಮಾರು ಉದ್ದವಿರುವ ನಾಗರಹಾವು ಹುಲ್ಲು ನೆಲದ ಮೇಲೆ ಬಂದುಬಿತ್ತು. ದಾನಯ್ಯ ಈಗ ಚಪಲತೆಯಿಂದ ಕಲ್ಲುರಾಶಿಯ ಎದುರಿಗೆ ಬಂದು ನಿಂತ. ಪಾರಾಗಬೇಕೆಂದಿದ್ದರೆ ನಾಗರಹಾವಿಗೆ ಇಡೀ ಅರಣ್ಯವೇ ಎದುರಿಗಿತ್ತು. ಆದರೆ ಹಾವು ಯಾವಾಗಲೂ ಎಳೆದು ಹಾಕಿದ ಜಾಗಕ್ಕೇ ಯಾಕೆ ಹಿಂದಿರುಗುತ್ತದೆ ಎಂಬ ರಹಸ್ಯ ಅವನಿಗೆ ತಿಳಿಯಲಿಲ್ಲ. ಹೀಗೆ ಸಿಕ್ಕಾಪಟ್ಟೆ ಬೀಸಿ ಒಗೆದದ್ದು ನಾಗರಹಾವಿಗೆ ಹಿಡಿಸಲಿಲ್ಲ. ಅದು ವೇಗದಿಂದ ಕಲ್ಲುರಾಶಿಯ ಕಡೆ ಧಾವಿಸಿತು ಮತ್ತು ಎದುರಿಗೆ ನಿಂತ ದಾನಯ್ಯನನ್ನು ಕಂಡು ಹೆಡೆ ಬಿಚ್ಚಿತು. ಅದರ ಹೆಡೆಯ ಮೇಲಿದ್ದ ಪದ್ಮ ಫಳಫಳ ಹೊಳೆಯುತ್ತಿತ್ತು. ಆತ್ಮವಿಶ್ವಾಸದಿಂದ ನಿಂತಿದ್ದ ದಾನಯ್ಯ ತಕ್ಷಣ ನಾಗರಹಾವಿನ ಮೇಲೆ ಕೋಲಿಟ್ಟ ಮತ್ತು ಅದರ ನಡುವಿನ ಭಾಗವನ್ನು ತನ್ನ ಕಾಲಿನಿಂದ ಮೆಟ್ಟಿ ಹಿಡಿದ. ಹಾವಿನ ಅರ್ಧದೇಹ ಕೋಲಿನ ಕೆಳಗೆ ಸಿಕ್ಕಿ ಒದ್ದಾಡತೊಡಗಿತು. ಆದರೆ ಹೆಡೆ ಮಾತ್ರ ಅತ್ತಿತ್ತ ರೋಷದಿಂದ ಚಲಿಸಲಾರಂಭಿಸಿತು. ಇದು ಇಡೀ ಬೇಟೆಯ ಹೃದಯಸ್ಥಾನ. ಕೆಲವು ಹುಂಬ ಜನ ಹಾವಿನ ದೇಹವನ್ನು ಹೇಗೆ ತುಳಿಯುತ್ತಾರೆಂದರೆ, ಪಾಪ ಅದರ ಬೆನ್ನು ಹುರಿಯೇ ತುಂಡಾಗುತ್ತದೆ. ಬಳಿಕ ಇಂಥ ಹಾವನ್ನು ಸ್ವತಃ ಅವರೇ ಕೊಲ್ಲಬೇಕಾಗುತ್ತಿತ್ತು. ಅಥವಾ ಕೆಲವರ ತುಳಿತ ಎಷ್ಟು ದುರ್ಬಲವಾಗಿರುತ್ತದೆ ಎಂದರೆ ಹಾವು ಒಂದೇ ಕ್ಷಣದಲ್ಲಿ ತಪ್ಪಿಸಿಕೊಂಡು, ತಿರುಗಿ ಅವರ ಮೇಲೆಯೇ ಆಕ್ರಮಣ ಮಾಡಿದಾಗ ಅದರಿಂದ ತಪ್ಪಿಸಿಕೊಳ್ಳಬೇಕಾದರೆ ಬಾಯಿಯಿಂದ ನೊರೆ ಬರುತ್ತಿದೆ.

ದಾನಯ್ಯ ಕೆಲವು ಕ್ಷಣ ಹಾಗೇ ಕಳೆದ. ಹೆಡೆಯನ್ನು ಮುಚ್ಚುತ್ತ-ಬಿಚ್ಚುತ್ತ ಹಾವು ಆವೇಶದಿಂದ ಫೂತ್ಕರಿಸುತ್ತಿತ್ತು. ಅದರ ಕಣ್ಣು ಈಗ ಕಾಯ್ದ ಕಪ್ಪು ಮಣಿಯಂತೆ ಕಾಣಲಾರಂಭಿಸಿತು. ಅದರ ಬಾಯಿಯ ಎರಡೂ ತುದಿ ಹಳದಿ ಮಿಶ್ರಿತ ದ್ರವದಿಂದ ಒದ್ದೆಯಾಯಿತು. ಒಂದೆರಡು ಸಲ ಹೆಡೆಯನ್ನು ನೆಲಕ್ಕಪ್ಪಳಿಸಿತು. ಸಳಕ್ ಸಳಕ್ ಎಂದು ಹೊರಬಾಚುವ ನಾಲಿಗೆ ಮತ್ತಷ್ಟು ಉದ್ದವಾಯಿತು. ಬಳಿಕ ದಾನಯ್ಯ ಕೋಲಿನ ಬಿಗಿ ಹಿಡಿತ ಸಡಿಲಿಸದೇ ಕತ್ತಿಯ ಮೊಂಡಭಾಗದಿಂದ ಅದರ ಮುಂಭಾಗವನ್ನು ಮತ್ತಷ್ಟು ಒತ್ತಿ ಹಿಡಿದ. ಈಗ ಅದರ ಗೇಣುದ್ದದ ಹೆಡೆಯಷ್ಟೇ ಚಡಪಡಿಸಲಾರಂಭಿಸಿತು. ದಾನಯ್ಯ ಮತ್ತಷ್ಟು ಬಗ್ಗಿದ. ಹೆಡೆಯ ಚಲನವಲನಕ್ಕೆ ತಕ್ಕಂತೆ ತನ್ನ ಕೈ ಹೊಂದಿಸಿಕೊಂಡ. ಹಾಗೂ ಕ್ಷಣಾರ್ಧದಲ್ಲಿ ಅದರ ಬಾಯಿಯನ್ನು ಬೆರಳಿನಿಂದ ಒತ್ತಿ ಹಿಡಿದ. ಮೆಲ್ಲಗೆ ಕತ್ತಿ ಸರಿಸುತ್ತ ಕೋಲಿನ ಮೇಲಿನ ಕಾಲು ತೆಗೆದ. ಇಷ್ಟರವರೆಗೆ ಒತ್ತಿ ಹಿಡಿದ ಹಾವಿನ ದೇಹ ದ್ವೇಷದಿಂದ ನೆಟ್ಟಗಾಯಿತು ಮತ್ತು ಸಟ್ ಎಂದು ಕೈಗೆ ಬಡಿದು ಅತ್ತಿತ್ತ ಹೊರಳಲಾರಂಭಿಸಿತು.

"ಹಾಂ ಹಾಂ, ನೀನು ಬೇಕಾದಷ್ಟು

ಒದ್ದಾಡು. ನಿನ್ನ ಬೆಂಕಿ ಕೇವಲ ನಿನ್ನ ಪೋಟು ದ್ದದ ಬಾಯೊಳಗೆ ಮಾತ್ರ. ಬಾಲ ರಸ್ತೆಯಷ್ಟು ಉದ್ದವಿದ್ದರೂ ಏನೂ ಮಾಡುವಹಾಗಿಲ್ಲ!" ದಾನಯ್ಯ ಹೇಳಿದ.

ಆತ ಬಲಗೈಯಲ್ಲಿ ಇಕ್ಕಳ ಹಿಡಿದು ಹಾವ ನ್ನೆತ್ತಿದ. ಅದರ ಬಾಯಿ ಈಗ ತೆರೆದಿತ್ತು. ವಕ್ರವಾದ ಹಲ್ಲು ಸ್ಪಷ್ಟವಾಗಿ ಕಾಣಸುತ್ತಿತ್ತು. ಈಗ ಬಿಸಿಲೂ ಉಗ್ರವಾಗಿತ್ತು. ಕಣ್ಣು ಅರ್ಧ ಮುಚ್ಚಿದ ವಿನಾ ಅದನ್ನು ದಿಟ್ಟಿಸುವ ಹಾಗಿರ ಲಿಲ್ಲ. ದಾನಯ್ಯನಿಗುಂತೂ ಎದುರಿಗೆಲ್ಲ ಸವರಿ ದಹಾಗೆ ಕಾಣಸುತ್ತಿತ್ತು. ಅಷ್ಟರಲ್ಲಿ ಅವನ ಲಕ್ಷ್ಯ ಒಮ್ಮೆಲೆ ಎದುರಿನ ಗಿಡದ ಕಡೆಗೆ ಹೋಯಿತು. ಯಾರೋ ಆ ಗಿಡಕ್ಕೆ ಆತು ಕೊಂಡು ನಿಂತಂತೆ ಭಾಸವಾಯಿತು. ದಿಟ್ಟಿಸಿ ನೋಡಿದಾಗ ಆ ಚಿತ್ರ ಹಸಿರು ನೀರೊಳಗಿಂದ ಎದ್ದುಬಂದಂತೆ ಕಾಣಸಿತು. ಕೆಂಪು ಸೀರೆ, ಸಂತಾಪದಿಂದ ಕೆರಳಿದ ಕೆಂಪು ಮುಖ, ನಾಗರಹಾವು ತನ್ನ ಕಣ್ಣಿಗಾಗಿ ಇದರೊಳಗಿನಿಂ ದಲೇ ಎರಡು ಹನಿ ಎತ್ತಿಕೊಂಡಂತೆ ಕಾಣುವ ವಿಷಕಾರಿಯಾದ ಕಪ್ಪು ಕಣ್ಣು, ಕೆಲಕ್ಷಣಗಳ ಬಳಿಕ ಬಿಸಿಲು ಗಿಡದ ಬೊಡ್ಡೆಯಿಂದ ಸ್ವಲ್ಪ ಸರಿಯಿತು. ನೆರಳು ಕಂಪಿಸುತ್ತ ಎಲೆಗಳ ಬೆರಳು ಅಳಿಸಿಹಾಕಿತು. ಹುತ್ತದ ಮಣ್ಣಿನಿಂದ ಮುಸುಕಿನ ಗಿಡ ಪುನಃ ಬಿಸಿಲಿನ ಹಾದಿ ಕಾಯತೊಡಗಿತು.

ದಾನಯ್ಯನ ಗೋಣಿನ ಹಿಂಭಾಗದಲ್ಲಿ ಮುಳ್ಳು ಚುಚ್ಚಿದಂತಾಯಿತು. ಆತ ಬೆಚ್ಚಿ ನೋಡಿದ. ಗಂಟು-ಗಂಟಾದ ಡೊಂಕು ಬೆರ ಳಲ್ಲಿ ಹಿಡಿದ ಇಕ್ಕಳ ನಡುಗುತ್ತಿತ್ತು. ಎಡಗೈ ಯಂತೂ ಶಕ್ತಿ ಕಳಕೊಂಡಂತೆ ಕಂಪಿಸುತ್ತಿತ್ತು. ಒಂದು ಕ್ಷಣ ಆತ ಎಲ್ಲವನ್ನೂ ಮರೆತ. ಎಡಗೈ ಬೆರಳು ಒಮ್ಮೆಲೆ ಸೋತವರಂತೆ ದುರ್ಬಲ ಗೊಂಡಿತು. ನಾಗರಹಾವು ಆವೇಶದಿಂದ ಸಿಡಿದು ಮೊಣಕೈಯಷ್ಟು ಜಾರಿತು. ಅಲ್ಲಿ ಹೆಡೆ ಬಿಚ್ಚಿ ಕೆಳಗೆ ಜೋತಾಡಲಾರಂಭಿಸಿತು. ಅನಂ ತರ ಹೆಡೆ ಮುಚ್ಚಿ, ತೆರೆದ ತೊಡೆ ಮೇಲೆ ಅಪ್ಪಳಿಸಿ, ಅತ್ಯಂತ ಜೋರಾಗಿ ದಾನಯ್ಯನ ಸಡಿಲಾದ ಮಾಂಸದಲ್ಲಿ ಹಲ್ಲು ಊರಿತು.

ಈ ಆಕಸ್ಮಿಕ ವೇದನೆಯಿಂದ ದಾನಯ್ಯ ಮೊದಲು ಗಾಬರಿಯಾದ. ಬಳಿಕ ಅವಿಶ್ವಾಸ



ವಾದಿಂದ ದಿಟ್ಟಿಸಲಾರಂಭಿಸಿದ. ಯುದ್ಧನೀತಿ ತೊರೆದ ನಾಗರಹಾವಿನ ವರ್ತನೆಯಿಂದ ಆತ ಕೆರಳಿದ. ತಕ್ಷಣ ಅದರ ತಲೆ ಝಾಡಿಸಿದ. ಮತ್ತು ಕತ್ತಿ ಎತ್ತಿ ತೊಡೆಯ ಮೇಲಿದ್ದ ಅದರ ತಲೆಯ ಮೇಲೆ ಪ್ರಹಾರ ಮಾಡಿದ. ಹೊಡೆತ ಒಂದು ಬದಿಗೆ ಬಿತ್ತು. ಅದರ ದೇಹ ಅತ್ತಿತ್ತ ಹೊಯ್ದಾಡಲಾರಂಭಿಸಿತು. ದಾನಯ್ಯ ನಾಗರ ಹಾವನ್ನೆತ್ತಿ ನೆಲಕ್ಕೆ ಬೀಸಾಡಿ, ಹುಚ್ಚು ಹಿಡಿದವರಂತೆ ಅದರ ತಲೆ ಜಜ್ಜಿ, ಕೆಂಪು ಮುದ್ದೆಯನ್ನಾಗಿ ಮಾಡಿದ. ಒದ್ದಾಡುತ್ತ ಕ್ರಮೇಣ ಉದ್ದವಾಗುತ್ತಿದ್ದ ಅದರ ಉಳಿದ ಭಾಗವನ್ನು ಕಡಿದು ಎರಡು ತುಂಡು ಮಾಡಿದ.

ಆದರೆ ಅಷ್ಟರಲ್ಲಿ ತೊಡೆ ಭಗಭಗ ಉರಿಯಲಾರಂಭಿಸಿತು. ಇಡೀ ದೇಹದ ತುಂಬಾ ಬೆಂಕಿ ವ್ಯಾಪಿಸುತ್ತಿರುವಂತೆ ಭಾಸವಾಯಿತು. ಒಂದು ಕಡೆಗಂತೂ ಸಡಿಲಾದ ಮಾಂಸಲ ಭಾಗ ಮರಗಟ್ಟಿ ಹೊಳೆಯಲಾರಂಭಿಸಿತು. ದಾನಯ್ಯ ಕತ್ತಿಯಿಂದ ತೊಡೆಯ ಆ ಭಾಗವನ್ನು ಸೀಳಿ, ಬೆರಳಿನಿಂದ ಅಮುಕಿ ರಕ್ತ ಹೊರಗೆ ಹಾಕಲು ಪ್ರಯತ್ನಿಸಿದ. ಆದರೆ ಕ್ರಮೇಣ ಮೊಣಕಾಲು ಶಕ್ತಿಹೀನವಾಗಿ ತೇಕುತ್ತ ನೆಲಕ್ಕುರುಳಿದ. ತುಂಬಾ ಕಷ್ಟದಿಂದ ಕತ್ತಿಯನ್ನೆತ್ತಿ ಹಾವಿನ ಉಳಿದ ಭಾಗವನ್ನು ಕಚಕಚನೆ ಕಡಿಯಲಾರಂಭಿಸಿದ. ಕತ್ತಿಯ ಪ್ರಹಾರಕ್ಕೊಳಗಾಗದ ಯಾವ ಭಾಗವೂ ಈಗ ಉಳಿದಿರಲಿಲ್ಲ. ಆದರೂ ಆತನ ದುರ್ಬಲ ಹೊಡೆತ ಮಣ್ಣನಲ್ಲಿ ಬೀಳುತ್ತಿತ್ತು. ಬಳಿಕ ಅವನ ಹೊಡೆತ ದುರ್ಬಲಗೊಂಡು ಕೈ ನಿಂತಿತ್ತು. ಈಗ ಬಿಸಿಲು ಪಂಜಿನಂತೆ ಉರಿಯುತ್ತಿತ್ತು. ನೆರಳು ತನ್ನ ದೇಹವನ್ನು ಕಿರಿದಾಗಿಸುತ್ತ ತಪ್ಪಿಸಿಕೊಂಡಿದ್ದು. ದಾನಯ್ಯ ಕಂಪಿಸುತ್ತ ಹಸಿಯಾದ ಜಿಗಟು ಮಣ್ಣನಲ್ಲಿ ಅಂಗಾತವಾಗಿ ಬಿದ್ದುಕೊಂಡ. ಕೆಲವು ಕ್ಷಣಗಳ ಹಿಂದೆ ಬಿಸಿಲು ದಿಟ್ಟಿಸುವಾಗ ಅರ್ಧಕಣ್ಣು ಮುಚ್ಚಬೇಕಾಗುತ್ತಿತ್ತು. ಆದರೆ ಈಗ ದಾನಯ್ಯ ಒದ್ದೆಯಾದ ತುಟ್ಟಿ ಅರ್ಧ ತೆರೆದು, ಬಿಸಿಲಿನಲ್ಲಿ ಅಗಲವಾಗಿ ಕಣ್ತೆರೆದು ಹಾಗೇ ಬಿದ್ದುಕೊಂಡಿದ್ದ. 

## ಮೃತ್ಯು ವಾರ್ತೆ

*"ಹೆಚ್ಚಿನ ಪತ್ರಕರ್ತರಿಗೆ ಸಾಮಾನ್ಯ ವಿಷಯಗಳ ಮಾಹಿತಿ ಇರುವುದಿಲ್ಲ, ಜ್ಞಾನವು ಇರುವುದಿಲ್ಲ, ಅವರದು ಬರಿಯ ಬೂಟಾಟಿಕೆ" ಎಂಬುದು ಜಾರ್ಜ್ ಬರ್ನಾಡ್ ಷಾರವರ ಮತ. ತಾನು ಮರಣಶಯ್ಯೆಯಲ್ಲಿ ಮಲಗಿರುವಾಗ ಭೇಟಿಯಾಗಲು ಬಂದ ಪತ್ರಕರ್ತರ ಬಗ್ಗೆ ಅವರು ಮಾಡಿದ ಉಪಹಾಸ ಕೇಳಿ.*

*ಸುತ್ತಮುತ್ತ ನಿಂತ ಪತ್ರಕರ್ತರು ಷಾರವರನ್ನು ಕೇಳಿಕೊಂಡರು "ನಿಮ್ಮ ಮೃತ್ಯುವಿನ ನಂತರ ಪ್ರಕಟಿಸಲು ನಿಮ್ಮ ಮೃತ್ಯುವಾರ್ತೆಯನ್ನು ಡಿಕ್ಟೇಟ್ ಮಾಡಿ."*

*ಅದಕ್ಕೆ ಷಾ ರವರೆಂದರು- "ಸರಿ, ಪತ್ರಕರ್ತರಿಗೆ ಶೋಭಿಸುವಂತಹ ಮೃತ್ಯುವಾರ್ತೆ ಕೊಟ್ಟೇನು. ನೀವು ತಪ್ಪದೇ ಅದನ್ನು ಪ್ರಕಟಿಸುವಿರಾದರೆ".*

*ಎಲ್ಲರೂ ಒಪ್ಪಿಗೆಯನ್ನಿತ್ತರು. ಅವರು ಡಿಕ್ಟೇಟ್ ಮಾಡಿದ ಮೃತ್ಯುವಾರ್ತೆ ಹೀಗಿತ್ತು "ಜಾರ್ಜ್ ಬರ್ನಾಡ್ ಷಾ ತನ್ನ ಪ್ರಾಯದ ೯೪ನೆಯ ವರ್ಷದಲ್ಲಿ ನಿಧನರಾಗಿದ್ದಾರೆ. ಆದರಿಂದ ನಮಗೆಲ್ಲಾ ತುಂಬಾ ದುಃಖವಾಗಿದೆ. ಆದರೆ ಯಾರು ಈ ಬರ್ನಾಡ್ ಷಾ?"*

• 'ಪ್ರಿಯತಮ'

# ಲಸಿಕಾ ಲೋಕ




- ಡಾ. ಡಿ.ಕೆ. ಮಹಾಬಲರಾಜು,

  'ಸಹ್ಯಾದ್ರಿ' ನಂ. ೧೦೫೩,

  ಒಂದನೇ ಮುಖ್ಯ ರಸ್ತೆ ನಾಲ್ಕನೆ ಅಡ್ಡರಸ್ತೆ

  ವಿನೋಬಾ ನಗರ,

  ದಾವಣಗೆರೆ-೫೭೭ ೦೦೪

# ಲಸಿಕಾ ಲೋಕ

"ಒಡೆದ ಹಾಲಿಗಾಗಿ ಅತ್ತೇನು ಪ್ರಯೋಜನ?", "ತಲೆ ತಾಗಿದ ಮೇಲೆ ಬುದ್ಧಿ ಬಂತು" ಎಂಬ ಬಹು ಪ್ರಚಲಿತ ನಾಣ್ಣುಡಿಗಳು ಸ್ವಲ್ಪ ಮುಂಜಾಗ್ರತೆಯಿಂದ ಮುಂದಾಗುವ ತೊಂದರೆಗಳಿಂದ ಸುಲಭವಾಗಿ ಪಾರಾಗಬಹುದೆಂಬುದನ್ನು ಉಪದೇಶಿಸುತ್ತವೆ. ಅಸ್ವಸ್ಥತೆಯಾದ ನಂತರ ಅವಸರದಿಂದ ಚಿಕಿತ್ಸೆ ಪಡೆಯುವುದಕ್ಕಿಂತ ಅಸ್ವಾಸ್ಥ್ಯವೇ ಉಂಟಾಗದಂತೆ ಮುಂಜಾಗ್ರತೆ ವಹಿಸುವುದೇ ಒಳ್ಳೆಯದೆನ್ನುವುದನ್ನು ಅರಿತ ವಿಜ್ಞಾನಿಗಳು ಹಲವಾರು ಸರಳವಾದ, ಸುಲಭವಾದ ಪ್ರತಿಬಂಧಕೋಪಾಯಗಳನ್ನು ಕಂಡುಕೊಂಡಿದ್ದಾರೆ. ಇವುಗಳಲ್ಲಿ ಲಸಿಕೆಗಳು ಬಹು ಮಹತ್ವದ್ದಾಗಿವೆ.

ನಾವು ವಾಸಿಸುವ ಪರಿಸರವೆಲ್ಲಾ ಕಣ್ಣಿಗೆ ಕಾಣದ ಸೂಕ್ಷ್ಮಾತಿಸೂಕ್ಷ್ಮ ಜೀವಿಗಳಿಂದ ತುಂಬಿಹೋಗಿದೆ. ಈ ಸೂಕ್ಷ್ಮಜೀವಿಗಳಲ್ಲಿ ಅನೇಕ ಜಾತಿಯ ರೋಗಾಣುಗಳೂ ಇವೆ. ನಿಜವಾಗಿಯೆಂದರೆ ನಾವು ಸೂಕ್ಷ್ಮಜೀವಿಗಳ ಸಾಗರದಲ್ಲಿಯೇ ತೇಲುತ್ತಿದ್ದೇವೆ. ರೋಗಾಣುಗಳು ನಮ್ಮ ದೇಹದೊಳಗೆ ನುಗ್ಗಲು ನಿರಂತರವಾಗಿ ಪ್ರಯತ್ನಿಸುತ್ತಲೇ ಇರುತ್ತವೆ. ನಾವು ತಿನ್ನುವ ಆಹಾರ, ಕುಡಿಯುವ ನೀರು, ಉಸಿರಾಡುವ ಗಾಳಿಯ ಮೂಲಕ ರೋಗಾಣುಗಳು ಬಲು ಸುಲಭವಾಗಿ ನಮ್ಮ ದೇಹವನ್ನು ಪ್ರವೇಶಿಸಬಹುದು. ಕಣ್ಣು, ಕಿವಿ, ಮೂಗು, ಬಾಯಿ, ಮಲ, ಮೂತ್ರದ್ವಾರಗಳನ್ನು ಇವು ನಿರಾತಂಕವಾಗಿ ದಾಟಬಲ್ಲವು. ನಮ್ಮನ್ನು ಕಚ್ಚುವ ಕೀಟಗಳೂ ರೋಗಾಣುಗಳನ್ನು ಒಳಗೆ ತೂರಿಸಬಹುದು. ಹೀಗಿರುವಾಗ ಇಂತಹ ಜಟಿಲ ಪರಿಸ್ಥಿತಿಯಲ್ಲಿ ಜೀವಿಸುವ ನಾವು ನಿತ್ಯ ಒಂದಿಲ್ಲೊಂದು ಕಾಯಿಲೆಯಿಂದ ನರಳುತ್ತಾ ಸದಾ ಔಷಧೋಪಚಾರ ಪಡೆಯುತ್ತಲೇ ಇರಬೇಕಾಗಿತ್ತು. ಆದರೆ ಹೀಗಾಗಿಲ್ಲವೇಕೆ?

ರೋಗಾಣುಗಳನ್ನು ನಿರೋಧಿಸುವ, ವಿರೋಧಿಸುವ, ಹತ್ತಿಕ್ಕುವ

ಅತ್ಯದ್ಭುತ ಸಾಮರ್ಥ್ಯ ನಮ್ಮ ದೇಹಕ್ಕಿದೆ. ಕೋಟೆಯ ಗೋಡೆಯು ಊರನ್ನು ರಕ್ಷಿಸುವಂತೆಯೇ ದೇಹವನ್ನು ಆವರಿಸಿದ ಚರ್ಮವು ನಮ್ಮನ್ನು 'ರೋಗಾಣುಗಳಿಂದ ಕಾಪಾಡುತ್ತದೆ. ಕಣ್ಣೀರು, ಸಿಂಬಳ, ಜೊಲ್ಲು, ಜಠರಾಮ್ಲ ಇವೆಲ್ಲವುಗಳಲ್ಲಿಯೂ ರೋಗಾಣುಗಳನ್ನು ಕೊಲ್ಲುವ ರಾಸಾಯನಿಕಗಳಿವೆ. ಕೆಮ್ಮು, ಸೀನು, ಉಗುಳು ಇವೂ ರೋಗಾಣುಗಳನ್ನು ಹೊರಹಾಕುವ ಉಪಾಯಗಳೇ. ಜ್ವರ ಬರುವುದೂ ರೋಗಾಣುಗಳನ್ನು ಸಂಹರಿಸುವ ಉದ್ದೇಶದಿಂದಲೇ. ಹೀಗೆ ನಮ್ಮ ಶರೀರವು ತನ್ನನ್ನು ತಾನು ರಕ್ಷಿಸಿಕೊಳ್ಳಲು ಹಲವಾರು ತಂತ್ರಗಳನ್ನು ಬಳಸುತ್ತದೆ. ಅಲ್ಲದೆ ನಾವು ಶುಚಿತ್ವದ ನಿಯಮಗಳನ್ನು ಪಾಲಿಸುವುದೂ ರೋಗಾಣುಗಳಿಂದ ಪಾರಾಗಲೆಂದೇ.

ಕಾವಲುಗಾರನ ಕಣ್ಣು ತಪ್ಪಿಸಿ ಕೋಟೆಯೊಳಗೆ ವೈರಿಗಳು ನುಗ್ಗುವ ಹಾಗೆಯೆ ಕೆಲವೊಮ್ಮೆ ರೋಗಾಣುಗಳೂ ನಮ್ಮ ರಕ್ಷಣಾ ಪಹರೆಯಿಂದ ಪಾರಾಗಿ ದೇಹವನ್ನು ಪ್ರವೇಶಿಸಿಬಿಡುತ್ತವೆ. ಕೋಟೆಯೊಳಗಡೆ ಕಾಲಿಟ್ಟ ವೈರಿಗಳೊಂದಿಗೆ ಸೆಣಸಾಡಲು ಸೈನಿಕರು ಸಜ್ಜಾಗಿಯೇ ಇರುವಂತೆ ದೇಹದೊಳಗೆ ಹೊಕ್ಕ ರೋಗಾಣುಗಳ ವಿರುದ್ಧ ಹೋರಾಡಲು ಅನೇಕ ರಕ್ತಕಣಗಳು ಸಿದ್ಧವಾಗಿರುತ್ತವೆ. ರೋಗಾಣುವು ದೇಹದೊಳಗೆ ನುಸುಳುತ್ತಿದ್ದಂತೆ ದೇಹವೇ ಒಂದು ರಣಾಂಗಣವಾಗಿಬಿಡುತ್ತವೆ. ರಣಕಹಳೆ ಮೊಳಗುತ್ತಿದ್ದಂತೆ ಅಸಂಖ್ಯಾತ ಸೈನಿಕರುಗಳು (ರೋಗಾಣುಗಳನ್ನು ಸಂಹರಿಸುವ ಕಣಗಳು) ಹುಟ್ಟಿಬಂದು, ವೈರಿ ಪಡೆಗೆ ಮುತ್ತಿಗೆ ಹಾಕಿ ತಮ್ಮ ಶಕ್ತಿಮೀರಿ ಕಾದಾಡುತ್ತಾರೆ. ವೈರಿ ರೋಗಾಣುಗಳೂ ಸುಮ್ಮನೆ ಕೂತಿರದೆ ತಮ್ಮಲ್ಲಿನ ವಿಷ ವಸ್ತುಗಳನ್ನು ಸಿಡಿಸುತ್ತವೆ. ಸದ್ದಿಲ್ಲದೇ ನಡೆಯುವ ಈ ಭಯಂಕರ ಕಾಳಗದಲ್ಲಿ ಎರಡೂ ಕಡೆಯಲ್ಲಿಯೂ ಅಪಾರವಾಗಿ ಸಾವು-ನೋವು ಸಂಭವಿಸುತ್ತದೆ. ಯುದ್ಧದಲ್ಲಿ ದೇಹದ ಕಣಗಳ ಕೈಮೇಲಾದರೆ, ರೋಗಾಣುಗಳು ನೆಲೆಯೂರದಂತೆ ನಶಿಸಿಹೋಗುತ್ತವೆ. ಅಪರೂಪಕ್ಕೊಮ್ಮೆ ರೋಗಾಣುಗಳ ಕೈಯೇ ಮೇಲಾಗಿ ದೇಹವನ್ನು ಆಕ್ರಮಿಸುತ್ತವೆ. ಆಗ ನಮಗೆ ಕಾಯಿಲೆ ಉಂಟಾಗುತ್ತದೆ.

ಹೀಗೆ ಒಳಗೆ ಸೇರಿದ ರೋಗಾಣುಗಳನ್ನು ಗುರುತಿಸಿ ಅವುಗಳನ್ನು ನಾಶಗೊಳಿಸುವ ಸಾಮರ್ಥ್ಯ ನಮ್ಮ ದೇಹಕ್ಕಿದೆ. ಈ ಶಕ್ತಿಯನ್ನೇ ನಾವು ರೋಗನಿರೋಧಕ ಶಕ್ತಿಯೆನ್ನುತ್ತೇವೆ.

ಇದನ್ನೇ ವೈದ್ಯಕೀಯವಾಗಿ ವ್ಯಾಖ್ಯಾನಿಸುವುದಾದರೆ ರೋಗಾಣುಗಳ ದೇಹದ ಪ್ರೋಟೀನ್ 'ಆಂಟಿಜನ್' (ಪ್ರತಿ ವಿಷವಸ್ತು) ಆಗುತ್ತದೆ. ಪ್ರತಿ ರೋಗಾಣುವಿನಲ್ಲೂ ತನ್ನದೇ ಆದರೀತಿಯ ಆಂಟಿಜನ್ ಇರುತ್ತದೆ. ನಮ್ಮ ದೇಹ ತನ್ನದಲ್ಲದ (ಪರಕೀಯ) ಈ ಆಂಟಿಜನ್‌ಗಳ ಸುಳಿವನ್ನು ಅರಿತು ಅದಕ್ಕೆ ಸರಿಸಾಟಿಯಾದ ಪ್ರತಿಜೀವಿಯನ್ನು (ಆಂಟಿಬಾಡಿ) ಉತ್ಪಾದಿಸುತ್ತದೆ. ಪ್ರತಿವಿಷವಸ್ತು ಮತ್ತು ಪ್ರತಿಜೀವಿಗಳ ಘರ್ಷಣೆಯಿಂದಾಗಿ ರೋಗಾಣುಗಳು ನಿಷ್ಕ್ರಿಯಗೊಂಡಾಗ ದೇಹಕ್ಕೆ ರೋಗದಿಂದ ಮುಕ್ತಿ ದೊರೆಯುತ್ತದೆ.

ರೋಗಾಣುಗಳನ್ನು ಪ್ರತಿಭಟಿಸುವ, ತಟಸ್ಥಗೊಳಿಸುವ ಸಹಜವಾದ

ರೋಗನಿರೋಧಕ ಶಕ್ತಿ ನಮಗೆ ಜನ್ಮಜಾತವಾಗಿಯೇ ಬಂದಿರುತ್ತದೆ. ವಾಸ್ತವವಾಗಿ ಹುಟ್ಟಿದ ಅನಂತರವೂ ಅದು ಹೆಚ್ಚುತ್ತದೆ. ವಂಶ, ವಯಸ್ಸು, ಲಿಂಗ ಆಹಾರ, ಪರಿಸರ ಇವುಗಳು ನಮ್ಮ ರೋಗ ನಿರೋಧಕಶಕ್ತಿಯನ್ನು ನಿಷ್ಕರ್ಷಿಸುತ್ತವೆ. ಕಲುಷಿತ ಆಹಾರ, ಮದ್ಯಪಾನ, ಧೂಮಪಾನ, ಮಾನಸಿಕ ವೇದನೆ, ಚಿಂತೆ, ದಣಿವು, ವಿಕಿರಣ, ಕೆಲ ಔಷಧಿಗಳು ಹಾಗೂ ಅಪೋಷಣೆಗಳು ನಮ್ಮ ರೋಗನಿರೋಧಕ ಶಕ್ತಿಯನ್ನು ಕುಗ್ಗಿಸಿಬಿಡುತ್ತವೆ.

ಲಸಿಕೆಗಳಿಂದ ನಮ್ಮ ರೋಗನಿರೋಧಕ ಶಕ್ತಿಯನ್ನು ಕೃತ್ರಿಮವಾಗಿ ಹೆಚ್ಚಿಸಿಕೊಳ್ಳಬಹುದು. ಲಸಿಕೆಗಳು ರೋಗಾಣುಗಳ ವಿರುದ್ಧ ಹೋರಾಡುವ ಸೈನಿಕರನ್ನು ತರಬೇತಿಗೊಳಿಸುವ ಕಾರ್ಯವನ್ನೇ ಮಾಡುತ್ತವೆ. ಉದಾಹರಣೆಗೆ ನಾವು ಟೈಫಾಯಿಡ್ ಲಸಿಕೆ ತೆಗೆದುಕೊಂಡಿರುವೆವೆಂದಿಟ್ಟುಕೊಳ್ಳಿ. ಆಗ ನಮ್ಮ ದೇಹದಲ್ಲಿನ ಕಣಗಳಿಗೆ ಟೈಫಾಯಿಡ್ ರೋಗಾಣುಗಳನ್ನು ಗುರುತಿಸಿ, ಅದನ್ನು ನೆನಪಿನಲ್ಲಿರಿಸಿಕೊಳ್ಳುವ ಶಕ್ತಿ ಮೂಡುತ್ತದೆ. ಮುಂದೆಂದಾದರೂ ಟೈಫಾಯಿಡ್ ರೋಗಾಣುಗಳು ದೇಹದೊಳಗೆ ಹೊಕ್ಕವೆಂದರೆ ದೇಹವು ಕಂಪ್ಯೂಟರಿನಂತೆ ಶೀಘ್ರವಾಗಿ ಕಾರ್ಯ ನಿರ್ವಹಿಸಿ ತನ್ನ ಸ್ಮರಣ ಶಕ್ತಿಯ ಹಾಗೂ ತರಬೇತಿಯ ಬಲದಿಂದ ವೈರಿ ಪಡೆಯನ್ನು ನಿರ್ನಾಮಗೊಳಿಸುವ ಚಮತ್ಕಾರವನ್ನು ತೋರಿಸಿ ನಮಗೆ ಟೈಫಾಯಿಡ್ ಬಾರದಂತೆ ತಡೆಗಟ್ಟುತ್ತದೆ. ಹೀಗೆ ಲಸಿಕೆಗಳು ನಮ್ಮ ದೇಹದ ರೋಗನಿರೋಧಕ ಸಾಮರ್ಥ್ಯವನ್ನು ಪುನಶ್ಚೇತನಗೊಳಿಸುತ್ತವೆ.

'ಲಸಿಕೆ' ಎಂಬುದು ರಸಿಕೆ ಎಂಬ ಪದದ ರೂಪಾಂತರ. ಬರ್ಕ್ಲಿಯಲ್ಲಿ ಜನಿಸಿದ ಎಡ್ವರ್ಡ್ ಜನ್ನರ್ "ಸಿಡುಬು ಬಂದ ದನಗಳೊಂದಿಗೆ ಒಡನಾಡುವುದರಿಂದ ನಮಗೆ ಸಿಡುಬುರೋಗ ಬರುವುದಿಲ್ಲ" ಎಂದು ಗೌಳಿಗರು ಹೇಳುತ್ತಿದ್ದನ್ನು ಕೇಳಿ ಆಶ್ಚರ್ಯಗೊಂಡನಷ್ಟೇ ಅಲ್ಲ, ಈ ಬಗ್ಗೆಯೇ ಸಂಶೋಧನೆಯನ್ನು ಮುಂದುವರೆಸಿದ. ದನದ ಸಿಡುಬಿನ ರಸಿಕೆ (ಕೀವು)ಯನ್ನು ತೆಗೆದು ಮಾನವನ ಚರ್ಮವನ್ನು ಪರಚಿ ಲೇಪಿಸಿದ. ಈ ಪ್ರಯೋಗಕ್ಕೆ ಒಳಗಾದವರಿಗೆ ಸಿಡುಬು ಬಾರದ್ದನ್ನು ಕಂಡು ವಿಸ್ಮಯಗೊಂಡ. ಹೀಗೆ ಎಡ್ವರ್ಡ್ ಜನ್ನರ್ ೧೭೯೬ರಲ್ಲಿ ಲಸಿಕಾ ಲೋಕದ ಬಾಗಿಲನ್ನು ಪ್ರಥಮವಾಗಿ ತೆಗೆದು ಆ ಲೋಕದ ಪಿತಾಮಹನೆನಿಸಿಕೊಂಡ.

ಮಾನವ ಕುಲಕ್ಕೇ ದುಃಸ್ವಪ್ನವಾಗಿದ್ದ ಸಿಡುಬನ್ನು ಪ್ರಪಂಚದಿಂದಲೇ ಹೊರಹಾಕಿದ್ದು ಮಾನವನ ಒಂದು ಮಹತ್ಸಾಧನೆ. ಇದು ಸಾಧ್ಯವಾದದ್ದು ಲಸಿಕೆಯಿಂದಲೇ ಎಂಬುದನ್ನು ಮರೆಯುವಂತಿಲ್ಲ. ಇದರಿಂದ ಪ್ರೋತ್ಸಾಹಿತರಾದ ವಿಜ್ಞಾನಿಗಳು ಹಲವಾರು ಕಾಯಿಲೆಗಳಿಗೆ ಲಸಿಕೆಗಳನ್ನು ಶೋಧಿಸಿದ್ದಾರೆ. ಈಗ ಈ ಪ್ರಬಲವಾದ ಅಸ್ತ್ರದ ಬಲದಿಂದಲೇ ಅನೇಕ ಕಾಯಿಲೆಗಳ ವಿರುದ್ಧ ಸಮರ ಸಾರಲಾಗಿದೆ.

ಒಟ್ಟಿನಲ್ಲಿ ಮಾನವನ ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸಿ, ಅವನನ್ನು ಕಾಯಿಲೆಗಳಿಂದ ಕಾಪಾಡುವ ವಿಶಿಷ್ಟ ಶಕ್ತಿ ಲಸಿಕೆಗಳಿಗಿದೆ. ಆದ್ದರಿಂದ ಲಸಿಕೆಗಳನ್ನು "ಜೈವಿಕ ಗುರಾಣಿ" ಎನ್ನಬಹುದು. ಇನ್ನೂ ಸರಳವಾಗಿ

ಹೇಳಬೇಕೆಂದರೆ ಕೊಡೆ ಹಿಡಿದು ಮಳೆಯಿಂದ ರಕ್ಷಣೆ ಪಡೆಯುವಷ್ಟೇ ಸಹಜವಾಗಿ ನಾವು ಲಸಿಕೆ ತೆಗೆದುಕೊಂಡು ರೋಗಗಳ ಆಕ್ರಮಣದಿಂದ ಪಾರಾಗಬಹುದು. ಈಗ ಪ್ರಚಲಿತವಿರುವ ಕೆಲ ಜೀವರಕ್ಷಕ ಲಸಿಕೆಗಳ ಬಗೆಗೆ ತಿಳಿದುಕೊಳ್ಳೋಣ.

## ಕ್ಷಯದಿಂದ ಕಾಪಾಡುವ 'ಬಿ.ಸಿ.ಜಿ'

ಕ್ಷಯ ಜಗತ್ತಿನ ಪ್ರಮುಖ ರೋಗಗಳಲ್ಲೊಂದು. ಜಗತ್ತಿನಲ್ಲೀಗ ಎರಡು ಕೋಟಿ ಕ್ಷಯ ರೋಗಿಗಳಿದ್ದಾರೆ ಎಂಬ ಅಂದಾಜಿದೆ. ಇವರು ಕಫ, ಉಗುಳು ಮತ್ತು ಉಸಿರಿನಿಂದ ಹೊರಬಿದ್ದ ಕ್ಷಯ ರೋಗಾಣು (ಮೈಕೋಬ್ಯಾಕ್ಟೀರಿಯಂ ಟ್ಯೂಬರ್‌ಕ್ಯುಲೋಸಿಸ್)ಗಳು ಗಾಳಿಯಲ್ಲಿ ತೇಲಿಬಂದು ಆರೋಗ್ಯವಂತನ ದೇಹವನ್ನು ಸೇರುತ್ತವೆ. ಹೀಗೆ ಪ್ರತಿವರ್ಷ ೮೦ ಲಕ್ಷ ಜನರು (ಅವರಲ್ಲಿ ೩೦ ಲಕ್ಷ ಮಕ್ಕಳು) ಈ ರೋಗವನ್ನು ತಗಲಿಸಿಕೊಳ್ಳುತ್ತಿದ್ದಾರೆ. ಕ್ಷಯ ರೋಗಾಣುಗಳು ದೇಹದ ಯಾವುದೇ ಭಾಗಕ್ಕೆ ಮುತ್ತಿಗೆ ಹಾಕಬಹುದಾದರೂ, ಶ್ವಾಸಕೋಶಕ್ಕೆ ಲಗ್ಗೆ ಹಾಕುವುದೇ ಹೆಚ್ಚು. ಕ್ಷಯವೆಂದರೆ ನಾಶ, ಕೊರಗು, ಕೃಶ ಎಂದು ಅರ್ಥ. ಕ್ಷಯರೋಗಿಯು ಹುಣ್ಣಿಮೆಯ ನಂತರದ ಚಂದ್ರನಂತೆ ದಿನೇ ದಿನೇ ಬಡವಾಗುತ್ತಾ ಹೋಗುತ್ತಾನೆ. ಕ್ಷಯ ಬಂದವರಿಗೆ ಪ್ರತಿದಿನ ಸಂಜೆ ಮಾತ್ರ ಜ್ವರ ಬರುತ್ತದೆ. ಕೆಮ್ಮು ಕಫ ತಪ್ಪುವುದಿಲ್ಲ. ಟಿ.ಬಿ. ಎಂದೇ ಪರಿಚಿತವಿರುವ ಈ ಕಾಯಿಲೆಗೆ ಸಾಮಾಜಿಕ ಕಳಂಕ ಬೇರೆ ಇದೆ.

ಕ್ಷಯ ರೋಗಾಣುಗಳನ್ನು ಕಂಡುಹಿಡಿದು (ರಾಬರ್ಟ್ ಕಾಕ್-೧೮೮೨) ನೂರು ವರ್ಷಗಳು ಗತಿಸಿವೆ. ಲಸಿಕೆ ಲಭ್ಯವಾಗಿಯೇ ಎಪ್ಪತ್ತೈದು



ಬುಲೆಟ್ ಆಕಾರದ ರೇಬೀಸ್ ವೈರಸ್





ಫ್ಲೂ ವೈರಸ್   ಪೋಲಿಯೋ ವೈರಸ್

ವರ್ಷಗಳಾಗಿವೆ. ಪರಿಣಾಮಕರವಾದ ಔಷಧಿಗಳು ಆವಿಷ್ಕಾರಗೊಂಡು (೧೯೪೪) ನಲವತ್ತೈದು ವರ್ಷಗಳು ಕಳೆದಿವೆ. ಆದರೂ ಪ್ರತಿವರ್ಷ ಮೂವತ್ತುಲಕ್ಷ ಜನ (ಭಾರತದಲ್ಲಿ ೫ ಲಕ್ಷ ಜನ)ಕ್ಷಯದಿಂದ ಸಾಯುತ್ತಿದ್ದಾರೆ.

ವಾಸ್ತವವಾಗಿ ಭಾರತದ ಬಹುಪಾಲು (ಶೇ. ೫೦-೮೦)ಜನರ ದೇಹದಲ್ಲಿ ಕ್ಷಯ ರೋಗಾಣುಗಳು ಹೊಕ್ಕುಬಿಟ್ಟಿವೆ. ಆದರೂ ಶರೀರದ ರೋಗಪ್ರತಿಬಂಧಕ ಶಕ್ತಿಯಿಂದಾಗಿ ಎಲ್ಲರಲ್ಲೂ ಕ್ಷಯ ಎದ್ದುಕಾಣದು. ನಾವು ನಿತ್ರಾಣರಾದಾಗ ಒಳಗಿನ ರೋಗಾಣುಗಳು ವೃದ್ಧಿಸಿ ರೋಗವನ್ನು ಪ್ರಕಟಪಡಿಸುತ್ತವೆ. ಹೀಗಾಗಿಯೇ ಪೌಷ್ಟಿಕ ಆಹಾರ ದೊರೆಯದ ಹಾಗೂ ದಡಾರ, ನಾಯಿಕೆಮ್ಮು ಭೇದಿಯಿಂದ ಚೇತರಿಸಿಕೊಳ್ಳುತ್ತಿರುವ ಮಕ್ಕಳಿಗೆ, ಗರ್ಭಿಣಿಯರಿಗೆ, ಬಾಣಂತಿಯರಿಗೆ, ಸಕ್ಕರೆ ಕಾಯಿಲೆಯವರಿಗೆ, ಕೊಳಚೆ ವಾಸಿಗಳಿಗೆ ಇದ್ದಕ್ಕಿದ್ದಂತೆಯೇ ಕ್ಷಯ ಆರಂಭವಾಗಿಬಿಡುತ್ತದೆ.

ಕಾಲ್‌ಮಿಟೆ ಮತ್ತು ಗುರಿನ್ ವಿಜ್ಞಾನಿದ್ವಯರ ೧೩ ವರ್ಷಗಳ ನಿರಂತರ ಶ್ರಮದ ಫಲವಾಗಿ ೧೯೨೧ರಲ್ಲಿಯೇ ಕ್ಷಯವನ್ನು ತಡೆಗಟ್ಟುವ 'ಬಿ.ಸಿ.ಜಿ' ಲಸಿಕೆ ಲಭ್ಯವಾಗಿದೆ. ೧೯೨೭ರಿಂದಲೇ ಈ ಲಸಿಕೆಯನ್ನು ಉಪಯೋಗಿಸಲಾಗುತ್ತಿದ್ದರೂ ೧೯೪೮ರ ಅನಂತರ ಅದರ ಬಳಕೆ ವ್ಯಾಪಕವಾಗಿದೆ. ವಿಶ್ವ ಆರೋಗ್ಯ ಸಂಸ್ಥೆ '೧೯೬೪ ರಿಂದಲೂ 'ಬಿ.ಸಿ.ಜಿ'ಯನ್ನೇ ಕ್ಷಯರೋಗದ ವಿರುದ್ಧ ಹೋರಾಟಕ್ಕೆ ಮುಖ್ಯ ಅಸ್ತ್ರವನ್ನಾಗಿ ಆಯ್ದುಕೊಂಡಿದೆ. ೧೯೮೦ರ ಸುಮಾರಿಗೆ ಒಂದು ಲಕ್ಷ ಅಮೆರಿಕನ್ನರಲ್ಲಿ '೨೦೦ ಜನ ಕ್ಷಯದಿಂದ ಸಾಯುತ್ತಿದ್ದರು. ಈಗ ಅಲ್ಲಿ ಲಕ್ಷಕ್ಕೆ ಒಬ್ಬರು ಕ್ಷಯಕ್ಕೆ ತುತ್ತಾಗುವುದೂ ವಿರಳ. ಈ ಕ್ರಾಂತಿಕಾರಿ ಬದಲಾವಣೆಗೆ ಮೂಲಸಾಧನ ಬಿ.ಸಿ.ಜಿ. ಲಸಿಕೆ ಮತ್ತು ಜೀವನ ಮಟ್ಟದಲ್ಲಾದ ಸುಧಾರಣೆ. ಆದರೆ ಭಾರತದಲ್ಲಿ ಇಂದಿಗೂ ಪ್ರತಿ ಲಕ್ಷ ಜನರಲ್ಲಿ ನೂರು ಜನ ಕ್ಷಯದಿಂದ ಸಾಯುತ್ತಿದ್ದಾರೆ. ಇದನ್ನು ತಪ್ಪಿಸಲು ಬಿ.ಸಿ.ಜಿ. ಲಸಿಕೆಯಂತಹ ಸುಲಭದ ಮಾರ್ಗ ಮತ್ತೊಂದಿಲ್ಲ.

ಬಿ.ಸಿ.ಜಿ. ಲಸಿಕೆ ಇಂಜೆಕ್ಷನ್ ರೂಪದಲ್ಲಿದ್ದು ೦.೧ ಮಿ.ಲೀ. ದ್ರಾವಣವನ್ನು ಟ್ಯುಬರ್‌ಕ್ಯುಲಿನ್ ಸಿರಿಂಜ್‌ನಿಂದ ಎಡತೋಳಿನ ಚರ್ಮದ ಪದರಕ್ಕೆ ಚುಚ್ಚಲಾಗುತ್ತದೆ. ಭಾರತದಲ್ಲಿ ಹುಟ್ಟಿದ ಮಕ್ಕಳು ತಮ್ಮ ಪ್ರಥಮ ಹುಟ್ಟುಹಬ್ಬದ ಹೊತ್ತಿಗಾಗಲೇ ಕ್ಷಯಪೀಡಿತರಾಗಿಬಿಡುವ ಸಾಧ್ಯತೆ ಹೆಚ್ಚಾಗಿರುವುದರಿಂದ, ಮಗು ಹುಟ್ಟಿದ ದಿನವೇ ಬಿ.ಸಿ.ಜಿ. ಲಸಿಕೆಯನ್ನು ಹಾಕಿಸಿಬಿಡಬೇಕು. ಲಸಿಕೆ (ಚಾಕು) ಹಾಕಿದ ಭಾಗದಲ್ಲಿ ಉಂಟಾದ ಉಬ್ಬು ಒಂದೆರಡು ತಿಂಗಳಿನೊಳಗೆ ಹುಣ್ಣಾಗಿ ಮಾಗಿ ಅನಂತರ ಹಕ್ಕಳೆ ಉದುರಿ, ೫ ಮಿ.ಮೀ. ವ್ಯಾಸದ ಕಲೆ ಶಾಶ್ವತವಾಗಿ ಉಳಿಯುತ್ತದೆ. ಹೀಗಾದರೆ ಮಾತ್ರ ಲಸಿಕೆ ಯಶಸ್ವಿಯಾಗಿ ಮೈಗೂಡಿದೆ ಎಂದು ಅರ್ಥ.

ಒಮ್ಮೆ ಬಿ.ಸಿ.ಜಿ. ಲಸಿಕೆ ಪಡೆದವರು ೩೦ ವರ್ಷಗಳವರೆಗೂ ಕ್ಷಯದಿಂದ ಮುಕ್ತರಾಗಿದ್ದಕ್ಕೆ ನಿದರ್ಶನಗಳಿವೆ. ಮಾರಕವಾದ ಮಿದುಳಿನ ಕ್ಷಯದಿಂದ ಮಕ್ಕಳನ್ನು ಪಾರು ಮಾಡುವ ಖ್ಯಾತಿಯೂ ಬಿ.ಸಿ.ಜಿಗೆ ಇದೆ; ಜತೆಗೆ ಇದು

ಕುಷ್ಠರೋಗವನ್ನು ಪ್ರತಿಬಂಧಿಸುತ್ತದೆ ಎಂಬುದು ಇತ್ತೀಚೆಗೆ ತಿಳಿದುಬಂದಿದೆ.

**ಪೋಲಿಯೋರಹಿತ ಪ್ರಪಂಚ ಸೃಷ್ಟಿಸುವ ಪೋಲಿಯೋ ಲಸಿಕೆ**

ಮಕ್ಕಳನ್ನು ಅಂಗವಿಕಲಗೊಳಿಸುವ ಪೋಲಿಯೋ ಒಂದು ಅಂಟುರೋಗ. ವೈರಸ್‌ನಿಂದ ಕಲುಷಿತವಾದ ನೀರು ಮತ್ತು ಆಹಾರದ ಮೂಲಕ ಈ ರೋಗ ಪ್ರಸಾರಗೊಳ್ಳುತ್ತದೆ. ಐದು ವರ್ಷದೊಳಗಿನ ಮಕ್ಕಳನ್ನೇ ಹೆಚ್ಚಾಗಿ ಕಾಡುವ ಪೋಲಿಯೋ ಆರಂಭವಾಗುವುದು ಜ್ವರ, ಶೀತ, ತಲೆನೋವಿನಂತಹ ಲಕ್ಷಣಗಳಿಂದ. ಇದಾದ ಒಂದು ವಾರದೊಳಗೆ ಮಗುವಿನ ಕೈ, ಕಾಲುಗಳಲ್ಲಿ ಶಾಶ್ವತವಾದ ಬಲಹೀನತೆ ಉಂಟಾಗುತ್ತದೆ.

ಪೋಲಿಯೋ ಲಸಿಕೆ ಕಂಡುಹಿಡಿಯಲ್ಪಡುವುದಕ್ಕಿಂತ ಮೊದಲು ಅಮೆರಿಕ ದೇಶದಲ್ಲಿ ಪ್ರತಿವರ್ಷ ೨ ಲಕ್ಷ ಮಕ್ಕಳು ಇದರಿಂದಾಗಿ ಅಂಗವಿಕಲರಾಗುತ್ತಿದ್ದವರಂತೆ. ಲಸಿಕೆಯನ್ನು ವ್ಯಾಪಕವಾಗಿ ಬಳಸಲಾರಂಭಿಸಿದ ನಂತರ ಅಲ್ಲಿ ಈ ಸಂಖ್ಯೆ ಇಂದು ಹತ್ತಕ್ಕಿಂತ ಹೆಚ್ಚಾಗಿಲ್ಲ. ಕೆಲವಾರು ವರ್ಷಗಳ ಹಿಂದೆ ಭಾರತದಲ್ಲಿಯೂ ಪ್ರತಿದಿನ ೫೦೦ ಮಕ್ಕಳು ಪೋಲಿಯೋ ರೋಗಕ್ಕೆ ತುತ್ತಾಗುತ್ತಿದ್ದವು. ಈಗ ಪರಿಸ್ಥಿತಿ ಸ್ವಲ್ಪ ಸುಧಾರಿಸಿದೆ. ಆದರೂ ಐದು ವರ್ಷ ವಯೋಮಿತಿಯೊಳಗಿನ ನಮ್ಮ ದೇಶದ ಸಾವಿರ ಮಕ್ಕಳಲ್ಲಿ ಇಬ್ಬರು ಪೋಲಿಯೋಪೀಡಿತರಾಗಿದ್ದಾರೆಂದು ಅಂದಾಜಿಸಲಾಗಿದೆ.

ಪೋಲಿಯೋ ತಂದುಕೊಂಡು ಜೀವನಪರ್ಯಂತ ಕಷ್ಟಪಡುವುದಕ್ಕಿಂತ ಲಸಿಕೆ ಪಡೆದು ಪೋಲಿಯೋ ಮುಕ್ತರಾಗುವುದು ಒಳ್ಳೆಯದಲ್ಲವೆ? ಪೋಲಿಯೋ ಲಸಿಕೆ ದ್ರವರೂಪದಲ್ಲಿದ್ದು, ಇದನ್ನು ಮಕ್ಕಳ ಬಾಯಿಗೆ ಎರಡುತೊಟ್ಟು ಹನಿಸಲಾಗುತ್ತದೆ. ಮಗು ಹುಟ್ಟಿದ ದಿನ, ಮಗುವಿಗೆ ೬ ವಾರ, ೧೦ ವಾರ, ೧೪ ವಾರ, ಒಂದೂವರೆಯಿಂದ ಎರಡು ವರ್ಷವಾದಾಗ ಹೀಗೆ ಐದು ಬಾರಿ ಪೋಲಿಯೋ ಹನಿಯನ್ನು ಹಾಕಿದಲ್ಲಿ ಮಗುವು ಪೋಲಿಯೋದಿಂದ ಪಾರಾಗುತ್ತದೆ. ಇಂಜೆಕ್ಷನ್ ರೂಪದ ಪೋಲಿಯೋ ಲಸಿಕೆಯೂ ಇದೆ. ಆದರೆ ಇದು ನಮ್ಮ ದೇಶದಲ್ಲಿ ಬಳಕೆಯಲ್ಲಿಲ್ಲ.

**ಡಿಫ್ತೀರಿಯ, ನಾಯಿಕೆಮ್ಮು ಧನುರ್ವಾಯು ಮೂರಕ್ಕೂ ಒಂದೇ ಅಸ್ತ್ರ - ಡಿ.ಪಿ.ಟಿ.**

**ಡಿಫ್ತೀರಿಯ**

ಗಂಟಲುಮಾರಿಯ ರೋಗಾಣುಗಳು ಗಂಟಲಿನಲ್ಲೇ ಬೆಳೆದು, ತೆಳು ಪದರವನ್ನು ಸೃಷ್ಟಿಸಿ, ಉಸಿರಾಟಕ್ಕೇ ಸಂಚಕಾರ ಉಂಟು ಮಾಡುವುದಲ್ಲದೆ ವಿಷವನ್ನೂ ಸ್ರವಿಸುತ್ತವೆ. ರೋಗಿಯ ಉಸಿರು, ಎಂಜಲು ಹಾಗೂ ಆತ ಬಳಸುವ ವಸ್ತುಗಳ ಸಂಪರ್ಕಕ್ಕೆ ಬಂದವರಿಗೆ ರೋಗ ಸುಲಭವಾಗಿ ಅಂಟಿಬಿಡುತ್ತದೆ.

ಅತಿಯಾದ ಜ್ವರ, ಗಂಟಲುನೋವು, ಉಸಿರಾಟದ ತೊಂದರೆ, ಗಂಟಲಲ್ಲಿ ಬೆಳೆದ ಬೂದುವರ್ಣದ ಪೊರೆ ಇವು ಡಿಫ್ತೀರಿಯದ ಪ್ರಮುಖ

ಲಕ್ಷಣಗಳು. ಡಿಫ್ತೀರಿಯಾದ ದುರಂತಕ್ಕೆ ರೋಗಾಣುಗಳು ಉತ್ಪತ್ತಿ ಮಾಡಿದ ವಿಷವೇ ಕಾರಣ. ಈ ವಿಷಕ್ಕೆ ಪ್ರತಿವಿಷವನ್ನು ೧೮೯೦ರಲ್ಲಿ ಕಂಡುಹಿಡಿದ ಬೆಹರಿಂಗ್‌ನಿಗೆ ಆ ಕಾರಣದಿಂದಾಗಿಯೆ ನೋಬೆಲ್ ಬಹುಮಾನ ಬಂತು.

ಹಲವಾರು ದೇಶಗಳಿಂದ ಇಂದು ಡಿಫ್ತೀರಿಯ ಪಲಾಯನ ಮಾಡಿದೆಯಾದರೂ ನಮ್ಮ ದೇಶದಲ್ಲಿ ಪ್ರತಿವರ್ಷ ಹತ್ತಿಪ್ಪತ್ತು ಸಾವಿರ ಮಕ್ಕಳನ್ನಾದರೂ ತಪ್ಪದೆ ಕಾಡುತ್ತಿದೆ.

## ನಾಯಿಕೆಮ್ಮು

ನೂರಾರು ದಿನ ಎಡಬಿಡದೆ ಕೆಮ್ಮುವ, ಕೆಮ್ಮಿ ಕೆಮ್ಮಿ ಎದೆಗೂಡಿನ ಗಾಳಿಯನ್ನೆಲ್ಲಾ ಹೊರಹಾಕಿ ಪ್ರಯಾಸಪಡುತ್ತಾ ಉಫ್ ಎಂದು ದೀರ್ಘವಾದ ಉಸಿರೆಳೆದುಕೊಳ್ಳುತ್ತಿರುವ ಮಕ್ಕಳನ್ನು ಕಂಡವರ ಕರುಳು ಚುರುಗುಟ್ಟದಿರದು. ಚಳಿಗಾಲದಲ್ಲಿ ೨ ರಿಂದ ೩ ವಯಸ್ಸಿನ ಮಕ್ಕಳನ್ನೇ ಹೆಚ್ಚಾಗಿ ಹಿಂಸಿಸುವ ಈ ಜಾಡ್ಯ ಹೆಸರಿಗೆ ಮಾತ್ರ ನಾಯಿಕೆಮ್ಮು ಆದರೆ ಇದು ಮಾನವನಲ್ಲದೆ ಮತ್ತಾವ ಪ್ರಾಣಿಗಳಿಗೂ ಬರುವುದಿಲ್ಲ, ಕೆಮ್ಮಿನೊಂದಿಗೆ ಮಗುವಿಗೆ ವಾಂತಿ, ಜ್ವರ, ನೆಗಡಿಗಳೂ ಬರುತ್ತವೆ. ಕೆಮ್ಮಿನ ರಭಸದಿಂದ ಕೆಲವೊಮ್ಮೆ ಕಣ್ಣಿನಲ್ಲಿ, ಮೂಗಿನಲ್ಲಿ ರಕ್ತಸ್ರಾವವಾಗುವುದೂ ಉಂಟು. ಇದರಿಂದಾಗಿ ಹರ್ನಿಯವಾಗುವ, ಗುದನಾಳ ಕೆಳಜಾರುವ ಸಂಭವವೂ ಇಲ್ಲದಿಲ್ಲ.

ನಾಯಿ ಕೆಮ್ಮಿನಿಂದ ನರಳಿದ ಕೆಲಮಕ್ಕಳು ಸತ್ತರೆ, ಗುಣಮುಖರಾದ ಮಕ್ಕಳು ನಿತ್ರಾಣ, ಭೇದಿ, ಕ್ಷಯಗಳ ಹಿಡಿತಕ್ಕೊಳಗಾಗುವ ಸಂಭವ ಇಲ್ಲದಿಲ್ಲ. ಗಾಳಿಯ ಮೂಲಕ ಒಂದು ಮಗುವಿನಿಂದ ಮತ್ತೊಂದು ಮಗುವಿಗೆ ತಗುಲುವ ನಾಯಿಕೆಮ್ಮಿಗೆ ರೋಗಾಣುಗಳೇ ಕಾರಣ.

## ಧನುರ್ವಾಯು

ನಮಗೆ ಗಾಯಗಳಾಗುವುದು ಎಷ್ಟು ಸಹಜವೋ ಗಾಯಕ್ಕೆ ಧೂಳು ಸೇರುವುದೂ ಅಷ್ಟೇ ಸ್ವಾಭಾವಿಕ. ಮಣ್ಣಿನಲ್ಲಿ ಯಥೇಚ್ಛವಾಗಿರುವ 'ಟೆಟನೈ' ರೋಗಾಣುಗಳು ಗಾಯವನ್ನು ಹೊಕ್ಕು ಅಲ್ಲಿನ ಆಮ್ಲಜನಕರಹಿತ ವಾತಾವರಣದಲ್ಲಿ ಬೆಳೆಯುತ್ತಾ 'ಟೆಟನೋಟಾಕ್ಸಿನ್' ಎಂಬ ವಿಷವನ್ನು ಉತ್ಪಾದಿಸುತ್ತವೆ. ಇದು ಮಾನವನಿಗೆ ಗೊತ್ತಿರುವ ವಸ್ತುಗಳಲ್ಲೇ ಅತ್ಯಂತ ಘೋರವಾದ ವಿಷ. ಈ ವಿಷ ನರವ್ಯೂಹದಲ್ಲಿ ಸೇರಿತೆಂದರೆ ಮಾಂಸಖಂಡಗಳ ಮೇಲೆ ನರಗಳಿಗಿರುವ ಹತೋಟಿಯೇ ತಪ್ಪುತ್ತದೆ. ಆಗ ರೋಗಿಗೆ ಬಾಯಿ ತೆರೆಯುವುದೂ ಕಷ್ಟವಾಗುತ್ತದೆ. ಇಂತಹ ಸ್ಥಿತಿಯಲ್ಲಿ ಪಾರ್ಶ್ವಘಾತವಾಗುತ್ತದೆ. ದೇಹ ಬಿಲ್ಲಿನಂತೆ ಬಾಗುತ್ತದೆ. ಸಕಾಲದಲ್ಲಿ ಅತ್ಯುತ್ತಮ ಚಿಕಿತ್ಸೆ ದೊರೆಯದಿದ್ದಲ್ಲಿ ಉಸಿರಾಟದ ಮಾಂಸಖಂಡಗಳ ನಿಷ್ಕ್ರಿಯತೆಯಿಂದಾಗಿ ಸಾವು ಸಂಭವಿಸುತ್ತದೆ.

ಪ್ರಪಂಚದಲ್ಲಿಂದು ಧನುರ್ವಾಯುವೊಂದರಿಂದಲೇ ಪ್ರತಿವರ್ಷ ಹತ್ತು ಲಕ್ಷ ಜನ ಸಾಯುತ್ತಾರೆ. ಇವುಗಳಲ್ಲಿ ಹಸುಳೆಗಳದೇ ಸಿಂಹಪಾಲು. ಹಿಂದೆ

ಯುದ್ಧಗಳಲ್ಲಿನ ಗಾಯಾಳುಗಳಲ್ಲಿ ಬಹುಪಾಲು ಜನ ಧನುರ್ವಾಯುವಿಗೆ ಬಲಿಯಾಗುತ್ತಿದ್ದು ಆಡುಭಾಷೆಯಲ್ಲಿ 'ನಂಜು' ಎಂದೇ ಕರೆಯಲ್ಪಡುವ ಧನುರ್ವಾಯುವಿಗೆ ಶುಚಿತ್ವವಿಲ್ಲದ ಹರಿಗೆ, ಗಾಯಗಳ ಬಗೆಗಿನ ಅಲಕ್ಷ್ಯ ಶುಚಿತ್ವದ ಗಂಧವೂ ಗೊತ್ತಿಲ್ಲದವರಿಂದ ಕಿವಿ, ಮೂಗು ಚುಚ್ಚಿಸಿಕೊಳ್ಳುವುದು, ಹಚ್ಚೆ ಚುಚ್ಚಿಸಿಕೊಳ್ಳುವುದು, ಸುನ್ನತಿ ಮಾಡಿಸುವುದು, ಕಿವಿಯಲ್ಲಿ, ಬಾಯಲ್ಲಿ ಪಿನ್ನು, ಕಡ್ಡಿಗಳಂತಹ ಸಿಕ್ಕ ಸಿಕ್ಕ ವಸ್ತುಗಳನ್ನು

**ರೋಗಾಣುಗಳು**



ಪ್ಲೇಗ್



ಕ್ಷಯ



ಕಾಲರಾ



ಡಿಫ್ತೀರಿಯ



ಧನುರ್ವಾಯು

ಹಾಕುವುದು ಮುಖ್ಯ ಕಾರಣವಾಗಿವೆ.

ಕಂದಮ್ಮಗಳನ್ನು ಕೊರಗಿಸುವ ಮತ್ತು ಕೊಲ್ಲುವ ಡಿಫ್ತೀರಿಯ, ನಾಯಿಕೆಮ್ಮು ಧನುರ್ವಾಯು ಈ ಕಾಯಿಲೆಗಳ ವಿರುದ್ಧ ಸಮರ್ಥವಾದ ಪ್ರತ್ಯೇಕ ಲಸಿಕೆಗಳಿವೆ. ಮಗುವಿಗೆ ಮೂರು ಬಾರಿ ಚುಚ್ಚುವುದನ್ನು ತಪ್ಪಿಸಲೆಂದೇ ಈ ಎಲ್ಲಾ ಲಸಿಕೆಗಳನ್ನು ಒಗ್ಗೂಡಿಸಿ ಡಿ.ಪಿ.ಟಿ. ಲಸಿಕೆಯನ್ನು ತಯಾರಿಸಲಾಗಿದೆ.

ಮಗುವಿಗೆ ೬, ೧೦ ಮತ್ತು ೧೪ನೇ ವಾರದಲ್ಲಿ ಒಂದೊಂದು ಡಿ.ಪಿ.ಟಿ. ಲಸಿಕೆಯನ್ನು (೦.೫ ಮಿ.ಲೀ.) ಚುಚ್ಚಿಸುವುದರಿಂದ, ಮಗುವಿಗೆ ಈ ಮೂರು ಕಾಯಿಲೆಗಳಿಂದ ರಕ್ಷಣೆ ದೊರೆಯುತ್ತದೆ. ಹೆಚ್ಚಿನ ಸುರಕ್ಷೆಗಾಗಿ ಒಂದೂವರೆ ವರ್ಷ ಮತ್ತು ೫ನೇ ವಯಸ್ಸಿನಲ್ಲಿ ಅನುಕ್ರಮವಾಗಿ ಡಿ.ಪಿ.ಟಿ. ಮತ್ತು ಡಿ.ಟಿ. ಲಸಿಕೆಯನ್ನು ಕೊಡಿಸಬೇಕಾಗುತ್ತದೆ.

ವಯಸ್ಕರನ್ನೂ ಧನುರ್ವಾಯು ಪೀಡಿಸುತ್ತದೆ. ಧನುರ್ವಾಯು ವಿರೋಧಿ ಟಿ.ಟಿ. ಲಸಿಕೆಯನ್ನು ಅವರು ಇಚ್ಛಿಸಿದ ದಿನ, ಒಂದು ತಿಂಗಳ, ಅನಂತರ, ಆರು ತಿಂಗಳ ನಂತರ, ೧ ವರ್ಷದ ಅನಂತರ, ೫ ವರ್ಷದ ಅನಂತರ ಹೀಗೆ ಐದು ಇಂಜೆಕ್ಷನ್ ಪಡೆದು ಜೀವಮಾನವಿಡಿ ಅದರಿಂದ ರಕ್ಷಣೆ ಪಡೆಯಬಹುದು. ಗರ್ಭಿಣಿಯರು ಟಿ.ಟಿ. ಇಂಜೆಕ್ಷನ್ ತೆಗೆದುಕೊಂಡರೆ ಹೆರಿಗೆಯಲ್ಲಿ ನಂಜು ಆಗುವುದಿಲ್ಲ. ನವಜಾತ ಮಗುವಿಗೂ ಧನುರ್ವಾಯು ಉಂಟಾಗುವುದಿಲ್ಲ. ಮಣ್ಣಿನಲ್ಲಿ ದುಡಿಯುವ ಕೃಷಿಕರು ಟಿ.ಟಿ. ಲಸಿಕೆಯಿಂದ ರಕ್ಷಣೆ ಪಡೆವುದು ಅತ್ಯಗತ್ಯ.

## ದಡಾರಕ್ಕೆ - ಮೀಸಲ್ಸ್ ಲಸಿಕೆ

ದಡಾರ, ಗೊಬ್ಬರ, ಗಣಜಲು, ತಟ್ಟು, ಕೋರ, ಚಿಕ್ಕಮ್ಮ ಮುಂತಾದ ಹೆಸರುಗಳಿಂದ ಗುರುತಿಸಲ್ಪಡುವ ಈ ಜಾಡ್ಯಕ್ಕೆ ಕಾರಣವಾದದ್ದು ಮೀಸಲ್ಸ್ ವೈರಸ್. ಇದು ಗಾಳಿಯ ಮೂಲಕ ಹರಡುವುದಾದುದರಿಂದ ಮೂರು ವರ್ಷದೊಳಗಿನ ಲಸಿಕೆ ಪಡೆಯದ ಮಕ್ಕಳನ್ನು ಪೀಡಿಸುವ ಸಂಭವ ಹೆಚ್ಚು. ಶೀತ, ಕೆಮ್ಮು ನೆಗಡಿ, ಜ್ವರ, ಕೆಂಪಾದ ಕಣ್ಣು ಈ ಲಕ್ಷಣಗಳಿಂದ ಆರಂಭವಾಗಿ ಮೈತುಂಬಾ ರವೆಯಂತಹ ಚಿಕ್ಕ ಗುಳ್ಳೆಗಳು ಕಂಡನಂತರ ಕಾಯಿಲೆ ತಂತಾನೇ ಮಾಯವಾಗುತ್ತದೆ. ದಡಾರದ ಆಕ್ರಮಣಕ್ಕೆ ಸಿಕ್ಕ ಕೆಲಮಕ್ಕಳು ಅಸುನೀಗುವುದೂ ಉಂಟು. ಕೆಲ ಮಕ್ಕಳಿಗೆ ಬುದ್ಧಿಮಾಂದ್ಯ, ಕುರುಡು, ಕಿವುಡು ಮುಂತಾದ ಶಾಶ್ವತ ವೈಕಲ್ಯ ಉಂಟಾಗುವ ಸಂಭವವೂ ಉಂಟು. ದಡಾರದಿಂದ ಗುಣ ಹೊಂದಿದ ಕೆಲ ಮಕ್ಕಳು ಭೇದಿ, ನ್ಯುಮೋನಿಯಾ, ಕ್ಷಯ ಮುಂತಾದ ತೊಂದರೆಗಳಿಗೆ ಸುಲಭವಾಗಿ ತುತ್ತಾಗುತ್ತವೆ.

ಅದನ್ನು ತಪ್ಪಿಸುವ ಲಸಿಕೆಯೇ 'ಮೀಸಲ್ಸ್ ವ್ಯಾಕ್ಸಿನ್'. ಮಕ್ಕಳಿಗೆ ಸಾಮಾನ್ಯವಾಗಿ ದಡಾರ ಬರುವುದು ಒಂದೂವರೆ ವರ್ಷದ ವಯಸ್ಸಿನಲ್ಲಿ. ಆದುದರಿಂದ ಅದಕ್ಕೆ ಮೊದಲೆ-ಅಂದರೆ ಮಗುವಿಗೆ ೯ ತಿಂಗಳಾದ ತಕ್ಷಣ-ಒಂದು ಮೀಸಲ್ಸ್ ಲಸಿಕೆ ಇಂಜೆಕ್ಷನ್ನು ಕೊಡಿಸಬೇಕು. ದಡಾರ, ಮಂಗಬಾವು ಮತ್ತು ರುಬೆಲ ಈ ಮೂರು ರೋಗಗಳಿಂದ ಮಗುವನ್ನು

ರಕ್ಷಿಸಲು ಮಗುವಿಗೆ ಎಂ.ಎಂ.ಆರ್. ಲಸಿಕೆಯನ್ನು ಕೊಡಿಸುವುದು ಒಳ್ಳೆಯದು. ಏಕೆಂದರೆ ಮಂಗಬಾವು ಕೂಡ ಕೆಲವೊಮ್ಮೆ ಸಕ್ಕರೆ ಕಾಯಿಲೆ ಮತ್ತು ನಪುಂಸಕತ್ವಕ್ಕೆ ಕಾರಣವಾಗುತ್ತದೆ. ಗರ್ಭಿಣಿಯರಿಗೆ ರುಬೆಲ ತಗಲಿದರೆ ಹುಟ್ಟುವ ಮಗು ವಿಕಲಾಂಗವಾಗುವ ಸಂಭವ ಉಂಟು. ಹೀಗಾಗಿ ಹೆಣ್ಣು ಮಕ್ಕಳಿಗೆ ಎಂ.ಎಂ.ಆರ್. ಲಸಿಕೆ ಅತ್ಯಗತ್ಯ.

ಕ್ಷಯ, ಪೋಲಿಯೋ, ಡಿಫ್ತೀರಿಯ, ನಾಯಿಕೆಮ್ಮು ಧನುರ್ವಾಯು, ದಡಾರ ಈ ಆರು ಕಾಯಿಲೆಗಳು ಮಕ್ಕಳಿಗೆ ಮಾರಕವಾಗಿವೆ. ಈ ಎಲ್ಲ ಕಾಯಿಲೆಗಳನ್ನು ನಿರೋಧಿಸುವ ಲಸಿಕೆಗಳನ್ನು ಹುಟ್ಟಿದ ಒಂದು ವರ್ಷದೊಳಗಾಗಿ ಕೊಡಿಸಬೇಕು.

## ಕಾಲರ ಲಸಿಕೆ

ವೈದ್ಯರು ಅತ್ಯಂತ ಹೆಚ್ಚಾಗಿ ಅರ್ಥೈಸಿಕೊಂಡಿರುವ ಕಾಲರಾಕ್ಕೆ ಈಗ ಸರಳ ಪರಿಹಾರವಿದೆ. ಸೂಕ್ತ ಚಿಕಿತ್ಸೆಯಿದೆ. ಸ್ವಚ್ಛತೆಯ ಕ್ರಮಗಳನ್ನು ಅನುಸರಿಸುವ ಮೂಲಕ ಕಾಲರಾದಿಂದ ಪಾರಾಗಬಹುದು. ಆದರೂ ಇಂದು ಪ್ರಪಂಚದ ೩೫ ದೇಶಗಳಲ್ಲಿನ ೭೫ ಲಕ್ಷ ಜನ ಕಾಲರಾಕ್ಕೆ ಒಳಗಾಗುತ್ತಿದ್ದಾರೆ. ಲಕ್ಷಾಂತರ ಜನರು ಸಾಯುತ್ತಿದ್ದಾರೆ. ಹೀಗಾಗಿ ಕಾಲರಾದ ಭೀತಿ ಮಾನವನಿಂದ ಇನ್ನೂ ದೂರವಾಗಿಲ್ಲ.

ಕಲುಷಿತ ಆಹಾರ ಮತ್ತು ನೀರಿನೊಂದಿಗೆ ರೋಗಾಣುಗಳು ದೇಹ ಸೇರಿದ ಕೆಲವೇ ಗಂಟೆಗಳಲ್ಲಿ ಆರಂಭವಾಗುವ ವಾಂತಿ-ಭೇದಿ ನಿರಂತರವಾಗಿ ಮುಂದುವರೆದು ದೇಹದ ನೀರು, ಲವಣದ ಅಂಶಗಳನ್ನು ಹೊರಹಾಕಿ ರೋಗಿಯನ್ನು ನಿತ್ರಾಣಗೊಳಿಸಿಬಿಡುತ್ತದೆ. ಸೂಕ್ತಚಿಕಿತ್ಸೆಯಿಂದ ಶೇ. ೯೯ ಜನರು ಗುಣಮುಖರಾಗುತ್ತಾರೆ.

ಕಾಲರಾಕ್ಕೆ ಕಾರಣವಾದ ರೋಗಾಣು ಕಂಡುಹಿಡಿಯಲ್ಪಟ್ಟ ಒಂದೇ ವರ್ಷದ ಅನಂತರ (೧೮೮೫)ಲಸಿಕೆಯೂ ದೊರಕಿದೆ. ಇಂದು ವ್ಯಾಪಕವಾಗಿ ಬಳಸಲಾಗುತ್ತಿರುವ ಕಾಲರಾ ಲಸಿಕೆ ಅಷ್ಟು ಪರಿಣಾಮಕಾರಿಯಾಗಿಲ್ಲ. ಈ ಲಸಿಕೆಯನ್ನು ತೆಗೆದುಕೊಂಡ ಅರ್ಧದಷ್ಟು ಜನರಿಗೆ ಮಾತ್ರ ೬ ತಿಂಗಳವರೆಗೆ ರಕ್ಷಣೆ ಸಿಗಬಲ್ಲದು. ಕಾಲರಾ ಲಸಿಕೆ ತೆಗೆದುಕೊಂಡ ಆರು ದಿನಗಳ ಅನಂತರವೇ ನಮಗೆ ರಕ್ಷಣೆ ಸಿಗುವುದು. ಆದುದರಿಂದ ಊರಿನಲ್ಲಿ ಕಾಲರಾ ಕಂಡ ನಂತರ ಲಸಿಕೆ ತೆಗೆದುಕೊಳ್ಳುವುದು ಅಷ್ಟು ಸಮಂಜಸವಲ್ಲ. ಕಾಲರಾಪೀಡಿತ ಪ್ರದೇಶಗಳಿಗೆ ಹೋಗುವವರು ಒಂದು ವಾರದ ಮುಂಚೆಯೇ ಕಾಲರಾ ಇಂಜೆಕ್ಷನ್ ತೆಗೆದುಕೊಳ್ಳಲಡ್ಡಿ ಇಲ್ಲ. ಆದರೂ ಬರಿ ಲಸಿಕೆಯನ್ನಷ್ಟೇ ನಂಬಿಕೊಳ್ಳದೆ ಆಹಾರ ಮತ್ತು ನೀರಿನ ಸ್ವಚ್ಛತೆಯ ಬಗೆಗೂ ಆದ್ಯತೆ ನೀಡಬೇಕು. ಪ್ರತಿದಿನ ಟೆಟ್ರಾಸೈಕ್ಲಿನ್ ಮಾತ್ರೆಗಳನ್ನು ನುಂಗಿ ಕೂಡ ಕಾಲರಾದಿಂದ ರಕ್ಷಣೆ ಪಡೆಯಬಹುದು.

## ಹುಚ್ಚು ನಾಯಿಕಡಿತಕ್ಕೆ -ರೇಬಿಸ್ ಲಸಿಕೆ

ಹುಚ್ಚುನಾಯಿಯ ಕಡಿತದಿಂದ ಬಂದ 'ರೇಬಿಸ್'ನಿಂದ ಬದುಕುಳಿದ

ಒಂದೂ ಉದಾಹರಣೆಯಿಲ್ಲ. ಸಾವನ್ನು ತಂದೇ ತೀರುವ ಈ ಕಾಯಿಲೆಗೆ ಮದ್ದೇ ಇಲ್ಲ.

ನಮ್ಮ ದೇಶದಲ್ಲಿ ಪ್ರತಿವರ್ಷ ಐದು ಲಕ್ಷಕ್ಕೂ ಹೆಚ್ಚು ಜನರು ನಾಯಿ ಕಡಿತಕ್ಕೆ ಲಸಿಕೆ ಪಡೆದು ಪ್ರಾಣ ಉಳಿಸಿಕೊಳ್ಳುತ್ತಾರೆ. ಕಚ್ಚಿದ್ದು ಹುಚ್ಚು ನಾಯಿಯಾಗಿದ್ದರೆ ಅಥವಾ ಕಚ್ಚಿದ ಹತ್ತು ದಿನದೊಳಗೆ ನಾಯಿ ಸತ್ತುಹೋದರೆ ಇಲ್ಲವೆ ಅಂತಹ ನಾಯಿಯ ಬಗೆಗೆ ನಿಗಾ ಇಡಲು ಅಸಾಧ್ಯವಾದರೆ ತಕ್ಷಣವೇ ನಾವು ರೇಬಿಸ್ ವಿರುದ್ಧ ಲಸಿಕೆ ಪಡೆದು ಬದುಕುಳಿಯಬಹುದು.

ಹುಚ್ಚುನಾಯಿಯ ಜೊಲ್ಲಿನಲ್ಲಿನ ರೇಬಿಸ್ ವೈರಾಣು ನಮ್ಮ ದೇಹ ಸೇರಿ, ನರವ್ಯೂಹದಲ್ಲಿ ನೆಲೆಯೂರಿ ಸಾವನ್ನು ತರುತ್ತದೆ.

ಹಲವು ವಿಧಗಳಲ್ಲಿ ರೇಬಿಸ್ ಲಸಿಕೆ ಲಭ್ಯ. ಎ.ಆರ್.ವಿ. ಎಂಬ ಲಸಿಕೆ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಸಿಗುತ್ತಿದ್ದು ಈ ಇಂಜೆಕ್ಷನ್ನುಗಳನ್ನು ಹೊಕ್ಕಳಿನ ಸುತ್ತಾ ಚುಚ್ಚಿಸಿಕೊಳ್ಳಬೇಕಾಗುತ್ತದೆ. ಗಾಯದ ತೀವ್ರತೆಗೆ ಅನುಗುಣವಾಗಿ ಒಂದು ದಿನವೂ ಬಿಡದೆ ೨ ರಿಂದ ೫ ಮಿಲಿ ಲೀಟರು ಪ್ರಮಾಣದಲ್ಲಿ ೭ ರಿಂದ ೧೪ ಇಂಜೆಕ್ಷನ್ ತೆಗೆದುಕೊಳ್ಳಲು ವೈದ್ಯರು ಶಿಫಾರಸು ಮಾಡುತ್ತಾರೆ. ರ‍್ಯಾಬಿಪ್ಯೂರ್ ಎಂಬ ಹೆಸರಿನ ಇನ್ನೊಂದು ಲಸಿಕೆ ಸ್ವಲ್ಪ ದುಬಾರಿಯಾದರೂ (ಒಂದು ಇಂಜೆಕ್ಷನ್‌ಗೆ ೨೫೦ ರೂ.) ಪ್ರಭಾವಶಾಲಿ. ಇದನ್ನು ತೋಳಿಗೆ ಚುಚ್ಚಿಸಿಕೊಳ್ಳಬಹುದು. ನಾಯಿ ಕಚ್ಚಿದ ತಕ್ಷಣ ೩, ೭, ೧೪, ೩೦ ಮತ್ತು ೯೦ನೇ ದಿನ ಹೀಗೆ ೬ ಇಂಜೆಕ್ಷನ್‌ಗಳನ್ನು ತೆಗೆದುಕೊಳ್ಳಬೇಕಾಗುತ್ತದೆ.

## ಪ್ಲೇಗ್ ಲಸಿಕೆ

ಈ ಶತಮಾನದ ಆದಿಯಲ್ಲಿ ೧.೨ ಕೋಟಿಗಿಂತ ಹೆಚ್ಚು ಜನರ ಬಲಿ ತೆಗೆದುಕೊಂಡ ಪ್ಲೇಗ್ ಈಗ ಹೇಳ ಹೆಸರಿಲ್ಲದಂತಾಗಿದೆ. ಒಂದು ವೇಳೆ ಈ ರೋಗ ಮರುಕಳಿಸಿದರೂ ಮೊದಲಿನ ಭಯವಿಲ್ಲ. ಏಕೆಂದರೆ ಪ್ಲೇಗನ್ನು ಪರಿಣಾಮಕರವಾಗಿ ಚಿಕಿತ್ಸಿಸುವ ಔಷಧಿ ಇದೆ. ಪ್ಲೇಗ್ ಲಸಿಕೆಯನ್ನು ಒಂದು ವಾರದ ಅಂತರದಲ್ಲಿ ಎರಡು ಬಾರಿ ತೆಗೆದುಕೊಳ್ಳಬೇಕು. ಮತ್ತೆ ಆರು ತಿಂಗಳಿಗೊಂದರಂತೆ ಲಸಿಕೆ ಚುಚ್ಚಿಸಿಕೊಂಡರೆ ಪ್ಲೇಗ್ ತಗಲುವುದಿಲ್ಲ. ಲಸಿಕೆ ತೆಗೆದುಕೊಂಡ ಒಂದು ವಾರದ ಅನಂತರವೇ ರಕ್ಷಣೆ ದೊರೆಯಲಾರಂಭಿಸುವುದು. ಆದುದರಿಂದ ಊರಿನಲ್ಲಿ ಪ್ಲೇಗ್ ಕಂಡ ನಂತರ ಲಸಿಕೆ ತೆಗೆದುಕೊಳ್ಳುವುದರಲ್ಲಿ ಅರ್ಥವಿಲ್ಲ.

## ಟೈಫಾಯಿಡ್ ಲಸಿಕೆ

ಇತ್ತೀಚೆಗೆ ಟೈಫಾಯಿಡ್ ಕಾಯಿಲೆಗೆ ಒಳಗಾಗುತ್ತಿರುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಮುಂದುವರೆದ ಕೆಲ ದೇಶಗಳಲ್ಲಿ ವರ್ಷಂಪ್ರತಿ ಹತ್ತು ಲಕ್ಷ ಜನರಲ್ಲಿ ಒಬ್ಬರಿಗೆ ಮಾತ್ರ ಟೈಫಾಯಿಡ್ ಬರಬಹುದು; ಭಾರತದಲ್ಲಿ ಪ್ರತಿ ನೂರು ಜನರಲ್ಲಿ ಮೂವರಿಗಾದರೂ ಟೈಫಾಯಿಡ್ ತಗಲಬಹುದು. ಕಲುಷಿತಗೊಂಡ ನೀರು, ಆಹಾರದ ಸೇವನೆಯಿಂದ ಬರುವ ಟೈಫಾಯಿಡ್

ಅನ್ನು ಸುಲಭವಾಗಿ ನಿವಾರಿಸಿಕೊಳ್ಳಬಹುದು. ಕಾಯಿಲೆ ಬಂದ ಅನಂತರವೂ ಉತ್ತಮ ಔಷಧಿಯಿಂದ ವಾಸಿ ಮಾಡಿಕೊಳ್ಳಬಹುದು. ಟೈಫಾಯಿಡ್ ಬಾರದಂತೆ ತಡೆಯುವ ಟಿ.ಎ.ಬಿ. ಲಸಿಕೆಯೂ ಇದೆ. ಇಂಜೆಕ್ಷನ್ನನ್ನು ಆರು ವಾರದ ಅಂತರದಲ್ಲಿ ಎರಡು ಬಾರಿ ತೆಗೆದುಕೊಂಡರೆ ೩ ವರ್ಷದವರೆಗೆ ರಕ್ಷಣೆ ಸಿಗುತ್ತದೆ. ರಕ್ಷಣೆಯನ್ನು ಮುಂದುವರೆಸಿಕೊಳ್ಳಲು ಪ್ರತಿ ಮೂರು ವರ್ಷಕ್ಕೊಮ್ಮೆ ಒಂದು ಇಂಜೆಕ್ಷನ್ನು ತೆಗೆದುಕೊಳ್ಳಬೇಕಾಗುತ್ತದೆ.

ಟೈಫಾಯಿಡ್ ವ್ಯಾಕ್ಸಿನ್ ತೆಗೆದುಕೊಳ್ಳುವಾಗ ಆಗುವ ನೋವನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ ಈಗ ಟೈಫಾಯಿಡ್ ಲಸಿಕೆಯನ್ನು ಕ್ಯಾಪ್ಸ್ಯೂಲ್ ರೂಪದಲ್ಲಿ ತಯಾರಿಸಲಾಗಿದೆ. ಅದನ್ನು ದಿನ ಬಿಟ್ಟು ದಿನಕ್ಕೊಂದರಂತೆ ೩ ಸಾರಿ ಸೇವಿಸಿದರೆ ಮೂರು ವರ್ಷಗಳವರೆಗೆ ರಕ್ಷಣೆ ದೊರೆಯುತ್ತದೆ.

### ಜಾಂಡೀಸ್ ಲಸಿಕೆ

ಏಯ್ಡ್ಸನಂತೆಯೇ ರಕ್ತ ಮತ್ತು ಲೈಂಗಿಕವಾಗಿ ಹರಡುವ ಜಾಂಡೀಸ್‌ಗೆ (ಕಾಮಣಿ, ಕಾಮಾಲೆ) ಹೆಪಟೈಟಿಸ್-ಬಿ ವೈರಸ್ ಕಾರಣವಾಗಿದೆ. ಇದರಿಂದ ರಕ್ಷಣೆ ಪಡೆಯಲು ಎಂಜಿರಿಕ್ಸ್-ಬಿ ಲಸಿಕೆಯ ಇಂಜೆಕ್ಷನ್ (ಒಂದು ಸಿ.ಸಿ.) ಅನ್ನು ಮೂರು ಬಾರಿ (ಮೊದಲ ದಿನ, ಒಂದು ತಿಂಗಳ ಅನಂತರ, ಆರು ತಿಂಗಳ ಅನಂತರ) ತೆಗೆದುಕೊಳ್ಳಬೇಕು. ಹೆಚ್ಚಿನ ರಕ್ಷಣೆಗೆ ಪ್ರತಿ ೩ ವರ್ಷಕ್ಕೆ ಒಂದು ಸಾರಿ ಇಂಜೆಕ್ಷನ್ ಮಾಡಿಸಿಕೊಳ್ಳಬೇಕು.

ಲೇಖನದ ಮಿತಿಯನ್ನರಿತು ಇಲ್ಲಿ ಕೆಲವೇ ಲಸಿಕೆಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ಲಸಿಕೆಗಳ ಲೋಕ ದೊಡ್ಡದು. ಫ್ಲೂ, ಮಿದುಳು ಜ್ವರ, ಕ್ಯಾಸನೂರು ಕಾಡಿನ ಕಾಯಿಲೆ ಮುಂತಾದ ಕಾಯಿಲೆಗಳಿಗೂ ಸೂಕ್ತ ಲಸಿಕೆಗಳಿವೆ. ಮಲೇರಿಯಾ, ಸಿಫಿಲಿಸ್, ಏಯ್ಡ್ಸ್, ಕುಷ್ಠ ಮತ್ತಿತರ ಅಂಟುಜಾಡ್ಯಗಳಿಗೂ, ಕ್ಯಾನ್ಸರ್‌ನಂತಹ ರೋಗ ಮತ್ತು ಗರ್ಭನಿಯಂತ್ರಣಕ್ಕೆ ಲಸಿಕೆಗಳನ್ನು ಆವಿಷ್ಕರಿಸುವ ಪ್ರಯತ್ನಗಳು ನಡೆದಿವೆ. ಇನ್ನು ಕೆಲವಾರು ವರ್ಷಗಳಲ್ಲಿ ಹೃದಯಾಘಾತ, ಸಕ್ಕರೆ ಕಾಯಿಲೆ, ಜಂತುರೋಗಗಳಿಗೂ ಲಸಿಕೆ ದೊರೆತರೂ ಅಚ್ಚರಿಯೆನಿಸದು. ಆಹಾರ ಮತ್ತು ನೀರಿನ ಮೂಲಕ ಹರಡುವ ಕಾಲರಾ, ಟೈಫಾಯಿಡ್‌ನಂತಹ ರೋಗಗಳನ್ನು ಸ್ವಚ್ಛತೆಯ ಕ್ರಮಗಳನ್ನು ಕೈಗೊಳ್ಳುವ ಮೂಲಕ ಎದುರಿಸಬಹುದು. ಇವುಗಳ ಚಿಕಿತ್ಸೆಗೆ ಉತ್ತಮೋತ್ತಮ ಔಷಧಿಗಳೂ ಇವೆ. ಹೀಗಾಗಿ ಕಾಲರಾ, ಟೈಫಾಯಿಡ್, ಮತ್ತಿತರ ಲಸಿಕೆಗಳು ತಮ್ಮ ಪ್ರಾಮುಖ್ಯವನ್ನು ಕಳೆದುಕೊಳ್ಳುತ್ತಿವೆ. ಇದಕ್ಕೆ ವಿರುದ್ಧವಾಗಿ ಮಕ್ಕಳನ್ನು ಮಾರಕರೋಗಗಳಿಂದ ರಕ್ಷಿಸುವ ಲಸಿಕೆಗಳು ತಮ್ಮ ಮಹತ್ವವನ್ನು ಹೆಚ್ಚಿಸಿಕೊಂಡಿವೆ. ಔಷಧಿಯೇ ಇಲ್ಲದ ವೈರಸ್ ರೋಗಗಳನ್ನು (ಪೋಲಿಯೋ, ಹೆಪಟೈಟಿಸ್-ಬಿ (ಜಾಂಡೀಸ್), ರೇಬಿಸ್) ಅಡ್ಡಿಪಡಿಸಲು ಈಗ ಇರುವ ಒಂದೇ ದಾರಿಯೆಂದರೆ ಲಸಿಕೆಗಳಿಗೆ ಮೊರೆ ಹೋಗುವುದೇ ಆಗಿದೆ.

ಈಗ ಲಸಿಕೆಗಳನ್ನು ಹೇಗೆ ತಯಾರಿಸುತ್ತಾರೆ ಎಂಬುದನ್ನು ತಿಳಿದುಕೊಳ್ಳೋಣ. ಕಾಯಿಲೆಯನ್ನುಂಟು ಮಾಡುವ ರೋಗಾಣುಗಳನ್ನು

ಆಯ್ದು ಅವುಗಳನ್ನು ಪ್ರಯೋಗಾಲಯದಲ್ಲಿ ಮೊಟ್ಟೆ, ಕುರಿ, ಕೋಳಿ ಮುಂತಾದ ಪ್ರಾಣಿ ಅಥವಾ ಪ್ರಾಣಿಯ ಭ್ರೂಣಗಳಲ್ಲಿ ಬೆಳೆಸುತ್ತಾರೆ. ಹೀಗೆ ಕಮಾಯಿಸಿದ ಕಾಯಿಲೆಕಾರಕ ರೋಗಾಣುಗಳನ್ನು ಕೊಂದು ಇಲ್ಲವೆ, ಜೀವಂತವಾಗಿ ಶೇಖರಿಸಿ, ಅವುಗಳಲ್ಲಿನ ಕಾಯಿಲೆಕಾರಕ ಅಂಶಗಳನ್ನು ಕಿತ್ತೆಸೆದು, ವಿಷವಸ್ತುಗಳನ್ನು ನಾಶಗೊಳಿಸಿ, ಕೇವಲ ರೋಗನಿರೋಧಕ ಶಕ್ತಿಯನ್ನು ಉದ್ದೀಪನಗೊಳಿಸುವ ಅಂಶವಾದ 'ಆಂಟಿಜನ್'ಅನ್ನು ಉಳಿಸಿಕೊಳ್ಳಲಾಗುತ್ತದೆ. ಇದೇ ಲಸಿಕೆ.

ಇತ್ತೀಚಿಗೆ ಲಸಿಕೆಯನ್ನು ತಯಾರಿಸುವ ವಿಧಾನದಲ್ಲಿ ಕ್ರಾಂತಿಕಾರಕ ಬದಲಾವಣೆಗಳೂ ಆಗುತ್ತಿವೆ. ಅನೇಕ ರಸಿಕೆಗಳನ್ನು ಒಗ್ಗೂಡಿಸಿ ಒಂದೇ ಲಸಿಕೆಯನ್ನು ತಯಾರಿಸಲಾಗುತ್ತಿದೆ (ಡಿ.ಪಿ.ಟಿ., ಎಂ.ಎಂ.ಆರ್.). ಲಸಿಕೆಗಳು ಇಂಜೆಕ್ಷನ್, ಬಾಯಿಯಲ್ಲಿ ಹಾಕುವ ದ್ರವ, ಮಾತ್ರೆ ಹಾಗೂ ಮೂಗಿಗೆ ಹನಿಸುವ (ಒರೆಸುವ) ತುಂತುರು ರೂಪದಲ್ಲೂ ಲಭ್ಯವಿವೆ. ಕೆಲ ಲಸಿಕೆಗಳು ಉಷ್ಣತೆಯ ವಾತಾವರಣದಲ್ಲಿ ತಮ್ಮ ಸಾಮರ್ಥ್ಯವನ್ನು ಕಳೆದುಕೊಂಡು ನಿಷ್ಪ್ರಯೋಜಕವಾಗುವುದರಿಂದ ಅವನ್ನು ತಯಾರಿಸುವಾಗ ಮತ್ತು ಸಾಗಿಸುವಾಗಿನಿಂದ ಹಿಡಿದು ಮನುಷ್ಯನ ದೇಹಕ್ಕೆ ತಲುಪಿಸುವವರೆಗೆ ಅವುಗಳನ್ನು ಮಂಜಿನಗಡ್ಡೆಯ ನಡುವೆ ಇರಿಸಿ ಅವುಗಳ ಉಷ್ಣತೆ ೨ ರಿಂದ ೮ ಡಿಗ್ರಿ ಸೆಂಟಿಗ್ರೇಡ್‌ನೊಳಗೆ ಇರುವಂತೆ ನೋಡಿಕೊಳ್ಳಬೇಕಾಗಿರುವುದು ಅತ್ಯಗತ್ಯ. ಮನುಷ್ಯರಿಗಿರುವಂತೆ ಪ್ರಾಣಿಗಳಿಗೂ ಲಸಿಕೆಗಳಿವೆ.

ಲಸಿಕೆಗಳನ್ನು ತೆಗೆದುಕೊಳ್ಳಲು ಯಾವುದೇ ನಿರ್ಬಂಧವಿಲ್ಲ. ಆದರೂ ಬಹಳ ಜ್ವರವಾಗಲಿ ಅಸ್ವಾಸ್ಥ್ಯವಾಗಲಿ ಇದ್ದರೆ ಕಾಯಿಲೆಯಿಂದ ಚೇತರಿಸಿಕೊಂಡ ನಂತರ ಲಸಿಕೆ ತೆಗೆದುಕೊಳ್ಳಬೇಕು. ಇಮ್ಯೂನೋ ಗ್ಲೋಬುಲಿನ್ ತೆಗೆದುಕೊಂಡ ಆರು ವಾರಗಳ ನಂತರವೇ ಲಸಿಕೆ ಪಡೆಯಬೇಕು. ಕೆಲ ಲಸಿಕೆಗಳನ್ನು ಗರ್ಭಿಣಿಯರು ಪಡೆಯುವಂತಿಲ್ಲವಾದರೂ ನಾಯಿ ಕಚ್ಚಿದಲ್ಲಿ ರೇಬಿಸ್ ಲಸಿಕೆ ಪಡೆದು ಜೀವ ಉಳಿಸಿಕೊಳ್ಳದೇ ಅನ್ಯಮಾರ್ಗವೇ ಇಲ್ಲ. ಗರ್ಭಿಣಿಯರು, ಸಕ್ಕರೆ ಕಾಯಿಲೆಯವರು, ವಯಸ್ಕರು, ಏಡ್ಸ್ ರೋಗಿ, ಮಲರೋಗದಿಂದ ನರಳುವವರು, ಕ್ಯಾನ್ಸರ್‌ಗೆ ಚಿಕಿತ್ಸೆ ಪಡೆಯುತ್ತಿರುವರು, ಹಾಲೂಡುವ ತಾಯಂದಿರು, ಅಲರ್ಜಿಯ ತೊಂದರೆ ಇರುವವರು ವೈದ್ಯರ ಸಲಹೆಯನ್ನು ಪಡೆದೇ ಲಸಿಕೆ ತೆಗೆದುಕೊಳ್ಳುವುದು ಅಗತ್ಯ.

ಎಷ್ಟೊಂದು ಕಾಯಿಲೆಗಳು! ಇವುಗಳಿಂದ ರಕ್ಷಣೆ ಪಡೆಯಲು ಎಷ್ಟೊಂದು ಲಸಿಕೆಗಳನ್ನು ಚುಚ್ಚಿಸಿಕೊಳ್ಳಬೇಕಾಗುತ್ತದಲ್ಲಾ; ಎಲ್ಲಾ ಕಾಯಿಲೆಗಳಿಂದಲೂ ರಕ್ಷಣೆ ಒದಗಿಸುವ ಒಂದೇ ಲಸಿಕೆ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತಲ್ಲ ಎಂದು ನೀವೆನ್ನಬಹುದು. ವಿಜ್ಞಾನಿಗಳು ಇಂತಹ ಒಂದು ರಾಮಬಾಣಕ್ಕಾಗಿಯೇ ಸತತವಾಗಿ ಪ್ರಯತ್ನಿಸುತ್ತಿದ್ದಾರೆ.

ಲಸಿಕೆಗಳನ್ನು ತೆಗೆದುಕೊಂಡ ಕೆಲವಾರು ದಿನಗಳ ಅನಂತರವೇ ನಮಗೆ ರಕ್ಷಣೆ ದೊರೆಯಲಾರಂಭವಾಗುವುದು. ಈಗಾಗಲೇ ಊರಿನಲ್ಲಿ

ಕಾಯಿಲೆಯೊಂದು ಪಿಡುಗಾಗಿ ಹರಡಿಬಿಟ್ಟಿದೆ. ನಮ್ಮ ದೇಹಕ್ಕೂ ಆಗಲೇ ರೋಗಾಣುಗಳು ಪ್ರವೇಶಿರಬಹುದೆಂಬ ಭೀತಿ ಇದೆ. ಇಂತಹ ಸಂದರ್ಭಗಳಲ್ಲಿ ಏನು ಮಾಡಬೇಕು? ಇದಕ್ಕೂ ಪರಿಹಾರವಿದೆ. ಸಿದ್ಧವಾದ ನಿರೋಧಕ ಶಕ್ತಿಯನ್ನು ದೇಹಕ್ಕೆ ತುಂಬುವುದೇ ಈ ಉಪಾಯದ ಗುಟ್ಟು.

ಈಗಾಗಲೇ ಲಸಿಕೆ ಪಡೆದ ಅಥವಾ ಸಾಕ್ಷಾತ್ ಕಾಯಿಲೆಯನ್ನನುಭವಿಸಿ ಗುಣಮುಖರಾಗುತ್ತಿರುವವರ ರಕ್ತದಲ್ಲಿ ರೋಗದ ವಿರುದ್ಧ ಹೋರಾಡುವ ಪ್ರತಿಜೀವಿಗಳು (ಆಂಟಿಬಾಡಿ) ಸಿದ್ಧವಿರುತ್ತವೆ. ಇಂತಹ ವ್ಯಕ್ತಿಗಳ ರಕ್ತವನ್ನು ಸಂಗ್ರಹಿಸಿ, ಅದರಲ್ಲಿನ ರೋಗನಿರೋಧಕ ಗುಣವುಳ್ಳ 'ಇಮ್ಯುನೋಗ್ಲೋಬ್ಯುಲಿನ್' ಪ್ರತ್ಯೇಕಿಸಿ ಸಂಗ್ರಹಿಸಿಟ್ಟಿರುತ್ತಾರೆ. ತತ್‌ಕ್ಷಣ ರಕ್ಷಣೆ ಬೇಕಾದವರಿಗೆ ಈ ಇಮ್ಯುನೋಗ್ಲೋಬ್ಯುಲಿನ್ ಚುಚ್ಚಿ ಅವರನ್ನು ರೋಗದ ಅಪಾಯದಿಂದ ರಕ್ಷಿಸಬಹುದು. ಕಾಮಾಲೆ, ದಡಾರ, ರೇಬಿಸ್, ಧನುರ್ವಾಯು, ಸರ್ಪಸುತ್ತು ಈ ಕಾಯಿಲೆಗಳ ವಿರುದ್ಧದ 'ಇಮ್ಯುನೋಗ್ಲೋಬ್ಯುಲಿನ್'ಗಳು ಇಂದು ಲಭ್ಯವಿವೆ. ಇಮ್ಯುನೋಗ್ಲೋಬ್ಯುಲಿನ್‌ಗಳು ನೀಡುವ ರಕ್ಷಣೆ ತಾತ್ಕಾಲಿಕ. ಇವನ್ನು ಬಳಸಿ ಬೀಸುವ ದೊಣ್ಣೆಯಿಂದ ತಪ್ಪಿಸಿಕೊಳ್ಳಲಡ್ಡಿಯಿಲ್ಲ. ದೀರ್ಘಕಾಲದ ರಕ್ಷಣೆಗಾಗಿ ಮತ್ತೆ ಲಸಿಕೆಗಳಿಗೆ ಮೊರೆ ಹೋಗಬೇಕಾಗುತ್ತದೆ. ತಾಯಿಯ ರಕ್ತದಲ್ಲಿ ಸಿದ್ಧವಾಗಿರುವ ಪ್ರತಿಜೀವಿಗಳು ಗರ್ಭದಲ್ಲಿರುವ ಮಗುವಿಗೂ ಸಾಗುತ್ತವೆ. ಮಗು ತನ್ನದೇ ಆದ ರೋಗನಿರೋಧಕ ಶಕ್ತಿಯನ್ನು ಬೆಳೆಸಿಕೊಳ್ಳುವವರೆಗೆ ತಾಯಿಯಿಂದ ಬಂದ ಪ್ರತಿಜೀವಿಗಳು ರಕ್ಷಣೆ ನೀಡುತ್ತವೆ. ಮೊಲೆಹಾಲು ಕೂಡ ಇಂತಹದೇ ಕಾರ್ಯವೆಸಗುತ್ತದೆ. ಇಮ್ಯುನೋಗ್ಲೋಬ್ಯುಲಿನ್‌ನ ಬೆಲೆ ಬಹಳ ಹೆಚ್ಚು. ಏಕೆಂದರೆ ಒಬ್ಬರಿಗೆ ಕೊಡಬೇಕಾದದ್ದು ಇಮ್ಯುನೋಗ್ಲೋಬ್ಯುಲಿನ್ ತಯಾರಿಸಲು, ರೋಗನಿರೋಧಕ ಶಕ್ತಿಯುಳ್ಳ ೧೦೦೦ ಜನರಿಂದ ರಕ್ತವನ್ನು ಸಂಗ್ರಹಿಸಬೇಕಾಗುತ್ತದೆ.

ಕೆಲವೊಮ್ಮೆ ಪ್ರಾಣಿಗಳಿಗೆ ಪ್ರತಿವಿಷವಸ್ತುಗಳನ್ನು ಪದೇ ಪದೇ ಚುಚ್ಚಿ ಅವುಗಳ ರಕ್ತದಲ್ಲಿ ಪ್ರತಿಜೀವಿಗಳನ್ನು ಸಮೃದ್ಧಗೊಳಿಸಿ, ಈ ರೋಗನಿರೋಧಕ ಶಕ್ತಿಯುಳ್ಳ ಪ್ರಾಣಿಯ ರಕ್ತರಸ (ಸೀರಂ)ವನ್ನು ತುರ್ತು ಸಂದರ್ಭಗಳಲ್ಲಿ ಮಾನವನಿಗೆ ಬಳಸುತ್ತಾರೆ. ಧನುರ್ವಾಯು, ಡಿಫ್ತೀರಿಯ, ರೇಬಿಸ್, ಬೊಟ್ಯುಲಿಸಮ್ (ವಿಷಾಹಾರ), ಗ್ಯಾಸ್, ಗ್ಯಾಂಗ್ರೀನ್ (ಕಾಲುಕೊಳೆವ ರೋಗ), ವಿಷದ ಹಾವಿನ ಕಡಿತಗಳ ತುರ್ತು ಚಿಕಿತ್ಸೆಗಾಗಿ ಹೈಪರ್ ಇಮ್ಯೂನ್ ಸೀರಂ ಅನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಬಹುದಾಗಿದೆ. ಸಾಮಾನ್ಯವಾಗಿ ಕುದುರೆಗಳನ್ನು ಬಳಸಿ ಹೈಪರ್ ಇಮ್ಯೂನ್ ಸೀರಂಅನ್ನು ತಯಾರಿಸಲಾಗುತ್ತದೆ. ಹೀಗಾಗಿ ಈ ಜೀವರಕ್ಷಕ ಔಷಧ ಒಮ್ಮೊಮ್ಮೆ ಕೆಲವರಿಗೆ ಒಗ್ಗದೆ ತೊಂದರೆಯಾಗುವುದೂ ಉಂಟು. ಹೀಗಾಗಿ ಇದನ್ನು ಪ್ರಯೋಗಿಸುವ ಮುನ್ನ ವೈದ್ಯರು ತುರ್ತು ಚಿಕಿತ್ಸೆಗೆ ಅಗತ್ಯವಾದ ಔಷಧಿಗಳನ್ನೆಲ್ಲಾ ಬದಿಯಲ್ಲೇ ಸಿದ್ಧವಾಗಿಟ್ಟುಕೊಂಡಿರುತ್ತಾರೆ.

ಲಸಿಕೆಗಳ ಮಹತ್ವವನ್ನು ಗಮನಿಸಿದಾಗ ಅವುಗಳಿಂದ ಉಂಟಾಗುವ ಕೆಲ

ಅಪರೂಪದ ತೊಂದರೆಗಳು ತೀರ ಗೌಣವಾಗಿಬಿಡುತ್ತವೆ. ಆದರೂ ಲೇಖನ ಪರಿಪೂರ್ಣವಾಗುವ ದೃಷ್ಟಿಯಿಂದ ಲಸಿಕೆಗಳಿಂದಾಗುವ ವಿಪತ್ತುಗಳ ಬಗೆಗೆ ಉಲ್ಲೇಖಿಸುವುದೂ ಅನಿವಾರ್ಯ.

ಲಸಿಕೆಗಳನ್ನು ತೆಗೆದುಕೊಂಡ ಒಂದೆರಡು ದಿನಗಳಿಂದ ಹಿಡಿದು ವಾರದವರೆಗೆ ಇಂಜೆಕ್ಷನ್ ಮಾಡಿದ ಜಾಗದಲ್ಲಿ ನೋವು, ಬಾವು, ಉರಿ ಇರುವುದಲ್ಲದೆ, ಒಂದೆರಡು ದಿನ ಜ್ವರ, ತಲೆನೋವು ಇರುವುದು. ಆದರೆ ಇವೆಲ್ಲಾ ತಂತಾನೇ ಮಾಯವಾಗಬಲ್ಲ ಕ್ಷಣಿಕ ಕಷ್ಟಗಳು.

ಲಸಿಕೆಗಳು ಕೆಲವರಿಗೆ ಒಗ್ಗದೆ ಅಲರ್ಜಿ ಆಗುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲವಾದರೂ ಇಂತಹ ಸಂದರ್ಭಗಳು ಬಹಳ ಅಪರೂಪ. ಪ್ರಾಣಿಗಳಿಂದ ತಯಾರಿಸಿದ ಲಸಿಕೆಗಳು ಕೆಲವೊಮ್ಮೆ ಮರಣಾಂತಕವಾಗಲೂಬಹುದು. ಹೀಗಾಗಿ ತುರ್ತು ಚಿಕಿತ್ಸೆಯ ಎಲ್ಲಾ ಸವಲತ್ತುಗಳಿರುವ ಸ್ಥಳಗಳಲ್ಲಿ ಮಾತ್ರ ಇಂತಹ ಲಸಿಕೆ-ಸೀರಂ ಪಡೆಯುವುದು ಸುರಕ್ಷಿತ. ಲಸಿಕೆ ಪಡೆದ ಹತ್ತು ಲಕ್ಷ ಮಕ್ಕಳಲ್ಲಿ ಒಂದು ಮಗುವಿಗೆ ದೌರ್ಬಲ್ಯವುಂಟಾಗಿ ಕಾಲು ಶಕ್ತಿಹೀನವಾಗುವುದೂ ಇದೆ. ಲಸಿಕೆಯನ್ನು ತಯಾರಿಸುವಾಗ, ಸಂಗ್ರಹಿಸಿರುವಾಗ, ಇಂಜೆಕ್ಷನ್ ಮಾಡುವಾಗ ಆದ ಪ್ರಮಾದದಿಂದ ಕೆಲವು ಸಣ್ಣ ಪುಟ್ಟ ತೊಂದರೆಗಳು, ಸಾವು-ನೋವುಗಳು ಉಂಟಾಗಬಹುದು. ಆದರೆ ಇಂತಹ ಅಪರೂಪದ ಸಂಗತಿಗಳನ್ನೇ ಹಿನ್ನಲೆಯಾಗಿಟ್ಟುಕೊಂಡು ಎಷ್ಟೋ ಜನ ತಮಗೆ, ತಮ್ಮ ಮಕ್ಕಳಿಗೆ ಲಸಿಕೆಗಳನ್ನು ಕೊಡಿಸಲು ಹಿಂದೇಟು ಹಾಕುತ್ತಿದ್ದಾರೆ. ಇದು ತಪ್ಪು. ತಮ್ಮನ್ನೂ ತಮ್ಮ ಮಕ್ಕಳನ್ನೂ ರಕ್ಷಿಸುವ ಲಸಿಕೆಗಳನ್ನು ಅಲಕ್ಷಿಸದೆ ಅವಲಂಬಿಸಬೇಕು. ಹೀಗಾದಾಗ ಮಾತ್ರ ನಮಗಷ್ಟೇ ಅಲ್ಲ, ಇಡೀ ದೇಶಕ್ಕೇ ಕಾಯಿಲೆಗಳಿಂದ ಮುಕ್ತಿ ದೊರೆಯುತ್ತದೆ.



Printed and Published by S.K. KATOTE on behalf of Laka Shikshana Trust at Samyukta Karnataka Press, Koppikar Road, Hubli-580 020. (Phone: 364303)
No. 2, Residency Road, Bangalore-560 025 (Phone: 2213265)

**Managing Editor: K. SHAMARAO**
**Registered with the Registrar of Newspaper for India under No. 3633/57**




# ಲೋಕ ಶಿಕ್ಷಣ ಟ್ರಸ್ಟ್
## ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | „ ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಶಿ ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | „ ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -”- | „ ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -”- | „ ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -”- | „ ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -”- | „ ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -”- | „ ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -”- | „ ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -”- | „ ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -”- | „ ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | „ ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | „ ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | „ ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | „ ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | „ ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | „ ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು

ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.

ಸಂಯುಕ್ತ ಕರ್ನಾಟಕ, ನಂ. ೨. ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

